# FIVE HUNDRED

# INDIAN PLANTS

THEIR USE IN MEDICINE AND THE ARTS

IN CANARESE

**SECOND EDITION**

ಸಹಸ್ರಾರ್ಧ

# ವೃಕ್ಷಾದಿಗಳ ವರ್ಣನೆ





MANGALORE
BASEL MISSION BOOK AND TRACT DEPOSITORY
1908

# PREFACE TO THE SECOND EDITION

The first edition of this volume was published in 1881 by MESSRS. C. STOLZ and G. PLEBST, two lay-agents of the Basel Missionary Society in Mangalore. It had grown from an alphabetical list of plants, published in the Canarese Almanacs (Mangalore) from 1868 to 1874, and contained, besides the vernacular and scientific names, the time of flowering, the habitat, and an indication of the medical properties and common uses. As there was and still is a demand for the book, the publishers have found it expedient to issue a second edition which they hope will also be favourably received by the public.

This second and revised edition maintains its former character generally. As regards the scientific nomenclature the names adopted by SIR JOSEPH HOOKER are now substitued for those in the first edition. As to the vernacular names, I trust that errors will be leniently dealt with; for there is no reliance whatever on the correctness of the names of plants or any other natural objects gained from most people. In support of this view I quote the REV. ALEXANDER KYD NAIRNE, late Bombay Civil Service, whose "Flowering Plants of Western India" (Bombay: The Education Society's Press, Byculla) was very useful to me in identifying the plants of this book. In the introduction to this book he says:—"In the case of very well-known trees or remarkable shrubs there are generally one or two names almost universally known; but as regards the rest, and I should say almost all herbs, the names are, I believe, not only very local, but also very indiscriminately applied. My experience is that very few people know the names of more than a very few plants, and that they apply the few names they know with great latitude; in fact, I have sometimes suspected a facile villager of making up names on the spot for the benefit of the questioner."

I have omitted some plants from the former list, but added others, which are very common in this part of India, so that the number now comes to 523, instead of 500.

The first index, pages 194 to 208, grouping the plants according to their uses, is new, and will, I hope, be found useful to Canarese readers.

The first part of the former (complete) edition containing a translation of the Linnæan system and an analytical table introductory to the natural orders of Indian plants, together with indexes showing how the plants described in the book are to be grouped under the different classes and orders, had to be omitted this time for several reasons. The labours of the REV. E. HÄRLIN and his fellow-workers in compiling those pages is, however, not lost; for, the botanical terms which were coined in Sanskrit and Canarese and introduced by them have been generally adopted by Canarese students of Botany and are now current.

MANGALORE,
*March 5th, 1908.*

***I. Pfleiderer.***

KEY TO THE

# TRANSLITERATION OF THE VERNACULAR NAMES.

| | | | | | | | |
|---|---|---|---|---|---|---|---|
| ಅ a | ಆ ā | ಇ i | ಈ ī | ಉ u* | ಊ ū | ಋ ṛi | |
| ಎ e | ಏ ē | ಐ ai | ಒ o | ಓ ō | ಔ ou | ಂ *am* (*an*) | ಃ a*h* |
| | | ಕ **ka** | ಖ **kha** | ಗ **ga** | ಘ **gha** | ಙ **ṅa** | |
| | | ಚ **ča** | ಛ **čha** | ಜ **ja** | ಝ **jha** | ಞ **ńa** | |
| | | ಟ **ṭa** | ಠ **ṭha** | ಡ **ḍa** | ಢ **ḍha** | ಣ **ṇa** | |
| | | ತ **ta** | ಥ **tha** | ದ **da** | ಧ **dha** | ನ **na** | |
| | | ಪ **pa** | ಫ **pha** | ಬ **ba** | ಭ **bha** | ಮ **ma** | |
| | | ಯ **ya** | ರ **ra** | ಲ **la** | ವ **va** | | |
| | | ಶ **ša** | ಷ **sha** | ಸ **sa** | ಹ **ha** | ಳ **ḷa** | ಕ್ಷ **ksha** |

*In Malayalam and Tulu also final half u = ṷ.

# ERRATA.

| | | | | | |
|---|---|---|---|---|---|
| No. | 6 | *for* | Sesbania var. coccinea | *read* | Sesb. grandiflora var. coccinea. |
| „ | 32 | „ | Gendarussa Adhadota | „ | G. adhatoda. |
| „ | 88 | „ | Barleria caristata | „ | B. cristata. |
| „ | 108 | „ | N. heteroclitum | „ | M. heteroclitum. |
| „ | 215 | „ | Mimosa ducis | „ | M. dulcis. |
| „ | 241 | „ | Clerodendrum | „ | Clerodendron. |
| „ | 438 | „ | Clerodendrum | „ | Clerodendron. |

# COMMON BOTANICAL WORDS

| English and Sanskrit | Tamil | Telugu | Canarese |
|---|---|---|---|
| | zh = ழ | | |
| Aerial root | vizhuṭu | ūḍa | ūḍe, bīḷu |
| Bark — valkala | paṭṭai | paṭṭa | paṭṭe, keṭṭe |
| Blossom, flower — pushpa | pū | puvvu | hūvu |
| Bud — kalikā | arumbu | mogga | mogge |
| Bulb, tuber, rhizome — kanda | kizhaṅgu | gaḍḍa | gaḍḍe |
| Bunch of fruit — stambaka | kulai | gola | gone |
| " " plantains | čirppu | čīpu | čīpu |
| Bush — gulma | putar | poda | pode |
| Cluster — guččha | kottu | gutti | gončalu |
| Creeper — latā | vaḷḷi, koḍi | tīge | baḷḷi |
| Flower *see Blossom* | | | |
| Flower-sheath — pushpapuṭa | pāḷai | | hombāḷe |
| Foliage — parṇa | tazhai | āku | ele |
| Fruit — phala | pazham | paṇḍu | haṇṇu |
| " (young) śalāṭu | piñju | pinde | kasugāyi |
| " (unripe) " | kāyī | kāya | kāyi |
| Garden — ārāma | tōṭṭam, tōpu | tōṭṭam | tōṭa |
| Grass — triṇa | pullu | kosuvu | hullu |
| Gum — niryāsa | pisin | banka | gōndu, aṇṭu |
| Heartwood | shēgu | čēva | čēgu |
| Herbaceous plant — oshadhi | pūṇḍu | mūlika | mūlike |
| Kernel — bījagarbha | paruppu | pappu | pappu |
| Leaf-bud — patrapuṭa | tulir | čiguru | čiguru |
| Nut — asthī | koṭṭai | ginza | vāṭe (?) |
| Oil — taila | yeṇṇey | nūne | eṇṇe |
| Pistil — strainakesara | alliṭṭal | dimme | hūdiṇḍu |
| Pith | shōru | davva | tiraḷu |
| Plant — udbhija | sheḍi | čeṭṭu | giḍa |
| Pollen — pushparajas | pūppoḍi | pūppōḍi | hūvina puḍi |
| Pulp | čatai | guzzu | gojju |
| Rind — čhali | tōl | tōlu | śippe |
| Root — mūla | vēr | vēru | bēru |
| Sapling — vṛiksha | pōṭṭu | antu | sasi |
| Seed — bīja | virai | vettu | bīja |
| Shoot — kisala | kozhundu | čiguru | čiguru |
| Shrub — kshupa | shirusedi | čeṭṭu | giḍa |
| Sprout — aṅkura | mulai | molaka | moḷe |
| Stem — kāmḷa | taṇḍu | kāda | kāṇu |
| Thorn — kaṇṭaka | muḷḷu | mullu | muḷḷu |
| Tree — vṛiksha | maram | mānu | mara |
| Twig — upaśākha | kazhi | čidugu | čidugu |

## WITH VERNACULAR EQUIVALENTS

| Malayalam | Hindustani | Konkani | Tulu |
|---|---|---|---|
| vizhuttu | pārambī | | |
| toli | čāl | sali | kette |
| pūvu | phūl | phūla | pūvu |
| moṭṭu | kalli | kaḷo (of a flower) | mugge |
| kizhaṅṅu | gaḍḍah | kāndo | kaṇḍe |
| *kula* | *khoshah* | *ghaḍāyu* | *kailu* |
| čippu | shīp | phoṇo | panne |
| paṭarpu | jhāri | jhāḍkūṭu | puḍel |
| kula | khoshah | jhollo | |
| vaḷḷi | bēl | vali | būru |
| paḷa | | puruṇṭo (of tero)<br>*poṇya (of areca)* | paḷe |
| tazha | patte | pana | ire |
| pazham | phal | phaḷa | parndu |
| ilaṅkaya | pinda | miḍi, kasugayi | kaskāyi |
| paččakayi | naphukta | | |
| tōṭam, parambu | bāg, bāgāyat | tōṭa | tōṭa |
| pullu | ghās | taṇa | *panti* |
| paša | gona | gōndu, aṇṭū | gōndu, aṇṭu |
| kātal | khair | tiraḷu | tirḷu |
| chēḷi | būṭi | mūlika | |
| parippu | čāruli | ghōṅgu | |
| taḷir | čugur | čiguru | čiguru |
| koṭṭai | gutli | | |
| eṇṇa | tel | tēla | eṇṇe |
| *shōru* | *gūdā, kīr* | *tiraḷu, beṇḍu* | tiralu |
| čeṭi | nabat | jhāḍa | dai |
| pūppoṭi | zirah | kēšara | pūpoḍi |
| kazhampu | maghz | piḷpo | bāve |
| toli | post | sāli | sōle, tippi |
| vēr | jar | paḷa | bēru |
| tai | shāk | sashi, jhaḍa | sasi |
| vittu | bīnj | bīyi | bīja, bittu |
| taḷir | kunpal | čiguru | čiguru |
| čeṭi | čohajhar | jhāḍa | |
| mula | morkā | moḷko, āṅkri | molke |
| taṇḍu | per | dēṇṭu | daṇṭu |
| muḷ | kāṇṭā | kāṇṭo | muḷḷu |
| *maram* | *jhār* | rūku | mara |
| čulli | phāṇṭā | ghello | gellu |

# ಸಹಸ್ರಾರ್ಧ

# ವೃಕ್ಷಾದಿಗಳ ವರ್ಣನೆ.

---

## 1. ಅಂಕೋಲೇ ಮರ (Sage-leaved Alangium).

**ತಮಿಳು:** ಅಂಕೋಲಮ್, ಅತಿಕೋವಮ್. **ತೆಲುಗು:** ಅಂಕೋಲಮು. **ತುಳು:** ಅಂಕೋಲೆದ ಮರ. **ಮಲೆಯಾಳ:** ಅಂಕೋಲಮ್, ಚೆಮ್ಮರಮ್, ಅರಿಞಿಲ್. **ಸಂಸ್ಕೃತ:** ಶೋಧನಮ್, ಅಂಕೋಲ, ಇತಿಕೋಲಮ್, ಅಂಕೋದ.

**ಹುಟ್ಟು:** ಮಲಬಾರ ಚೋಳಮಂಡಲ ತೀರಗಳಲ್ಲಿ. **ಪುಷ್ಪ:** ಚೈತ್ರ, ವೈಶಾಖ.

**ಉಪಯೋಗ:** ಔಷ: ಬೇರಿನ ಮತ್ತು ಚೆಕ್ಕೆಗಳ ರಸ ಬೇಗಿಗೂ ಕ್ರಿಮಿರೋಗಕ್ಕೂ ಆಗುತ್ತದೆ. ಎಲೆಗಳನ್ನು ಎಣ್ಣೆಯಲ್ಲಿ ಕಾಸಿ ಸೇಕ ಕೊಡುತ್ತಾರೆ. ಪುಡಿ ಮಾಡಿದ ಬೇರೂ ಬೀಜಗಳ ತೈಲವೂ ಸರ್ಪ ಕಚ್ಚಿದಲ್ಲಿ ಉಪಯೋಗ. ಸಾಧಾ: ಮರ ಗಟ್ಟಿಯೂ ನಯವೂ ಇದ್ದು ಕೆಲಸಕ್ಕೆ ಒಳ್ಳೇದಾಗಿರುತ್ತದೆ. ಹಣ್ಣು ತಿನ್ನುತ್ತಾರೆ; ಆದರೆ ಬೀಜಗಳ ಎಣ್ಣೆ ಕುಡಿಯುವಲ್ಲಿ ದೇಹಕ್ಕೆ ಅಪಾಯ ಬಾರದಂತೆ ಎಚ್ಚರವಿರಬೇಕು.

**Alangium decapetalum,** *Lam.*—A. Lamarckii, *Thwaites.*—(Order Cornaceæ.)

**Tamil:** Aṅkōlam, atikōvam. **Telugu:** Aṅkōlamu. **Canarese:** Aṅkōlē-mara. **Tulu:** Aṅkōleda-mara. **Malayalam:** Aṅkōlam, čemmaram, ariñil. **Sanskrit:** Šōdhanam, aṅkōla, itikōlam, aṅkōda.

## 2. ಅಂತರಗಂಗೇ ಗಿಡ.

*a)* ಅಂತರಗಂಗೇ ಗಿಡ (**Water-soldier**).

ತ. ಆಕಾಶತಾಮರೈ. ತೆ. ಅಂತರತಾಮರ, ನೀರಾಕು, ತೂಡಿಕೂರ. ಮ. ಅಂಬಿಲ್ಲಾಪ್ಪೊಂಬಿ, ನೀರ್ಪೋಳ, ಕುಡಪಾಯಲ್.

**ಹುಟ್ಟು:** ಕೆರೆಗಳಲ್ಲಿಯೂ ಸೀನೀರಿನ ಕೊಳಗಳಲ್ಲಿಯೂ. **ಪುಷ್ಪ:** ಚೈತ್ರ.

**ಉಪಯೋಗ:** ಔಷ: ಭಾವ ತಂಪು. ಎಲೆಗಳು ಮೂತ್ರಕಟ್ಟಿಗೂ ಮೂಲವ್ಯಾಧಿಗೂ, ಅನ್ನ ಮತ್ತು ತೆಂಗಿನ ಹಾಲಿನೊಡನೆ ಅಜೀರ್ಣರೋಗಕ್ಕೂ, ಗುಲಾಬಿ

ಸೀರು ಮತ್ತು ಸಕ್ಕರೆಯಲ್ಲಿ ಕೆಮ್ಮಿಗೂ ಶ್ವಾಸಕಾಸಕ್ಕೂ, ಬೇರು ವಿರೇಚನ ಮಾಡುವದಕ್ಕೂ ಉಪಯೋಗ.

**Pistia stratiotes,** *Lin.*—(Order Aroideæ.)

*Tam.* Ākāśatāmarai. *Tel.* Antaradāmara, nīrāku, tūḍikūra. *Can.* Antaragangē-giḍa. *Mal.* Aṅillāpponnu, nīrčīra, kuḍapāyal.

b) ಅಂತರಗಂಗೆ, ನೀರಾಟ (Duckweed).

**ಹುಟ್ಟು:** ಕೆರೆಗಳಲ್ಲಿಯೂ ಗದ್ದೆಗಳಲ್ಲಿಯೂ.

**ಉಪಯೋಗ:** ಇದು ನೀರಿನ ಮೇಲೆ ತೇಲಾಡಿ ನೀರು ಕೊಳತುಹೋಗದ ಹಾಗೆ ಮಾಡುತ್ತದೆ. ಬಾತುಕೋಳಿ ಮುಂತಾದ ಜಲಚರ ಪ್ರಾಣಿಗಳಿಗೆ ಒಳ್ಳೇ ಆಹಾರವಾಗಿರುತ್ತದೆ.

**Lemna globosa,** *Roxb.*—(Order Lemnaceæ.)

*Can.* Antaragange, nīrāṭa.

### 3. ಅಂದಿಪುನಾರು ಮರ.

ತೆ. ಕರಳಿ. ತು. ಅಂಡಿಪುನಾರ್. ಮ. ವಙ್ಕಣ.

**ಹುಟ್ಟು:** ಹಿಂದುಸ್ಥಾನದ ಎಲ್ಲಾ ಅಡವಿಸ್ಥಳಗಳಲ್ಲಿ. **ಪುಷ್ಪ:** ಪುಷ್ಯ, ಮಾಘ.

**ಉಪಯೋಗ:** ಔಷ: ಕಾಯಿ ಬೆಣ್ಣೆಯ ಸಂಗಡ ಬೇಯಿಸಿ, ಕುರಗಳು ಹಣ್ಣಾಗುವ ಹಾಗೆಯೂ ವೈಲಿಗೇ ವ್ರಣಗಳು ಗುಣವಾಗುವ ಹಾಗೆಯೂ ಲೇಪಿಸುವದು. ಸಾಧಾ: ಚೆಕ್ಕೆ ಚರ್ಮಹದಮಾಡಲಿಕ್ಕೂ, ಬೂದಿ ವಸ್ತ್ರತೊಳೆಯಲಿಕ್ಕೂ ಉಪಯೋಗ. ಬೂದಿಯನ್ನು ಬಣ್ಣಕ್ಕೆ ಹಾಕಿದರೆ, ಅದಕ್ಕೆ ಭದ್ರತೆ ಕೊಡುತ್ತದೆ. ಬೀಜ ತಿನ್ನಬಹುದು.

**Carallia integerrima,** *Dec.*—C. lucida, *Kurz.*—C. Ceylanica, *Arn.*—(Order Rhizophoreæ.)

*Tel.* Karaḷi. *Can.* Andipunāru-mara. *Tu.* Aṇḍipunāru. *Mal.* Vankaṇa.

### 4. ಅಂಬಟ(-ಟೆ), ಅಮಟೆ ಮರ (Hog-plum or Wild Mango).

ತ. ಕಾಟ್ಟುಮಾ. ತೆ. ಅಡವಿಮಾಮಿಡಿ, ಅಂಬಾಳಮು. ತು. ಅಂಬಡೆ. ಮ. ಅಂವಾಡಿಂ, ಅಂಬಡಿಂ. ಕೊಂ. ಅಂಬಾಡೊ. ಸಂ. ಆಮ್ರಾತಕ.

**ಹುಟ್ಟು:** ಹಿಂದುಸ್ಥಾನದಲ್ಲೆಲ್ಲಾ. **ಪುಷ್ಪ:** ಮಾಘ, ಫಾಲ್ಗುಣ.

**ಉಪಯೋಗ:** ಔಷ: ಬೇರು ಸೂತಿಕ ಸರಿಯಾಗುವ ಹಾಗೆ; ಸಿಪ್ಪೆ ಅಜೀರ್ಣರೋಗಕ್ಕೆ; ಎಲೆಗಳೂ ಕಾಯಿಯೂ ಕಿವಿನೋವಿಗೆ. ಸಾಧಾ: ಕಾಯಿ ತಿನ್ನಬಹುದು; ಎಳೆದಾಗಿರುವಾಗ ಉಪ್ಪಿನಕಾಯಿ ಮಾಡುತ್ತಾರೆ. ರಸ ಬೇಯಿಸಿ ಸಕ್ಕರೆ ಮಾಡುವದುಂಟು. ಮರಕ್ಕೆ ಗಾಯ ಮಾಡಿದರೆ, ಹಗಿನು ದೊರಕುತ್ತದೆ.

**Spondias mangifera,** *Willd.*—S. amara, *Lam.*—Evia amara, *Comm.*—Mangifera pinnata, *Kæn.*—(Order Anacardiaceæ.)

*Tam.* Kāṭṭumā. *Tel.* Aḍavimāmiḍi, ambāḷamu. *Can.* Ambaṭa(-ṭe), amaṭe-mara. *Mal.* Ambāḷam, ambaḷam. *Kon.* Āmbāḍo. *San.* Āmrātaka.

## 5. ಅಕ್ಕಿ, ಭತ್ತ, ನೆಲ್ಲು (Common Rice).

ತ. ಅರಿಶಿ. ತೆ. ಬಿಯ್ಯಮು, ಬೀಯಮು. ತು. ಅರಿ. ಮ. ಅರಿ. ಕೊಂ. ಮಹಾ. ತಾಂದುಲ ಹಿಂ. ಚಾವಲ್. ಸಂ. ತಂಡುಲ, ಶದಕ, ನೀಲಮಂಜರಿ, ಅಬ್ಧಿಕಾ [ಭತ್ತ=ವ್ರೀಹಿ.].

ಹುಟ್ಟು: ಕೃಷಿಹುಲ್ಲು.

ಉಪಯೋಗ: ಸಾಧಾ: ವಿಶೇಷ ಆಹಾರ. ಕಾಳು ತೂಕಕ್ಕೆ ಉಪಯೋಗ.

**Oryza sativa,** *Lin.*—(Order Gramineæ.)

*Tam.* Ariši. *Tel.* Biyyamu, bīyamu. *Can.* Akki, bhatta, nellu. *Tu.* Ari. *Mal.* Ari. *Kon.*, *Mah.* Tāndula. *Hind.* Čāval. *San.* Taṇḍula, šadaka, nīlamañjari, abdhikā.

## 6. ಅಗಚೆ, ಅಗಸೆ ಮರ.

ತ. ಆಚ್ಚಮ್, ಅಕತ್ತಿ. ತೆ. ಅವಿಸಿ, ಅನಗಾ ಅವಿಸೆಚೆಟ್ಟು, ಉಮ. ತು. ಅಗಸೆ. ಮ. ಅಗತ್ತಿ. ಹಿಂ. ಬಸ್ನ, ಸಾದಬಸ್ನ. ಸಂ. ಅಗಸ್ತ್ಯ, ಬೂಕ.

ಹುಟ್ಟು: ತೋಟಗಳಲ್ಲಿ. ಪುಷ್ಪ: ಫಾಲ್ಗುಣ, ಚೈತ್ರ.

ಉಪಯೋಗ: ಔಷ: ಸಿಪ್ಪೆ ಶರೀರಕ್ಕೆ ಬಲ ಕೊಡುವದು; ಅದರ ಕಷಾಯ ವಿರೇಚನ ಮಾಡುತ್ತದೆ, ಮೈಲಿಗೆ ರೋಗದಲ್ಲಿ ಸಹ ಉಪಯೋಗ. ಎಲೆಗಳು ಜ್ವರಕ್ಕೂ ಕಾಸಕ್ಕೂ, ಹೂವಿನ ರಸ ಮಂದ ಕಣ್ಣಿಗೂ ಒಳ್ಳೇದು. ಸಾಧಾ: ಎಲೆ ಹೂ ಕಾಯಿಗಳು ಪಲ್ಯ.

*a)* White flowered: **Sesbania grandiflora,** *Pers.*—Agati grandiflora, *Desv.*—Aeschynomene grandifl., *Roxb.*—Coronilla gr., *Willd.*—(Order Leguminosæ.)

*b)* Red flowered: **Sesbania var. coccinea.**

*Tam.* Aččam, akatti. *Tel.* Avisi, anagā avisečeṭṭu, uma. *Can.* Agače, agase-mara. *Tu.* Agase. *Mal.* Agatti. *Hin.* Basna, sāda-basna. *San.* Agastya, būka.

## 7. ಅಗರು, ಅಗಿಲುಗಂಧ (Agallochum or Aloe-wood).

ತು. ಹಗಲ್‌ಗಂಧ. ಮ. ಅಕಿಲ್. ಸಂ. ಅಗರು. ಅರಬ. ಕಲಂಬಕ್.

ಹುಟ್ಟು: ಉತ್ತರ ಹಿಂದುಸ್ಥಾನದಲ್ಲಿ. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ನೇತ್ರರೋಗಕ್ಕೆ ಉಪಯೋಗಿಸುತ್ತಾರೆ. ಸಾಧಾ: ಪರಿಮಳಕ್ಕಾಗಿ ತೇದು, ಮೈಗೆ ಲೇಪಿಸುತ್ತಾರೆ.

**Aquilaria Agallocha,** *Roxb.*—(Order Thymelæaceæ.)

*Can.* Agaru, agilugandha. *Tu.* Hagalgandha. *Mal.* Akil. *San.* Agaru. *Arab.* Kalambak.

## 8. ಅಗಳು (-ಳ, -ಳೀ) ಶುಂಠಿ, ಕಲ್ಲುಶುಂಠಿ.

ತು. ಕಲ್ಲ್‌ಸೂಂಟಿ. ಮ. ಕಾಟಿಂಚಿ. ಸಂ. ಕೋಲಾಂಜನ, ವಿರಣಮ್, ಕುಂಭಿಕಾ, ಆಹವ, ಅವಂತಿ.

ಹುಟ್ಟು: ಅಡವಿಗಳಲ್ಲಿ. ಪುಷ್ಪ: ಭಾದ್ರಪದ, ಆಶ್ವೀಜ.

ಉಪಯೋಗ: ಔಷ: ಭಾವ ಉಷ್ಣ. ಗಡ್ಡೆ ಹೊಟ್ಟೆನೋವಿಗೂ ಉಬ್ಬಸಕ್ಕೂ ಶ್ಲೇಷ್ಮ ಬಿಡಿಸುವದಕ್ಕೂ ಉಪಯೋಗಿಸುತ್ತಾರೆ. ಸಾಧಾ: ಪರಿಮಳ. ಗಡ್ಡೆಯಿಂದ ಉಪ್ಪಿನಕಾಯಿ ಮಾಡಿ, ಅದನ್ನು ಪುಡಿ ಮಾಡಿ ಪದಾರ್ಥಗಳಿಗೆ ಸಹ ಹಾಕುತ್ತಾರೆ.

**Zingiber zerumbet,** *Smith.*—Z. spurium, *Kœn.*—Dietrichia major, *Ræusch. Gisek.*—Amomum spur., *Gmel.*—A. sylvestre, *Poir.*—A. zerumbet, *Lin.*—(Order Scitamineæ.)

*Can.* Agaḷu-šuṇṭhi, kallu-šuṇṭhi. *Tu.* Kallṳsūṇṭi. *Mal.* Kāṭiṅči. *San.* Kōlāñjana, viraṇam, kumbhikā, āhava, avanti.

## 9. ಅಡಿಕೆ ಮರ (Areca or Betel-nut Palm).

ತ. ಕಮುಕು, ಕಿರಮುಕಮ್, ಪೂಗಮ್. ತೆ. ಕ್ರಮುಕಮು, ಖಪುರಮು. ತು. ಕಂಗ್. ಮ. ಕಮುಕು, ಕಟುಂಞ, ಪೂಗಂ. ಹಿಂ. ಸುಪಾರಿಕೇ ಝಾಡ್. ಕೊಂ. ಫೋಪಳ. ಸಂ. ಕ್ರಮುಕಮ್, ಖಪುರಮ್, ತಾಂಬೂಲಮ್, ಪೂಗವೃಕ್ಷ.

ಹುಟ್ಟು: ತಗ್ಗುಸೀಮೆಗಳಲ್ಲಿ. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ಭಾವ ಉಷ್ಣ. ಕಾಯಿ ಅರದು ಬಾಯಿಗೆ ಹಚ್ಚುವದು. ಬೇಯಿಸಿದ ಅದರ ರಸ ಅಜೀರ್ಣರೋಗಕ್ಕೂ ರಕ್ತಭೇದಿಗೂ ಆಗುತ್ತದೆ. ಸಾಧಾ: ಕಾಯಿಯನ್ನು ಅನೇಕರು ವೀಳ್ಯದ ಸಂಗಡ ಜಗಿಯುತ್ತಾರೆ. ಅದು ಬಣ್ಣ ಹಾಕುವದರಲ್ಲಿ ಉಪಯೋಗ. ಅದರ ಮಸಿಯಿಂದ ಹಲ್ಲು ಉಜ್ಜುವದು ಒಳ್ಳೇದು.

**Areca catechu,** *Lin.*—A. Faufel, *Gœrt.*—(Order Palmeæ.)

*Tam.* Kamuku, kiramukam, pūgam. *Tel.* Kramukamu, khapuramu. *Can.* Aḍike-mara. *Tu.* Kaṅgṳ. *Mal.* Kamuku, kaḷuñña, pūgam. *Hin.* Supārikē-jhāḍ. *Kon.* Phopaḷa. *San.* Kramukam, khapuram, tāmbūlam, pūgavṛiksha.

## 10. ಅಡುಂಬುಬಳ್ಳಿ, ಕೆಂಪು ಬಂಗಡಬಳ್ಳಿ (Goat's Foot Creeper).

ತ. ಅಡಮ್ಬು, ಅಡಪ್ಪಙಿಕ್ಕೊಡಿ. ತು. ಅಡುಂಬುಬೂರು. ಮ. ಚುಕನ ಅಟಂಪು, ಅಟುಂಪು.

ಹುಟ್ಟು: ಸಮುದ್ರತೀರದಲ್ಲಿ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಎಲೆ ಕಾಯಿಸಿ ತಿಕ್ಕಿದರೆ, ಕಠಿಣ ಹೊಟ್ಟೆನೋವಿಗೂ, ಅದರ ಕಷಾಯ ವಾತರೋಗಕ್ಕೂ ಆಗುತ್ತದೆ. ಸಾಧಾ: ನೀರು ಶುದ್ಧ ಮಾಡುತ್ತದೆ. ಕುದುರೆ ಆಡು ಮೊಲಗಳಿಗೆ ಒಳ್ಳೇ ಆಹಾರ.

**Ipomæa biloba,** *Forsk.*—I. maritima, *R. Br.*—I. bilobata, *Sweet, Don.*—I. Pes-Capræ, *Roth.*—Convolvulus bilobatus, *Roxb.*—C. maritimus, *Lamk.*—C. Pes-Capræ *Lin.*—(Order Convolvulaceæ.)

*Tam.* Aḍambu, aḍappaṅkoḍi. *Can.* Aḍumbu-baḷḷi, kempu baṅgaḍa-baḷḷi. *Tu.* Aḍumbu-būru. *Mal.* Čukanna aṭampu, aṭumpu.

## 11. ಅಡ್ಕೆಬೀಳು ಬಳ್ಳಿ.

ತು. ಆರ್ಕೆಬೂರು. ಮ. ಆನಪ್ಪರುವ.

ಉಪಯೋಗ: ಔಷ: ಬೇರನ್ನು ಜಜ್ಜಿ ಎಣ್ಣೇ ಸಮೇತ ತಲೆಗೆ ಹಚ್ಚಿದರೆ, ತಲೆ ಕಜ್ಜಿ, ಕುರು ಸಹ ಗುಣ.

**Pothos scandens,** *Lin.*—(Order Aroideæ.)

*Can.* Aḍkebīḷu-baḷḷi. *Tu.* Arkebūru. *Mal.* Ānapparuva.

## 12. ಅಣಿಲೆಕಾಯಿ, ಅಳಲೆಕಾಯಿ, ಕಾರೆಕಾಯಿ, ಹರ್ಡೆಕಾಯಿ ಮರ

## (Ink-nut Tree).

ತ. ಅಙ್ಕನಂ, ಕಡುಕಾಯ್ಮರಂ, ಕಡುಮರಂ. ತೆ. ಕರಕ್ಕಾಯ. ತು. ಅಣೆಲೆ ಮರ. ಮ. ಕಟುಕ್ಕಾ ಮರಂ. ಮಹಾ. ಓರಡಾ. ಹಿಂ. ಪಿಲೇಹರ್. ಸಂ. ಹರೀತಕಿ, ತ್ರಿಫಲ, ಪಂಚರಸಾ, ಕಾಯಸ್ಥಾ, ಪಥ್ಯಾ.

ಹುಟ್ಟು: ಪಶ್ಚಿಮತೀರ, ಬಂಗಾಳ. ಪುಷ್ಪ: ಫಾಲ್ಗುಣ, ಚೈತ್ರ.

ಉಪಯೋಗ: ಔಷ: ಕಾಯಿ ಮೂತ್ರರೋಗಕ್ಕೂ ಬೀಗಿಗೂ ಮೂಲವ್ಯಾಧಿಗೂ ಕಣ್ಣುನೋವಿಗೂ ಮಕ್ಕಳ ಭೇದಿಗೂ ಆಗುತ್ತದೆ. ಒಣಗಿದ ಕಾಯಿ ಮತ್ತು ಕಾಚು ಪುಡಿ ಮಾಡಿ ಎಣ್ಣೆಯಾಗಲಿ ಬೆಣ್ಣೆಯಾಗಲಿ ಕೂಡಿಸಿದರೆ, ನಂಜುವ್ರಣಗಳಿಗೆ ಒಳ್ಳೇ ಲೇಪವಾಗುತ್ತದೆ. ಭೇದಿ ಮಾಡುವ ಕಷಾಯವಾದರೆ, ಅಣಿಲೆಕಾಯಿ ಮತ್ತು ಸ್ವಲ್ಪ ಲವಂಗ ಇಲ್ಲವೆ ದಾಲ್ಚೀನಿ (ಜಜ್ಜಿ) ನೀರಲ್ಲಿಯಾಗಲಿ ಹಾಲಿನಲ್ಲಿಯಾಗಲಿ ಸುಮಾರು ೧೦ ನಿಮಿಷ ಕಾಸಿ ತಣ್ಣಗಾಗುವ ತನಕ ಇಟ್ಟುಬಿಟ್ಟು ಕುಡಿಯಬೇಕು; ಮಕ್ಕಳಿಗಾದರೆ, ಬೇರೆ ಜುಲಾಬು ಮಾಡಿದರೆ ಒಳ್ಳೇದು. ಸಾಧಾ: ಮಸಿ ಮಾಡುತ್ತಾರೆ. ಕಾಯಿಯ ಕಷಾಯದಿಂದ ಮೈತೊಳೆಯುತ್ತಾರೆ; ಅದು ಬಣ್ಣಕ್ಕೆ ಸಹ ಉಪಯೋಗ. ಮರ ಕೆಲಸಕ್ಕೆ ಬರುತ್ತದೆ.

**Terminalia Chebula,** *Retz.*—T. reticulata, *Roth.*—Myrobalanus Chebula, *Gært.*—(Order Combretaceæ.)

*Tam.* Aṅkanam, kaḍukāymaram, kaḍu-maram. *Tel.* Karakkāya. *Can.* Aṇilekāyi, aḷalekāyi, kārekāyi, harḍekāyi-mara. *Tu.* Aṇile-mara. *Mal.* Katukkāmaram. *Mahr.* Hiraḍā. *Hin.* Pilēhar. *San.* Harītaki, triphala, pañčarasā, kāyasthā, padhyā.

## 13. ಅತಸಿ ಗಿಡ (Common Flax).

ತ. ಆಳಿವಿರೈ. ಹಿಂ. ತಿಸಿ. ಸಂ. ಅತಸಿ.

**ಹುಟ್ಟು:** ನೀಲಗಿರಿಗಳಲ್ಲಿಯೂ ಉತ್ತರ ಹಿಂದುಸ್ಥಾನದಲ್ಲಿಯೂ. **ಪುಷ್ಪ:** ಮಾರ್ಗಶಿರ, ಪುಷ್ಯ, ಮಾಘ.

**ಉಪಯೋಗ:** ಔಷ: ಬೀಜ ಜುಲಾಬು ನಿಲ್ಲಿಸುವದಕ್ಕೂ, ಅಜೀರ್ಣ, ಕಾಸ, ಕರಳುಗಳ ಅಕ್ರಮ ಇವುಗಳಿಗೂ ಆಗುತ್ತದೆ. ಆದರೆ ಎಣ್ಣೆ ಮತ್ತು ಲಿಂಬೆರಸದ ಸಂಗಡ ಬೆಂದ ಹುಣ್ಣು ಸುಟ್ಟ ತೊಗಲಿಗೆ ಒಳ್ಳೇ ಲೇಪ. ಅತಸಿ ಬೀಜದ ಪೋಲ್ಟಿಸು ಮಾಡುವದು ಹ್ಯಾಗಂದರೆ: ಒಂದಿಷ್ಟು ಆ ಬೀಜವನ್ನು ಸಣ್ಣಗೆ ಹುಡಿ ಮಾಡಿ, ಅದು ಮೆತ್ತಾನ ಮುದ್ದೆ ಆಗುವಷ್ಟು ಅದರ ಮೇಲೆ ಕುದಿಯುವ ನೀರು ಹೊಯಿದು, ಚನ್ನಾಗಿ ನಾದಿ, ನಾರುವಸ್ತ್ರದ ತುಂಡಿನ ಮೇಲೆ ಹಾಸಿ, ಹುಣ್ಣಿನ ಮೇಲೆ ತಡಿಯಲಿಕ್ಕೆ ಕೂಡುವಷ್ಟು ಬಿಸಿಯಾಗಿ ಕಟ್ಟಬೇಕು. ಹುಣ್ಣಿನಿಂದ ಕೀವು ಸೋರುತ್ತಾ ನಾತ ಹುಟ್ಟಿದ ಹಾಗೆ ಪೋಲ್ಟಿಸು ಬದಲಿಸುತ್ತಿರಬೇಕು. ಸಾಧಾ: ಎಣ್ಣೆ ದೀಪಕ್ಕೆ ಆಗುತ್ತದೆ; ಅದನ್ನು ಕಾಸಿದರೆ, ಮರದ ಕೆಲಸಕ್ಕೆ ಒಳ್ಳೇ ಲೇಪವಾಗುವದು. ನಾರು ಹಗ್ಗ ಸಣಬು ವಸ್ತ್ರಗಳನ್ನು ಮಾಡಲಿಕ್ಕೆ ಉತ್ತಮ.

**Linum usitatissimum,** *Lin.*—(Order Lineæ.)

*Tam.* Aḷivirai. *Can.* Atasi-giḍa. *Hin.* Tisi. *San.* Atasi.

## 14. ಅತ್ತೀ ಮರ (Country Fig Tree).

ತ. ಅತ್ತಿಮರಮ್, ಅದವು, ಆರೀ. ತೆ. ಅತ್ತಿಮಾನು, ಮೇಡಿ. ತು. ಅರ್ತಿಮರ. ಮ. ಅತ್ತಿ. ಸಂ. ಔದುಂಬರಮ್, ಕುಂಚರಃ, ಹರಿತಾಕ್ಷ, ಯಜ್ಞವೃಕ್ಷ.

**ಉಪಯೋಗ:** ಔಷ: ಬೇರಿನ ನೀರು ದೇಹಕ್ಕೆ ತಂಪು ಕೊಡುತ್ತದೆ. ಚಕ್ಕೆಯ ಕಷಾಯದಲ್ಲಿ ಕೂವೆಹಿಟ್ಟು ಹಾಕಿ ಅಂಬಲಿ ಮಾಡಿ ಉಂಡರೆ, ಉಷ್ಣಹರ, ರಕ್ತಸ್ರಾವ ಶಮನ, ಮೂತ್ರ ಶುದ್ಧಿಯಾಗುವದು. ಅದರ ಪುಡಿಯನ್ನು ಎಳ್ಳೆಣ್ಣೆಯಲ್ಲಿ ಕೂಡಿಸಿ, ಹಳೆ ಹುಣ್ಣುಗಳಿಗೆ ಹಚ್ಚುವದು ಒಳ್ಳೇದು. ಎಲೆಗಳನ್ನು ಪುಡಿ ಮಾಡಿ, ಜೇನು ಬೆರಸಿ, ಪಿತ್ತರೋಗಕ್ಕೆ ಕೊಡುತ್ತಾರೆ. ಸಾಧಾ: ಎಳೆ ಎಲೆಗಳು ಪಲ್ಯ; ದನಕ್ಕೆ ಹಾಲು ಹೆಚಿಸುತ್ತವೆ. ಹಣ್ಣು ತಿನ್ನಬಹುದು.

**Ficus glomerata,** *Roxb.*—F. racemosa, *Wall.*—(Order Urticaceæ.)

*Tam.* Attimaram, adavu, ārē. *Tel.* Attimānu, mēḍi. *Can.* Attī-mara. *Tu.* Arti-mara. *Mal.* Atti. *San.* Audumbaram, kuñčara*h*, haritāksha, yajñavṛiksha.

## 15. ಅನಾಸು, ಹನಾಸು, ಫರೆಂಗಿಹಲಸು (Pine-apple or Ananas).

ತ. ತೆ. ಪರಂಗಿತಾಳೈ. ತು. ಪರೆಂಗಿಪೆಲಕಯಿ. ಮ. ಅನನಾಸ್, ಕೈತಚಕ್ಕ, ಕಪ್ಪಚಕ್ಕ. ಕೊಂ. ಅವನಾಸ.

ಹುಟ್ಟು: ನೆಟ್ಟು ಬೆಳಿಸುತ್ತಾರೆ. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ಹಸಿ ಕಾಯಿಯ ರಸ ಕ್ರಿಮಿ ಹೊರಡಿಸಿ ಮೂತ್ರಶೋಧನೆ ಮಾಡುತ್ತದೆ; ಹೆಣ್ಣುಮಕ್ಕಳು ಅದನ್ನು ಉಪಯೋಗಿಸಬಾರದು. ಸಾಧಾ: ಹಣ್ಣು ಬಹು ರುಚಿಯುಳ್ಳದ್ದು; ಹೆಚ್ಚು ತಿಂದರೆ, ಕೂಡಲೆ ರಕ್ತಾತಿಸಾರ ಹತ್ತಬಹುದು. ಎಲೆಗಳಲ್ಲಿ ಉತ್ತಮವಾದ ನಾರು ಸಿಕ್ಕುವದು.

**Ananassa sativa,** *Lin.*—(Order Bromeliaceæ.)

*Tam. Tel.* Parangitāḷay. *Can.* Anāsu, hanāsu, pharengihalasu. *Tu.* Parengipelakayi. *Mal.* Ananās, kaitačakka, kappačakka. *Kon.* Avanāsa.

## 16. ಅಪೂರಣಿ, ಬೂರಗದ ಮರ (Silk-cotton Tree).

ತು. ಆಲದ ಮರ. ಮ. ಪೂಳ.

ಹುಟ್ಟು: ಅಡವಿಸ್ಥಳಗಳಲ್ಲಿ. ಪುಷ್ಪ: ಮಾರ್ಗಶಿರ, ಪುಷ್ಯ.

ಉಪಯೋಗ: ಔಷ: ಅಂಟು ಸಂಬಾರಜೀನಸುಗಳ ಸಮೇತ ಕರಳುಗಳ ಆಕ್ರಮಕ್ಕೆ ಆಗುತ್ತದೆ. ಬೇರಿನ ಸಿಪ್ಪೆ ವಾಂತಿ ಮಾಡುತ್ತದೆ. ಅದು ಎಳವುವಾತಕ್ಕೆ ಒಳ್ಳೇದಂತೆ. ಸಾಧಾ: ಅರಳೆ ಹಾಸಿಗೆಗಳಿಗೆ ಹಾಕುವರು; ಹೂ ಒಣಗಿಸಿ ಪುಡಿ ಮಾಡಿದರೆ ಒಳ್ಳೇ ತಂಪು ಸೀಗೆ; ಅದನ್ನು ಕೆಲವು ಕಡೆಯಲ್ಲಿ ತಿನ್ನುತ್ತಾರೆ; ಅದರಿಂದ ಎಣ್ಣೆ ಸಹ ಮಾಡಬಹುದು.

*a)* Red-flowered: **Bombax malabaricum,** *Dec.*

*b)* White-flowered: **Eriodendron anfractuosum,** *Dec.*—Bombax pentandrum, *Linn., Roxb.*—(Order Malvaceæ.)

*Can.* Apūraṇi, būragada-mara. *Tu.* Ālada-mara. *Mal.* Pūḷa.

## 17. ಅಬ್ಬೊಲಿಗೆ.

ತು. ಅಬ್ಬೊಲಿಗೆ. ಕೊಂ. ಆಬೋಲಿ.

ಹುಟ್ಟು: ತೋಟಗಳಲ್ಲಿ ಬೆಳಿಸುತ್ತಾರೆ.

ಉಪಯೋಗ: ಸಾಧಾ: ಹೂವು ಮುಡಿದುಕೊಳ್ಳುತ್ತಾರೆ.

**Crossandra undulæfolia,** *Salisb.*—C. oppositifolia, *Nees.*—C. coccinea, *Dalz.*—(Order Acanthaceæ.)

*Can.* Abbolige. *Tu.* Abbolige. *Kon.* Āboli.

### 18. ಅಮೃತ, ಅಮರ, ಉಗನಿ ಬಳ್ಳಿ (Heart-leaved Moonseed).

ತ. ಅಮೃದವಲ್ಲಿ, ಶೀನ್ದಿಲ್, ಶಿನ್ದಿಲ್ಕೊಡಿ. ತೆ. ತಿಪ್ಪತೀಗೆ, ದೂಯುತೀಗೆ, ಜೀವಂತಿಕ. ತು. ಅಮೃತ ಬೂರು. ಮ. ಚಿಟ್ಟಾಮೃತಂ, ಪೈಯ್ಯಮೃತಂ. ಮಹಾ. ಗುಳವೇಲಿ. ಹಿಂ. ಗುಲಂಚಾ. ಸಂ. ಗುಲೂಚಿ, ಲಕ್ಷ್ಮಣ, ದೇವರಜ್ಜಿತ.

**ಹುಟ್ಟು:** ದಕ್ಷಿಣಹಿಂದುಸ್ಥಾನದಲ್ಲಿ, ಬಂಗಾಳದಲ್ಲಿ. **ಪುಷ್ಪ:** ಚೈತ್ರ, ಆಷಾಢ.

**ಉಪಯೋಗ:** ಔಷ: ಉತ್ತಮ ಅಗ್ನಿದೀಪಕ ಔಷಧ. ಇದರ ಸಮೂಲವನ್ನು ಬೇಸಿಗೆಕಾಲದಲ್ಲಿ ತೆಗಿಯಬೇಕು; ಯಾಕಂದರೆ ಆಗ ಅದಕ್ಕೆ ಒಳ್ಳೇ ಗುಣವಿರುವ ಕಹಿ ವಿಶೇಷ ಉಂಟು. ಅದನ್ನು ತಣ್ಣೀರಲ್ಲಿ ನೆನೆಹಾಕಿ, ಎರಡು ತಾಸು ವರೆಗಿಟ್ಟು, ಬಳಿಕ ಗಾಳಿಸಿ ತೆಗಿಯಬೇಕು. ಆ ನೀರು ದಿನಕ್ಕೆ ಮೂರಾವರ್ತಿ ಕುಡಿಯುವದು. ಇದಕ್ಕೆ ಅಷ್ಟೇ ಲವಂಗಚಕ್ಕೆಯ ಕಲ್ಕನೀರನ್ನು ಕೂಡಿಸಿದರೆ, ಇನ್ನಷ್ಟು ಹಿತಕರವಾಗುವದು. ಇದು ದೇಹದ ಅಶಕ್ತಿಗೂ ಅಜೀರ್ಣರೋಗಕ್ಕೂ ಸಾಧಾರಣ ಜ್ವರಕ್ಕೂ, ಅದರಿಂದಾಗಲಿ ಇತರ ಜ್ವರಗಳಿಂದಾಗಲಿ ಬರುವ ಅರುಚಿಗೂ ದೀರ್ಘಕಾಲದ ವಾತಕ್ಕೂ ಒಳ್ಳೇ ಫಲಕರವೇ. ಇದಲ್ಲದೆ ಗುಲಂಚವೆಂಬ ಬಳ್ಳಿಯ ಸತ್ವವು ವಿಷಜಂತುಗಳು ಕಚ್ಚಿದ್ದಕ್ಕೆ ವಿಶೇಷ ಔಷಧ. ಬಳ್ಳಿಯು ಅರಸಿನಮುಂದಕ್ಕೂ ಕರಳುಗಳ ಅಕ್ರಮಕ್ಕೂ ಮೂತ್ರರೋಗಕ್ಕೂ ಆಗುತ್ತದೆ. ಜಜ್ಜಿದ ಎಲೆ ಜೇನಿನೊಡನೆ ವ್ರಣಗಳಿಗೆ ಹಚ್ಚುವರು.

**Tinospora cordifolia,** *Miers.*—Cocculus cordifolius, *Dec.*—C. convolvulaceus, *Dec.*—C. verrucosus, *Wall.*—Menispermum cordifolium, *Willd.*—(Order Menispermaceæ.)

*Tam.* Amṛdavalli, šīndil, šindilkoḍi. *Tel.* Tippatīge, dūyutīge, jīvantika. *Can.* Amṛita, amara, ugani-baḷḷi. *Tu.* Amṛita-būru. *Mal.* Čiṭṭāmṛitam, payyamṛitam. *Mah.* Guḷavēli. *Hin.* Gulañčā. *San.* Gulūči, lakshmaṇa, devarajjita.

### 19. ಅರಡಾಳ, ಅಂಟರಳೆ, ಅಂಟವಾಳ, ಕೂಗಟಿ ಮರ (Soapnut Tree).

ತ. ಪೂವನ್ದಿ. ತೆ. ಕುಂಕುಡು, ಕೂಕುಡು, ಫೀನಿಲಮು. ತು. ನುರೆಕಾಯಿದ ಮರ. ಮ. ಚವ ಕಾಯಿಮರಂ. ಕೊಂ. ರಿಂಟೊ, ರಿಂಟ್ಯಾರೂಕು.

**ಹುಟ್ಟು:** ಮೈಸೂರ ಸೀಮೆ, ಪಶ್ಚಿಮತೀರಗಳಲ್ಲಿ. **ಪುಷ್ಪ:** ಆಶ್ವೀಜ, ಕಾರ್ತಿಕ.

**ಉಪಯೋಗ:** ಔಷ: ಬೀಜದ ಸಿಪ್ಪೆ ಶ್ವಾಸಕಾಸಕ್ಕೆ, ಅದನ್ನು ಜಜ್ಜಿದರೆ ಘಾಯಕ್ಕೆ ಒಳ್ಳೇದು. ಅಪಸ್ಮಾರ ಬಿದ್ದವರಿಗೆ ಬೀಜ ಬಾಯಿಯಲ್ಲಿಡುತ್ತಾರೆ. ಸಾಧಾ: ಬೀಜದ ಸಿಪ್ಪೆ ಕೂದಲನ್ನೂ ರೇಶ್ಮಿಯನ್ನೂ ಬೆಳ್ಳಿ ಭಂಗಾರಗಳನ್ನೂ ತೊಳಿಯುವದಕ್ಕೆ ಬರುತ್ತದೆ.

**Sapindus trifoliatus,** *Lin.*—S. emarginatus, *Vahl.*—(Order Sapindaceæ.)

*Tam.* Pūvandi. *Tel.* Kuṅkuḍu, kūkuḍu, phīnilamu. *Can.* Araḍāḷa, aṇṭaraḷe, aṇṭavāḷa, kūgaṭi-mara. *Tu.* Nurekāyida-mara. *Mal.* Čavakāyimaram. *Kon.* Riṇṭo, riṇṭyārūku.

## 20. ಅರಸಿನ ಉಮ್ಮತ್ತ, ಗೊಳಗೊಳಿಕೆ, ದತ್ತೂರಿ ಗಿಡ
## (Yellow Thistle or Mexican Poppy).

ತ. ಕುಡಿಯೋಟ್ಟಿ. ತೆ. ಬ್ರಹ್ಮದಂಡಿ. ಮ. ಪೊನ್ನುಮ್ಮತ್ತಂ. ದಖ್ಖ. ಫರೆಂಗಿದುತ್ತರ. ಸಂ. ಬ್ರಹ್ಮ ದಂಡಿ, ಬ್ರಹ್ಮರಾಕ್ಷಸ.

**ಹುಟ್ಟು:** ಪಶ್ಚಿಮ ಪೂರ್ವತೀರಗಳಲ್ಲಿ. **ಪುಷ್ಪ:** ಆಶ್ವೀಜ, ಕಾರ್ತಿಕ.

**ಉಪಯೋಗ:** ಔಷ: ಸ್ವಭಾವಿಕ ಗುಣ. ಭೇದಿ, ಶೂಲೆಹರ, ನಿದ್ರೆ ಕೊಡುವದು. ದಂಟು ಎಲೆಗಳ ರಸ ಕಣ್ಣುರೋಗಕ್ಕೂ ಮೂತ್ರದ ಅಕ್ರಮಕ್ಕೂ ಉಪಯೋಗ; ಆದರೂ ಕಣ್ಣಿಗೆ ರಸವನ್ನು ತಾಗಿಸದ ಹಾಗೆ ಜಾಗ್ರತೆ ಇರಬೇಕು. ಬೀಜ ವಾಂತಿ ಮಾಡಿಸಲಿಕ್ಕಾಗುತ್ತದೆ. ಅದರ ಎಣ್ಣೆ ತಲೆಗೆ ಹಚ್ಚಿದರೆ, ತಲೆನೋವು ಗುಣ. ೧೫—೨೦ ಬಿಂದುಗಳನ್ನು ಸಕ್ಕರೆಯಲ್ಲಿ ತಕ್ಕೊಂಡರೆ, ಹೊಟ್ಟೆನೋವು ಕ್ಷಣದಲ್ಲಿ ನಿಲ್ಲುವದು. ಅದೇ ಎಣ್ಣೆ ಚೆದರಿ ಹೋಗದ ಹುಣ್ಣುಗಳಿಗೆ ಹಚ್ಚುತ್ತಾರೆ. ಗಾಳಿಯಲ್ಲಿಟ್ಟು ದಪ್ಪ ಮಾಡಿದ ಸೊನೆ ಬೀಗಿಗೆ ಒಳ್ಳೇ ಗುಣಕರವಂತೆ. ಹೂ ಎದೆ ಗಂಟ್ಲುಗಳ ಉರಿಗೆ ಉಪಯೋಗ. ಬೀಜದ ಎಣ್ಣೆ ಚೆದರಿ ಹೋಗದ ಹುಣ್ಣುಗಳಿಗೆ ಹಚ್ಚುತ್ತಾರೆ.

**Argemone mexicana,** *Lin.*—(Order Papaveraceæ.)

*Tam.* Kuḍiyōṭṭi. *Tel.* Brahmadaṇḍi. *Can.* Arasina-ummatta, goḷagoḷike, dattūri-giḍa. *Mal.* Ponnummattam. *Dakh.* Pharengiduttara. *San.* Brahmadaṇḍi, brahmarākshasa.

## 21. ಅರಸಿನ, ಹಳದೀ ಗಿಡ (Long-rooted Turmeric).

ತ. ಮಞ್ಞಾಲ್, ಕಾಞ್ಚನಿ, ಅರಿಶನಮ್. ತೆ. ಪಸುಪು, ನಿಶ, ಹರಿದ್ರ. ತು. ಮಂಜಲ್ ದೈ. ಮ. ಮಞ್ಞಳ್. ಹಿಂ. ಹಲ್ದಿ. ಸಂ. ಕಾಂಚನ, ರಂಗಿಣಿ, ವರ್ಣವತಿ, ಗೌರಿ.

**ಹುಟ್ಟು:** ಸ್ವಲ್ಪ ಕಡಿಮೆ ಸಮಸ್ತ ಹಿಂದುಸ್ಥಾನದಲ್ಲಿ. **ಪುಷ್ಪ:** ಆಷಾಢದಿಂದ ಭಾದ್ರಪದದ ವರೆಗೆ.

**ಉಪಯೋಗ:** ಔಷ: ಚುರುಕು ಕೊಡುವ ಗುಣ. ಬೇರು ಹುಣ್ಣು ಗಾಯಗಳಿಗೂ ಹೊಟ್ಟೇ ಅಕ್ರಮಕ್ಕೂ ಭೇದಿಗೂ ಬೀಗಿಗೂ ವರಿಸೇ ಜ್ವರಕ್ಕೂ, ನೆಲ್ಲಿಕಾಯಿಾ ರಸ ಸೇರಿಸಿದರೆ ಕ್ರಮವಿಲ್ಲದ ಮೂತ್ರಕ್ಕೂ ಅರಸಿನಮುಂಡಕ್ಕೂ ಆಗುತ್ತದೆ. ಹಸಿ ಗಡ್ಡೇ ರಸ ಕ್ರಿಮಿರೋಗಕ್ಕೆ; ಗಡ್ಡೆಯನ್ನು ಕರಿದು ಬೇವಿನ ಎಣ್ಣೆಯಲ್ಲಿ ಅರೆದರೆ, ಮೂಗುಹುಣ್ಣಿಗೆ ಉಪಯೋಗ. ಅದರ ಪುಡಿ ಕಠಿಣ ವ್ರಣಗಳನ್ನು ಶುದ್ಧ ಮಾಡುತ್ತದೆ. ಸಾಧಾ: ಗಡ್ಡೆ ಸಂಬಾರಜೀನಸುಗಳಲ್ಲಿ ಸೇರುತ್ತದೆ; ಬಣ್ಣಕ್ಕೆ ಸಹ ಪ್ರಯೋಗಿಸುತ್ತಾರೆ. ಅದು ಹಸಿಯಾದರೆ, ಕೂವೆಹಿಟ್ಟಿನಂತೆ ಒಂದು ಹಿಟ್ಟು ಮಾಡಬಹುದು.

**Curcuma longa,** *Lin.*—Amomum curcuma, *Murr.*—(Order Scitamineæ.)

*Tam.* Mañčal, kāñčani, arišanam. *Tel.* Pasupu, niša, haridra. *Can.* Arisina, haḷadī-giḍa. *Tu.* Mañjal-dai. *Mal.* Maññaḷ. *Hin.* Haldi. *San.* Kāñčana, raṅgiṇi, varṇavati, gauri.

### 22. ಅರಸಿನ ಹೂ (Allamanda).

ಕೊ. ಕಣಂಗಣಿ, ಸೈತಾನಫೂಲ. ತು. ಸೈತಾನ ಪೂ.

**ಉಪಯೋಗ:** ಔಷ: ಎಲೆಗಳ ಕಲ್ಕನೀರು ಜುಲಾಬು ಮಾಡುತ್ತದೆ; ಮಿತಿ ಮೀರಿ ತೆಕ್ಕೊಂಡರೆ, ವಾಂತಿ ಮತ್ತು ಅತಿಸಾರ ಹತ್ತಲಿಕ್ಕೆ ಸಾಕು. ಸಾಧಾ: ಇದು ದೊಡ್ಡ ಅರಸಿನ ಬಣ್ಣದ ಹೂ ಬಿಡುವಂಥ ಅಲಂಕಾರದ ಬಳ್ಳಿ.

**Allamanda Anbletii,** *Pohl.*—A. grandiflora, *Lam.*—A. cathartica, *R. and S.*—Orelia grandifl., *Oubl.*—Echites salicifolia, *R. S.*—(Order Apocynaceæ.)

*Can.* Arasina-hū. *Kon.* Kaṇangaṇi, saitān-phūla. *Tu.* Saitāna-pū.

### 23. ಅರಳೀ, ಅರಸೇ, ಅಶ್ವತ್ಥ, ಪಿಪ್ಪಲ ಮರ (Sacred Peepul).

ತ. ಅರತಮರಮ್, ತಿರುಮರಮ್, ನಾರಾಯಣಮ್, ವನಕಣ್ಡಿ. ತೆ. ರಾವಿಚೆಟ್ಟು, ಚಲದಳಮು, ಬೋಧಿದ್ರುಮಮು. ತು. ಅತ್ತಸಮರ. ಮ. ಅರಯಾಲ್, ಅಶ್ವತ್ಥಂ. ಸಂ. ಪಿಪ್ಪಲಃ, (ವಿಶಲ, ಗುರು, ಗಜಪತ್ರ,) ಶ್ರೀವೃಕ್ಷಃ.

**ಉಪಯೋಗ:** ಔಷ: ಚಿಗುರುಗಳನ್ನು ಹಾಲಿನಲ್ಲಿ ಬೇಯಿಸಿ ಕುಡಿದರೆ, ಉಷ್ಣ ಶಮನವೂ ಭೇದಿಯೂ. ಬೀಜಗಳು ತಂಪು. ಸಾಧಾ: ಎಲೆಗಳು ರೇಶ್ಮಿಹುಳಕ್ಕೆ ಆಹಾರವಂತೆ. ಚೆಕ್ಕೆ ಎಲೆಗಳ ಕಷಾಯದಿಂದ ಚರ್ಮ ಹದ ಮಾಡುತ್ತಾರೆ.

**Ficus religiosa,** *Lin.*—Urostigma religiosum, *Miq.*—(Order Urticaceæ.)

*Tam.* Arašamaram, tirumaram, nārāyaṇam, vanakandi. *Tel.* Rāvičeṭṭu, čaladaḷamu, bōdhidrumamu. *Can.* Araḷī, arasē, ašvattha, pippala-mara. *Tu.* Attasamara. *Mal.* Arayāl, ašvattham. *San.* Pippala*h*, (višala, guru, gajapatra,) šrīvṛiksha*h*.

### 24. ಅಲಗು, ಗಲಕು ಹುಲ್ಲು.

**ಹುಟ್ಟು:** ಸಾಧಾರಣ. **ಪುಷ್ಪ:** ಆಷಾಢದಿಂದ ಭಾದ್ರಪದದ ವರೆಗೆ.

**ಉಪಯೋಗ:** ಸಾಧಾ: ಇದರ ದಂಟಿನ ಲೇಖನಿ ಮಾಡುತ್ತಾರೆ.

**Saccharum fuscum,** *Roxb.*—Eriochrysis fusca, *Trin.*—(Order Gramineæ.)

*Can.* Alagu, galaku-hullu.

### 25. ಅಲಮರ್ ಮರ.

ತ. ಅಲ್ಲಿ, ಕಾಯಾಮರಮ್, ಪೂವೈ. ತೆ. ಅಲ್ಲಿಚೆಟ್ಟು. ತು. ಮುಂಡಿ, ಅಲಿಮರ್. ಮ. ಕಾಯಾವ್.

**ಹುಟ್ಟು:** ಪಶ್ಚಿಮ ಪೂರ್ವ ಅಡವಿಗಳಲ್ಲಿ. **ಪುಷ್ಪ:** ಚೈತ್ರ, ವೈಶಾಖ.

**ಉಪಯೋಗ:** ಔಷ: ಎಲೆಗಳ ಕಷಾಯದಿಂದ ಕಣ್ಣು ತೊಳೆಯುತ್ತಾರೆ. ಮಿತಿ ಮೀರಿ ಸೂತಿಕ ರಕ್ತ ಹೋಗುವಲ್ಲಿ ಬೇರಿನ ಕಷಾಯ ಉಪಯೋಗ.

**Memecylon edule,** *Roxb.*—M. tinctorium, *Kœn.*—(Order Melastomaceæ.)

*Tam.* Alli, kāyā-maram, pūvai. *Tel.* Alličettu. *Can.* Alamar-mara. *Tu.* Muṇḍi, alimar. *Mal.* Kāyāvu.

## 26. ಅಲಿಗಿನ ಗಿಡ, ಟಣಕಲಿ ಗಿಡ.

ತ. ನೆಟ್ಟಿ, ಶಡೈಚ್ಚಿ, ಕೊಕ್ಕೇರಿ. ತೆ. ಬೆಂಡು. ಮ. ನೆಲ್ಲಿತಾಳಿ.

**ಹುಟ್ಟು:** ನೀರು ನಿಲ್ಲುವ ಸ್ಥಳಗಳಲ್ಲಿ. **ಪುಷ್ಪ:** ಜ್ಯೇಷ್ಠದಿಂದ ಶ್ರಾವಣದ ವರೆಗೆ.

**ಉಪಯೋಗ:** ಔಷ: ಬೀಗಿಗೆ ಆಗುತ್ತದಂತೆ. ಸಾಧಾ: ಗಿಡದ ಬೆಂಡಿನಿಂದ ಒಳ್ಳೇ ಪೀಲಿಯಾಗುತ್ತದೆ; ಅದು ಟೋಪಿಗಳಿಗೂ ಸೂಕ್ಷ್ಮವಾದ ಕೆಲಸಗಳಿಗೂ ಉಪಯೋಗ. ಇಲಿಗಳ ಬಾಧೆಗೆ ಪೀಲಿ ಚೂರು ಮಾಡಿ ಎಣ್ಣೆಯಲ್ಲಿ ಕಲಸಿಡುತ್ತಾರೆ.

**Aeschynomene aspera,** *Lin.*—A. indica, *Wall.*—Hedysarum lagenarium, *Roxb.*—(Order Leguminosæ.)

*Tam.* Netti, šaḍaičči, kokkēri. *Tel.* Beṇḍu. *Can.* Aligina-giḍa, ṭaṇakali-giḍa. *Mal.* Nellitāḷi.

## 27. ಅವರೆ, ಹೊಲದವರೆಬಳ್ಳಿ (Cow Gram).

ತ. ವೆಳ್ಳವರೈ, ಕಾಟ್ಟುಮೊಚ್ಚೈ. ತೆ. ಅನುಮು, ಅಡವಿಚಿಕ್ಕುಡು. ತು. ಅಬರೆ. ಮ. ವೆಳ್ಳವರ, ಮೊಚ್ಚ. ಸಂ. ಉದ್ದಾಲಕಃ.

**ಹುಟ್ಟು:** ಕೃಷಿಗಿಡ. **ಪುಷ್ಪ:** ಕಾರ್ತಿಕದಿಂದ ಮಾಘದ ವರೆಗೆ.

**ಉಪಯೋಗ:** ಸಾಧಾ: ಅದರ ಎಳೆಕಾಳುಗಳಿಂದ ಪಲ್ಯ ಮಾಡುತ್ತಾರೆ; ಬೆಳದ ಮೇಲೆ ಮನುಷ್ಯರಿಗೂ ದನಕ್ಕೂ ಉಪಯೋಗವಾದ ಒಳ್ಳೇ ಧಾನ್ಯ.

**Dolichos lablab,** *Lin.*—D. albus, *Lour.*—D. bengalensis, *Jacq.*—D. purpureus, *Jacq.*—Lablab vulgaris, *Savi.*—L. bengalensis, *Med. Don.*—L. lignosus, *Wall.*—L. microcarpus, *Dec.*—(Order Leguminosæ.)

*Tam.* Veḷḷavarai, kāṭṭumoččai. *Tel.* Anumu, aḍavičikkuḍu. *Can.* Avare, holadavare-baḷḷi. *Tu.* Abare. *Mal.* Veḷḷavara, močča. *San.* Uddālaka*ḥ*.

## 28. ಅಶೋಕ, ಅಸುಗೆ, ಕೆಂಕಲಿ ಮರ (Asoca Tree).

ತೆ. ಅಶೋಕಮಾನು. ಮ. ಅಶೋಕಂ. ಸಂ. ವಿಚಿತ್ರಃ, (ವೀತಶೋಕ, ಛಾಯಾ, ನಳಾಕ).

**ಉಪಯೋಗ:** ಔಷ: ಎಲೆಗಳು ರಕ್ತಶುದ್ಧಿಗೂ, ರಸವು ಜೀರಿಗೆಯೊಡನೆ ಹೊಟ್ಟೆನೋವಿಗೂ ಒಳ್ಳೇದು. ಸಾಧಾ: ಅಲಂಕಾರದ ಮರ. ಹೂಬಿಡುವಾಗ ಅದರ ನೋಟವು ಶೋಕ ಪರಿಹರಿಸುವಷ್ಟು ರಮ್ಯವೆಂದು ಹೆಸರಿನ ಅಭಿಪ್ರಾಯವೇ.

**Saraca indica,** *Lin.*—S. arborescens, *Burm.*—Jonesia asoca, *Roxb.*—J. pinnata, *Willd.*—(Order Leguminosæ.)

*Tel.* Aśōkamānu. *Can.* Aśōka, asuge, keṅkali-mara. *Mal.* Aśokam. *San.* Vīčitra*h*, (vītaśōka, čhāyā, naḷāki).

## 29. ಆಕಾಶಗರುಡ ಬಳ್ಳಿ.

ತ. ಆಕಾಶಕರುಡನ್, ಕೊಲ್ಲಙ್ಕೋವೈ. ತೆ. ಆಕಾಶಗಡ್ಡ. ಹಿಂ. ಕುದುಂ. ಸಂ. ಕಡಂಬ.

ಈ ಬಳ್ಳಿಯ ಬೇರುಗಳು ಇಳಿದು ಗಾಳಿಯಲ್ಲಿ ಬದುಕುವವು.

**ಉಪಯೋಗ:** ಔಷ: ವಾತರೋಗಕ್ಕೂ ಸರ್ಪವಿಷಕ್ಕೂ ಅತಿಸಾರಕ್ಕೂ ಉಪಯೋಗ. ವಾತಕ್ಕಾದರೆ, ಜೀರಿಗೆ ನೀರುಳ್ಳಿ ಮತ್ತು ಹರಳೆಣ್ಣೆ ಕೂಡಿಸಿ ಲೇಪ ಮಾಡುವದು.

**Corallocarpus epigeia,** *Hook.*—Bryonia epigæa, *Rottl.*—B. glabra, *Roxb.*—Acchmandra epigeia, *D.*—(Order Cucurbitaceæ.)

*Tam.* Ākāśakaruḍan, kollaṅkōvai. *Tel.* Ākāśagaḍḍa. *Can.* Ākâśagaruḍa-baḷḷi. *Hin.* Kudum. *San.* Kaḍamba.

## 30. ಆಡಲುಹರಳು, ದೊಡ್ಡಹರಳು, ತುರುಕಹರಳು, ಕಾಡಹರಳು, ಮರಹರಳು, ಫರಂಗಿಹರಳು, ದುಂಡಿಗಿನ ಗಿಡ

### (Angular-leaved Physic Nut or Purging Nut).

ತ. ಕಡಲಾಮಣಕ್ಕು, ಆದಳ್ಳೈ, ಕುರುಬವರುಣಿ. ತೆ. ಅಡವಿ ಆಮುದಮು, ಕೊಂಡಾಮುದಮು. ತು. ಕಾಡಳಂಬುಡು. ಮ. ಕಾಟಾಮಣಕ್ಕ್. ಕೊಂ. ಕಾಡಎರಡಿ.

**ಹುಟ್ಟು:** ಮಲಬಾರ ಚೋಳಮಂಡಲ ತೀರಗಳು. **ಪುಷ್ಪ:** ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ:** ಔಷ: ಬೀಜವು ವಿರೇಚನ ಮಾಡುತ್ತದೆ. ಎಣ್ಣೆ ವಾತರೋಗಕ್ಕೂ ಕಜ್ಜಿಗೂ ಆಗುತ್ತದೆ. ಹೊಟ್ಟೆಗೆ ಹಚ್ಚಿದರೆ, ಹೊಟ್ಟೆನೋವಿಗೂ ಕ್ರಿಮಿರೋಗಕ್ಕೂ, ತಲೆಗೆ ಹಚ್ಚಿದರೆ ತಾಮರೆಗೂ ಒಳ್ಳೇದು. ಎಲೆಗಳು ಬ್ಲಿಸ್ಟರ್ ಮಾಡಲಿಕ್ಕಾಗುತ್ತವೆ. ಸೊನೆಗೆ ಗಾಯ ವ್ರಣಗಳನ್ನು ಶುದ್ಧೀಕರಿಸಿ ವಾಸಿ ಮಾಡುವ ಗುಣ ಉಂಟು. ಎಲೆಗಳಿಗೆ ಹರಳೆಣ್ಣೆ ಹಚ್ಚಿ ಕಾಸಿ, ಉರುತದ ಸ್ಥಳಗಳಿಗೆ ಸೇಕ ಕೊಡುತ್ತಾರೆ. ಮೂಲವ್ಯಾಧಿಯಲ್ಲಿ ಗಿಡದ ರಸ ಗುದಕ್ಕೆ ಹಚ್ಚುತ್ತಾರೆ. ಎಲೆಗಳ ಕಷಾಯ ಮೊಲೆಹಾಲು ಉಂಟಾಗುವದಕ್ಕೆ ಉಪಯೋಗ. ಹಲ್ಲುನೋವಿನಲ್ಲಿ ಸೊನೆಯುಳ್ಳ ಅದರ ದಂಟಿನಿಂದ ಹಲ್ಲು ಉಜ್ಜಿದರೆ, ಹಲ್ಲು ಚೊಕ್ಕವಾಗುವದಲ್ಲದೆ, ವಸಡು ಬಲಗೊಳ್ಳುತ್ತದೆ. ಸಾಧಾ: ಎಣ್ಣೆ ದೀಪಕ್ಕೆ ಒಳ್ಳೇದು; ಅದು ಥಳಥಳಕ್ಕೆ ಸಹ ಆಗುತ್ತದೆ. ದನಗಳು ಎಲೆಗಳನ್ನು ತಿನ್ನದ ಕಾರಣ, ಗಿಡಗಳಿಂದ ಬೇಲಿ ಮಾಡುತ್ತಾರೆ.

**Jatropha curcas,** *Lin.*—J. Wightiana, *Muell.*—(Order Euphorbiaceæ.)

*Tam.* Kaḍalāmaṇakku, ādaḷai, kurubavaruṇi. *Tel.* Aḍavi-āmudamu, koṇḍā-madamu. *Can.* Āḍalu-haraḷu, doḍḍa-haraḷu, turuka-haraḷu, kāḍa-haraḷu, mara-haraḷu, pharengi-haraḷu, duṇḍigina-giḍa. *Tu.* Kāḍaḷambuḍu. *Mal.* Kāṭāma-ṇakku. *Kon.* Kāḍa-eraḍi.

## 31. ಆಡುಮುಟ್ಟದ ಗಿಡ, ಕುರಿ ಗಿಡ (Worm-killer).

ತ. ಆಡುತಿನ್ನಾಪಾಳೈ, ಕಾರಿರತ್ತಮ್, ವಿರಣಾಂಪೋಕ್ಕಿ, ಪಂಕಂಪಾಲೈ. ತೆ. ಗಾಡಿದೆಗಡ್ಡಪರ. ಮ. ಆಡುತಿನ್ನಾಪಾಲ, ಆಡುತೊಟಾಪಾಲ. ಹಿಂ. ಕೆರಮಾರ್. ಸಂ. ಕತ್ರಪುಂಘ.

**ಹುಟ್ಟು:** ಮಲಬಾರ ಚೋಳಮಂಡಲ ತೀರಗಳಲ್ಲಿ. **ಪುಷ್ಪ:** ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ:** ಔಷ: ಗಾಯಗಳಲ್ಲಿ ಆಗುವ ಹುಳಗಳು ನಾಶವಾಗುವ ಹಾಗೆ ಎಲೆಗಳ ರಸವನ್ನು ಗಾಯಗಳಲ್ಲಿ ಹಿಂಡುತ್ತಾರೆ. ಸರ್ಪದಂಶಕ್ಕೆ ಎಲೆಗಳನ್ನು ಜಜ್ಜಿ ನೀರಲ್ಲಿ ಕುಡಿಯುವದು; ಕಷಾಯ ಉರಿಗೂ ಕುರಗಳಿಗೂ ಆಗುತ್ತದೆ. ಹೊಟ್ಟೆ ನೋವಾದರೆ, ಎರಡು ಎಲೆಗಳನ್ನು ಅರದು ನೀರಲ್ಲಿ ತಕ್ಕೊಳ್ಳುವದು. ಅವನ್ನು ಹರಳೆಣ್ಣೆಯಲ್ಲಿ ಹುರಿದು ನಿಂಬೆಹಣ್ಣಿನಷ್ಟು ಕುದುರೆಗಳಿಗೆ ಕೊಟ್ಟರೆ, ಅವುಗಳ ಹೊಟ್ಟೆ ನೋವು ಗುಣ. ಜಜ್ಜಿದ ಎಲೆ ಹರಳೆಣ್ಣೆಯೊಡನೆ ಕರ್ಪಜವೆಂಬ ನಂಜಿಗೆ ಔಷಧ. ಒಣ ಎಲೆಗಳ ಕಷಾಯ ಕ್ರಿಮಿಹರ.

**Aristolochia bracteata,** *Retz.*—(Order Aristolochiaceæ.)

*Tam.* Āḍutinnāpālai, kārirattam, viraṇampōkki, pankampālai. *Tel.* Gāḍi-degaḍḍapara. *Can.* Āḍumuṭṭada-giḍa, kuri-giḍa. *Mal.* Āḍutinnāpāla, āḍutoṭā-pāla. *Hin.* Keramār. *San.* Katrapungha.

## 32. ಆಡುಸೋಗೆ, ಅಡ್ಡಸರ, ಅಡ್ಡಲಸ, ಬ್ಯಾಲದ ಮರ (Malabar Nut).

ತ. ಆಡಾದೊಡೈ, ವಾಶೈ. ತೆ. ಅಡ್ಡಸರಮು. ತು. ಯೇಡ್‌ಮುಟ್ಟಂದಿ ತಪ್ಪು. ಮ. ಆಟಲೋಟಕಂ. ಸಂ. ವಾಶಾ, ವಾಸಕಃ, ಸಿಂಹೀ, ಆಟರೂಷಕ, ರಾಜದಂತಕಃ, ರಕ್ತಪಿತ್ತಘ್ನೀ.

**ಹುಟ್ಟು:** ಸಾಧಾರಣ. **ಪುಷ್ಪ:** ಪುಷ್ಯದಿಂದ ಫಾಲ್ಗುಣದ ವರೆಗೆ.

**ಉಪಯೋಗ:** ಔಷ: ಶುಂಠೀರಸದೊಡನೆ ಈ ಮರದ ಎಲೆಗಳ ರಸ ಕೆಮ್ಮಿಗೂ ಕಾಸಶ್ವಾಸಕ್ಕೂ ವಾತಜ್ವರಕ್ಕೂ ಉಪಯೋಗ. ಬೇರು ಎಲೆ ಹೂವುಗಳು ದಿನ ತಪ್ಪಿ ದಿನ ಬರುವ ಜ್ವರಕ್ಕೂ ಶ್ವಾಸಕೋಶದ ಮತ್ತು ಶ್ವಾಸನಾಳದ ದೋಷಕ್ಕೂ (ಜ್ವರ ವಿದ್ದರೆ) ಒಳ್ಳೇದು. ಎಲೆಗಳು ದನಗಳ ಔಷಧಗಳಲ್ಲಿ ಸಹ ಸೇರುತ್ತವೆ. ಕಣ್ಣು ರೋಗಕ್ಕೆ ಹಸಿ ಹೂವುಗಳನ್ನು ಕಣ್ಣಿಗೆ ಕಟ್ಟುವರು. ಎಲೆಯನ್ನು ಬೇರೆ ಔಷಧಿಗಳ ಸಮೇತ ಕ್ರಿಮಿರೋಗಕ್ಕೆ ಸೇವನ ಮಾಡುವರು.

**Adhatoda vasica,** *Nees.*—Gendarussa Adhadota, *Steud.*—Justicia Adh., *Lin.*—(Order Acanthaceæ.)

*Tam.* Āḍadoḍai, vāšai. *Tel.* Aḍḍasaramu. *Can.* Āḍusōge, aḍḍasara, aḍḍalasa, byālada-mara. *Tu.* Yēḍu-muṭṭandi-tappu. *Mal.* Āṭalotakam. *San.* Vāšā, vāsaka*h*, si*m*hī, āṭarūshaka, vajidantaka*h*, raktapittaghnī.

### 33. ಆನೆಕತ್ತಾಳಿ, ಕಲ್ನಾರು, ದೆವ್ವಬಾಳೆ, ರಾಕ್ಷಸಬಾಳೆ (American Aloe).

ತ. ಆನೆಕತಾಳೈ. ತು. ದಡ್ಡೊಲಿ, ಆನೆಮುಂಡೇಯಿ. ಮ. ಎರೋಪ್ಪಕೈತ.

**ಹುಟ್ಟು:** ಔಷ: ಹೆಚ್ಚಾಗಿ ದಕ್ಷಿಣದಲ್ಲಿ ಬೇಲಿಯಾಗಿ ಬೆಳಿಸುತ್ತಾರೆ.

**ಉಪಯೋಗ:** ಔಷ: ಬೇರು ಮೂತ್ರಜುಲಾಬು. ಅದಕ್ಕೆ ಬದಲಿಸುವ ಗುಣ ವದೆ; ತೆಳ್ಳಗಾಗಿ ಉದ್ದಕ್ಕೆ ಸೀಳಿದ ಎಲೆ ಪೋಲ್ಟಿಸಾಗಿ ಬಳಿಸಬಹುದು. ಸಾಧಾ: ಎಲೆಗಳಲ್ಲಿ ನಾನಾ ಕೆಲಸಕ್ಕೆ ತಕ್ಕದಾದ ಒಳ್ಳೇ ನಾರು ಅದೆ. ಎಲೆಗಳ ಸತ್ವ ಸೀಗೆಯ ತರದ್ದು. ಎಲೆಗಳನ್ನು ಉದ್ದಕ್ಕೆ ಸೀಳಿ ಒಣಗಿಸಿದರೆ, ಕತ್ತಿ ಹದ ಮಾಡಲಿಕ್ಕಾಗುತ್ತದೆ. ಎಲೆಗಳ ರಸದಲ್ಲಿ ಸುಣ್ಣ ಕಲಸಿ ಗೋಡೆಗಳಿಗೆ ಬೋಳಿಸಿದರೆ, ಗೆದಲು ಹತ್ತುವದಿಲ್ಲ.

**Agave americana,** *Lin.*—A. ramosa, *Mœnch.*—Aloe americana, *Crantz.*—(Order Amaryllideæ.)

*Tam.* Ānekatāḷai. *Can.* Ānekattāḷi, kalnāru, devvabāḷe, rākshasabāḷe. *Tu.* Daḍḍoli, ānemuṇḍai. *Mal.* Eroppakaita.

### 34. ಆನೆನೆಗ್ಗಿಲು, ದೊಡ್ಡನೆಗ್ಗಿಲು.

ತ. ಆನನೆರಿಞ್ಜಲ್, (ಆನೈನೆರುಂಚಿ, ಪೆರುನೆರುಂಚಿ). ತೆ. ಏನುಗಪಲ್ಲೇರು. ಮ. ಕಾಕಮುಲ್ಲ, ಕಾಟ್ಟುಞೆರಿಞಿಲ್. ಮಹಾ. ಗೋಖ್ರು. (ಸಂ. ಗಜದಂಷ್ಟ್ರಿ.)

**ಹುಟ್ಟು:** ಚೋಳಮಂಡಲ, ಕನ್ಯಾಕುಮಾರಿ, ಕೊಂಕಣ. ಪುಷ್ಪ: ಶ್ರಾವಣ ದಿಂದ ಕಾರ್ತಿಕದ ವರೆಗೆ.

**ಉಪಯೋಗ:** ಔಷ: ಈ ಗಿಡವನ್ನು ತಣ್ಣೀರಲ್ಲಿ ಕದಡಿಸಿದರೆ, ಅದು ದಪ್ಪ ವಾಗಿ, ಶುಕ್ಲಧಾರೆಗೆ ಔಷಧವಾಗುತ್ತದೆ; ಬೀಗಿಗೂ ಉರಿಮೂತ್ರಕ್ಕೂ ಉಪಯೋಗ. ಬೀಜದ ಕಷಾಯ ಅದೇ ಗುಣವುಳ್ಳದ್ದು; ಜ್ವರಕ್ಕೆ ಸಹ ಕೊಡುತ್ತಾರೆ. ಸಾಧಾ: ದಂಟಿ ನಿಂದ ಮಜ್ಜಿಗೆ ದಪ್ಪ ಮಾಡುತ್ತಾರೆ.

**Pedalium Murex,** *Lin.*—(Order Pedalineæ.)

*Tam.* Ānenerińjal (ānaineruńči, peruneruńči). *Tel.* Ēnugapallēru. *Can.* Āne-neggilu, doḍḍa-neggilu. *Mal.* Kākamulla, kāṭṭuńeriñil. *Mah.* Gōkhru. (*San.* Gajada*m*shṭri.)

### 35. ಆನೆಮುಂಗು, ದುಂಡುಕರ, ಬಾಗಿ, ಮೊಕ್ಕ, ಅಳಂಗಿ ಮರ.

ತೆ. ಮಂಡೂಕಪರ್ಣಮು, ಶುಕನಾಸಮು, ಪಂಪೆನಚೆಟ್ಟು. ತು. ಆನೆಮುಂಗು. ಮ. ಪಲಕಪ್ಪೈಯಾನ, ಆರಳು, ವೆಳುತ್ತಪಾತಿರಿಮರಂ, ಆರಂತಲ್. ಕೊಂ. ಚಾಮ್ಮುಯಿ. ಸಂ. ಬಿಲಬಿಫಲ.

•

**ಹುಟ್ಟು:** ಮಲಬಾರ ಚೋಳಮಂಡಲ ತೀರಗಳಲ್ಲಿ. **ಪುಷ್ಪ:** ಫಾಲ್ಗುಣದಿಂದ ಜ್ಯೇಷ್ಠ ವರೆಗೆ.

**ಉಪಯೋಗ:** ಔಷ: ಬೀಗಿಗೂ ಮಕ್ಕಳ ಕಾಸಶ್ವಾಸರೋಗಕ್ಕೂ ಜ್ವರಕ್ಕೂ, ಹಸಿ ಎಲೆ ವ್ರಣಗಳಿಗೂ ಉಪಯೋಗಿಸುತ್ತಾರೆ. ಸಾಧಾ: ಸಾರು ಮಾಡುವದುಂಟು.

**Oroxylum indicum,** *Vent.*—Calosanthes indica, *Blum.*—Bignonia indica, *Lin.*—B. pentandra, *Lour.*—(Order Bignoniaceæ.)

*Tel.* Maṇḍūkaparṇamu, šukanāsamu, pampenačettu. *Can.* Ānemuṅgu, duṇḍukara, bāgi, mokka, aḷangi-mara. *Tu.* Ānemungu. *Mal.* Palakapaiyāna, araḷu, veḷuttapātiri-maram, ārantal. *Kon.* Čāmmuyi. *San.* Khilabiphala.

## 36. ಆಲದ ಮರ, ಗೋಳೀ ಮರ (Banyan Tree).

ತ. ಆಲಮರಮ್, ಏಕವಾಚಮ್, (ಕಾನ್ಮರಮ್, ಕವಚುಗಮ್, ಪಳುಮರಮ್). ತೆ. ಮಱಿಚೆಟ್ಟು. ತು. ಗೋಳಿದ ಮರ. ಮ. ಪೇರಾಲ್, ವಟಂ. ಸಂ. ನ್ಯಗ್ರೋಧಃ, ಮಾನವೃಕ್ಷಃ, ಸ್ಕಂಧಜನಿಃ, ಬಹುಪಾದಃ, ಪಾತಂಗಃ, ವಟಃ.

**ಉಪಯೋಗ:** ಔಷ: ಚೆಕ್ಕೆಗೆ ಬಲವರ್ಧಕ ಗುಣ. ಮರದ ಹಾಲು ಹಲ್ಲು ನೋವಿಗೂ ಒಡಕುಕಾಲಿಗೂ ಒಳ್ಳೇದು. ಬೀಳಿನ ಚಿಗುರು ಹಾಲಿನಲ್ಲಿ ಅರದು ಕುಡಿದರೆ, ಉಷ್ಣಮೂತ್ರ ಗುಣ.

**Ficus bengalensis,** *Lin.*—Ficus indica, *Roxb.*—Urostigma bengalense, *Miq.*—(Order Urticaceæ.)

*Tam.* Ālamaram, ēkavāčam, (kānmaram, kavačugam, paḷumaram). *Tel.* Mar̤i-čettu. *Can.* Ālada-mara, gōḷī-mara. *Tu.* Gōḷida-mara. *Mal.* Pēral, vaṭam. *San.* Nyagrōdhaḥ, mānavṛikshaḥ, skandhajaniḥ, bahupādaḥ, pātangaḥ, vaṭaḥ.

## 37. ಆವರಿಕೆ, ಚಾಕುಸಿನ ಗಿಡ, ಒಳ್ಳೆ ತಂಗಡಿ, ಹೊನ್ನಾವರಿಕೆ ಗಿಡ (Tanner's Cassia).

ತ. ಆವರೈ. ತೆ. ತಂಗೇಡು. ಮ. ಆವೀರಂ, ಚಮುಟಿ.

**ಹುಟ್ಟು:** ದಕ್ಷಿಣ ಹಿಂದುಸ್ಥಾನದಲ್ಲಿ. **ಪುಷ್ಪ:** ಭಾದ್ರಪದದಿಂದ ಕಾರ್ತಿಕದ ವರೆಗೆ.

**ಉಪಯೋಗ:** ಔಷ: ಬೀಜದ ಹುಡಿ ಎಣ್ಣೆಯೊಡನೆ ಉರಿಗಣ್ಣಿಗೆ ಹಚ್ಚುತ್ತಾರೆ. ಚೆಕ್ಕೆಗೆ ಒಗರುಗುಣ ಉಂಟು. ಸಾಧಾ: ತೊಗಟೆ ಚರ್ಮ ಹದ ಮಾಡಲಿಕ್ಕೂ ಬಣ್ಣಕ್ಕೂ ಉಪಯೋಗ. ಬೇರಿನಿಂದ ಹಲ್ಲು ಉಜ್ಜುವರು, ಕಚ್ಚಿಣಕ್ಕೆ ನೀರು ಕೊಡುವರು.

**Cassia auriculata,** *Lin.*—Senna aur., *Roxb.*—(Order Leguminosæ.)

*Tam.* Āvarai. *Tel.* Tangedu. *Can.* Āvarike, čākusina-giḍa, oḷḷe-taṅgaḍi, honnāvarike-giḍa. *Mal.* Āviram, [illegible].

## 38. ಆವರೆ ಗಿಡ.

ತ. ಎಲಿಪ್ಪಯರು. ತೆ. ಕಲಬಂದಚೆಟ್ಟು. ಮ. ಚೆರುವಿಡುಕೋಲ್. ಕೊಂ. ಹರ್ಪುಲಿ. ಹಿಂ. ರಖಲ್ ಕಳೈ. ಸಂ. ಅಜರಾ, ಆಕುಲಿ, ಗೋರೇಖಾ.

**ಹುಟ್ಟು**: ದಖ್ಖಣ, ಬಂಗಾಳ. **ಪುಷ್ಪ**: ಮಾರ್ಗಶಿರ, ಪುಷ್ಯ.

**ಉಪಯೋಗ**: ಔಷ: ಕಷಾಯ ಶೀತಜ್ವರಕ್ಕೂ ಕೆಮ್ಮಿಗೂ ಕೊಡುತ್ತಾರೆ. ಸಾಧಾ: ಬೀಜ ಮತ್ತು ಎಲೆಯ ಪಲ್ಯ ಮಾಡುತ್ತಾರೆ.

**Phaseolus trilobus,** *Ait.*—Dolichos trilobatus, *Lin.*—(Order Leguminosæ.)

*Tam.* Elippayaru. *Tel.* Kalabandačettu. *Can.* Āvare-giḍa. *Mal.* Čeruvidukōl. *Kon.* Harpuli. *Hin.* Rakhalkaḷai. *San.* Ajarâ, ākuli, gōrēkhā.

## 39. ಆಸಿನ ಮರ, ಆಸು, ಅಶ್ವಕರ್ಣ, ರಾಳದ ಮರ (Sal Tree).

ತೆ. ಇನುಮದ್ದಿ, ಸಾಲಮು, ನಲ್ಲಮದ್ದಿ, ವೇಗಿನಚೆಟ್ಟು. ಮ. ಸಾಲವೃಕ್ಷಮ್, ಮುಳಪೂಮರುತ್. ಸಂ. ಸರ್ಜ್ಜಃ.

**ಹುಟ್ಟು**: ಘಟ್ಟದ ಅಡವಿಗಳೂ ಹಿಮಾಲಯವೂ. **ಪುಷ್ಪ**: ಫಾಲ್ಗುಣ, ಚೈತ್ರ.

**ಉಪಯೋಗ**: ಔಷ: ಮರದ ಹಗಿನು ವ್ರಣಗಳಿಗೆ ಉಪಯೋಗ. ಸಾಧಾ: ಮರವು ನೀರಲ್ಲಿ ಕೆಡದೆ ನಾನಾ ತರದ ಕೆಲಸಕ್ಕೆ ಬರುತ್ತದೆ; ಅದಕ್ಕೆ ಗೆದಲು ಹಿಡಿಯುವದಿಲ್ಲ. ಹಗಿನೂ ಕರ್ಪೂರದ ತೈಲವೂ ಚಿತ್ರಗಳಿಗೆ ಒಳ್ಳೇ ಥಳಥಳ ಕೊಡುವದು. ಮರದ ರಾಳ ಬಹು ಉಪಯೋಗದ್ದು. ಚೆಕ್ಕೆಯಿಂದ ಒಳ್ಳೇ ತರದ ಸುಣ್ಣ ಮಾಡುತ್ತಾರೆ.

**Shorea robusta,** *Gaertn.*—Vatica robusta, *Steud.*—(Order Dipterocarpeæ.)

*Tel.* Inumaddi, sālamu, nallamaddi, vēginačettu. *Can.* Āšina-mara, āsu, ašvakarṇa, rāḷada-mara. *Mal.* Sālavṛiksham, muḷapūmarutu. *San.* Sarjjaḥ.

## 40. ಆಷಾಡಿಯು, ಶತಮೂಲಿ, ಹಲುಮಕ್ಕಳತಾಯಿ ಬಳ್ಳಿ.

ತ. ಪಣಿಯನಾಕು. ತೆ. ಶತಾವರಿ, ಪಿಲ್ಲಿಪೆಸರ, ಪಿಲ್ಲಪೀಚರ. ಮ. ಶತಾವರಿ. ತು. ಉದುರಿಬೂರು. ಕೊಂ. ಸೀತೇಚವರಿ. ಹಿಂ. ಸದಬೋರಿ. ಸಂ. ಶತಾವರೀ, ಆಷಾಢೀ, (ಶತಮೂಲೀ), ಕೇಶೀ.

**ಹುಟ್ಟು**: ದಕ್ಷಿಣ ಹಿಂದುಸ್ಥಾನ, ದಖ್ಖಣಗಳಲ್ಲಿ. **ಪುಷ್ಪ**: ಕಾರ್ತಿಕ, ಮಾರ್ಗಶಿರ.

**ಉಪಯೋಗ**: ಔಷ: ಬೇರಿನ ಸಿಪ್ಪೆ ತೆಗದು ಹಾಲಿನಲ್ಲಿ ಬೇಯಿಸಿ ಸೇವಿಸಿದರೆ, ಪಿತ್ತಹರ; ಮೂತ್ರಜುಲಾಬು ಮಾಡಿಸುವದಕ್ಕೂ ಹೊಟ್ಟೆನೋವಿಗೂ ಅಗ್ನಿದೀಪನ ಹೆಚ್ಚಿಸುವದಕ್ಕೂ ಆಗುತ್ತದೆ. ಎಲೆಗಳನ್ನು ಬೇಯಿಸಿ, ತುಪ್ಪದ ಸಂಗಡ ಕುರುಗಳಿಗೆ ಅವು ಚಿದುಪಿ ಹೋಗುವಂತೆ ಕಟ್ಟುವದು. ಸಾಧಾ: ಪರಿಮಳ.

**Asparagus racemosus,** *Willd.*—(Order Liliaceæ.)

*Tam.* Paṇiyanāku. *Tel.* Šatāvari, pillipesara, pillapīčara. *Can.* Āshāḍiyu, šatamūli, halumakkaḷatāyi-baḷḷi. *Tu.* Uduri-būru. *Mal.* Šatāvari. *Kon.* Sītēčavari. *Hin.* Sadabōri. *San.* Šatāvarī, āshāḍhī, (šatamūlī), kēšī.

## 41. ಇಂಗಳ, ಇಂಗಲೀಕ ಮರ.

ಹುಟ್ಟು: ದಕ್ಷಿಣದಲ್ಲಿ. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ಕಾಯಿ ಕಠಿಣ ಜುಲಾಬು ಮಾಡಿಸುತ್ತದೆ. ಚೆಕ್ಕೆ ದನಗಳ ಔಷಧಕ್ಕೆ ಸೇರುತ್ತದೆ. ಸಾಧಾ: ಬೀಜದಿಂದ ಎಣ್ಣೆ ಬರುತ್ತದೆ. ಬೀಜ ಕೊರೆದು ಮದ್ದು ತುಂಬಿಸಿ ಬಾಣಬಿರುಸಿಗೆ ಪ್ರಯೋಗಿಸುತ್ತಾರೆ. ಹಣ್ಣು ತಿನ್ನುತ್ತಾರೆ. ಮರ ಕೆಲಸಕ್ಕೆ ಬರುತ್ತದೆ.

**Balanites Roxburghii,** *Planch.*—B. ægyptiaca, Del. var. indica.—Ximenia æg., *Lin.*—(Order Simarubeæ.)

*Can.* Ingaḷa, ingalīka-mara.

## 42. ಇಂಪಿ ಗಿಡ (Chinese Sugar Cane).

ತು. ಅರಿಜೋಳ. ಮ. ಅರಿಚ್ಚವಳಂ.

ಹುಟ್ಟು: ನಟ್ಟು ಬೆಳಿಸುವದು.

ಉಪಯೋಗ: ಸಾಧಾ: ಒಂದು ತರದ ಜೋಳ. ದನಕ್ಕೆ ಒಳ್ಳೇ ಆಹಾರ. ಚೀನ ದೇಶದಲ್ಲಿ ಇದರಿಂದ ಸಕ್ಕರೆ ಬೆಲ್ಲ ಮಾಡುತ್ತಾರೆ.

**Andropogon halepensis,** *Brot.*—A. saccharatus, *Roxb.*—Sorghum saccharatum, *Hohen.*—(Order Gramineæ.)

*Can.* Impi-giḍa. *Tu.* Arijōḷa. *Mal.* Ariččavaḷam.

## 43. ಇಪ್ಪೆ ಮರ (Mahwa Tree).

ತ. ಮಧೂಕಮ್. ತೆ. ಇಪ್ಪಚೆಟ್ಟು, ಮಧೂಕಮು. ತು. ಇಪ್ಪೆಮರ, ನಾವಿಲ್ದಮರ. ಮ. ಇರುಪ್ಪ. ಸಂ. ಮಧೂಕಃ, ಪ್ರಿಯಾಲಃ, ಲೋಧ್ರಪುಷ್ಪಃ.

ಹುಟ್ಟು: ಕೊಂಕಣ, ಬಂಗಾಳ, ದಕ್ಷಿಣ ಹಿಂದುಸ್ಥಾನದ ಅಡವಿಗಳಲ್ಲಿ. ಪುಷ್ಪ: ಫಾಲ್ಗುಣ, ಚೈತ್ರ.

ಉಪಯೋಗ: ಔಷ: ಉಷ್ಣ ಗುಣ. ವಾತರೋಗಕ್ಕೆ ಒಳ್ಳೇದು. ಸಾಧಾ: ಮರ ಕೆಲಸಕ್ಕೆ ಬರುತ್ತದೆ, ವಿಶೇಷವಾಗಿ ಗಾಡಿಗಳ ಅಚ್ಚುಮರಕ್ಕೆ. ಚೆಕ್ಕೆ ಹೂಗಳಿಂದ ಸಾರಾಯಿ ಮಾಡುತ್ತಾರೆ. ಅದನ್ನು ಕುದುರೆಗೆ ಹೊಟ್ಟೆನೋವಾದರೆ, ಕೊಡುವರು. ಬೀಜಗಳಿಂದ ಎಣ್ಣೆ ತೆಗಿಯಬಹುದು.

**Bassia latifolia,** *Roxb.*—(Order Sapotaceæ.)

*Tam.* Madhūkam. *Tel.* Ippačeṭṭu, madhūkamu. *Can.* Ippe-mara. *Tu.* Ippe-mara, nāvilda-mara. *Mal.* Iruppa. *San.* Madhūkaḥ, priyālaḥ, lōdhrapushpaḥ.

### 44. ಇಸಬಗೋಲು, ವಿಸಮುಗೋಲು.

ತ. ಇಸ್ಕೋಲ್ವಿರೈ. ತೆ. ಇಸಬಗಾಲವಿತ್ತುಲು. ಮಹಾ. ಇಸಬ್‌ಗೋಲ್. ಹಿಂ. ಇಸ್ಫಘೂಲ್.

ಹುಟ್ಟು: ಸಟ್ಟು ಬೆಳಿಸುವದು. ಪುಷ್ಪ: ಕಾರ್ತಿಕದಿಂದ ಪುಷ್ಯದ ವರೆಗೆ.

ಉಪಯೋಗ: ಔಷ: ಇದರ ಬೀಜ ದೀರ್ಘಕಾಲದ ಅತಿಸಾರದಲ್ಲಿ ಬೇರೆ ಯಾವ ಮದ್ದಿಗಿಂತಲೂ ಮೇಲಾದ ಔಷಧವಾಗಿರುತ್ತದಂತೆ. ಬೀಜವನ್ನು ಕಲ್ಲು ಸಕ್ಕರೇ ಸಂಗಡ ತಕ್ಕೊಳ್ಳುವರು. ಬೀಜವನ್ನು ಮುಂಚಿತವಾಗಿ ಸ್ವಲ್ಪ ಬಣಗಿಸಿ ಕಾಸಿ ಉಪಯೋಗಿಸಿದರೆ, ಅದಕ್ಕೆ ತಕ್ಕಷ್ಟು ಸ್ತಂಭಕ ಮತ್ತು ಅಗ್ನಿದೀಪಕ ಗುಣ ಒರುವದು. ಇದಲ್ಲದೆ ಕಫಕ್ಕೂ ಶ್ಲೇಷ್ಮಕ್ಕೂ ಉಪಯೋಗ. ಭಾವ ತಂಪು.

**Plantago ovata,** *Forsk.*—P. Ispaghul, *Roxb.*—(Order Plantagineæ.)

*Tam.* Iskōlvirai. *Tel.* Isabagālavittulu. *Can.* Isabagōlu, visamugōlu. *Mah.* Isabgōl. *Hin.* Isphaghūl.

### 45. ಈಚಲ ಮರ (Wild Date, Mysore Toddy Palm).

ತ. ಪೇರೀಚ್ಚು, ಮಡಲ್, ಕರವಮ್. ತೆ. ಈತ, ಈನ್ದು. ತು. ಈಚಿಲ್. ಮ. ಕಾಟೇಂತ್, ಖಜ್ಜೂರವಮ್. ಸಂ. ಖರ್ಜೂರಿಃ, ರೋಷಣಃ, ಕಪಿಲಃ, (ಹಲೂಕ).

ಹುಟ್ಟು: ಹೆಚ್ಚಾಗಿ ದಕ್ಷಿಣದಲ್ಲಿ.

ಉಪಯೋಗ: ಸಾಧಾ: ಎಲೆಗಳಿಂದ ಚಾಪೆ ಹೆಣೆಯುತ್ತಾರೆ. ಕಳ್ಳಿನಿಂದ ಸಾರಾಯಿ ಬೆಲ್ಲ ಕಲ್ಲುಸಕ್ಕರೆ ಸಹ ಮಾಡುವರು.

**Phœnix sylvestris,** *Roxb.*—(Order Palmeæ.)

*Tam.* Pērīčču, maḍal, karavam. *Tel.* Īta, īndu. *Can.* Īčala-mara. *Tu.* Īčil. *Mal.* Kāṭēntu, kharjjūram. *San.* Kharjūri*h*, rōshaṇa*h*, kapila*h*, (halūka).

### 46. ಈಶ್ವರ ಬೇರು, ಗೋಪಾಲಪುಟ್ಟಿ ತೊಪ್ಪಲು (Indian Birthwort).

ತ. ಈಶುರವೇರ್, ಗರುಡಕ್ಕೊಡಿ, ಪೆರುಮರುನ್ದು, ಈಯವರಿ. ತೆ. ಈಶ್ವರವೇರು, ದೂಲಗೋವೆಲ. ತು. ಇಸರಬೇರ್. ಮ. ಈಶ್ವರಮುಲ್ಲ, ಕಡಲಿವೇಗಮ್, ಪೆರುಮರುನ್ನು, ಪೆರುಂಕಿಬಿಜ್. ಕೊಂ. ಸಾಪ್ಸಿ ಕಡ್ಡೂಲ. ಸಂ. ಅಹಿಗಂಧಾ.

ಹುಟ್ಟು: ಕಾಡುಗಳು, ಬಂಗಾಳ. ಪುಷ್ಪ: ಭಾದ್ರಪದ, ಆಶ್ವೀಜ.

ಉಪಯೋಗ: ಔಷ: ಎಲೆಗಳ ಕಷಾಯ ಜ್ವರಕ್ಕೆ ಕೊಡುತ್ತಾರೆ. ಬೇರು ಬಾಣಂತಿನಂಜಿಗೂ ಸರ್ಪದ ವಿಷಕ್ಕೂ ಬೇರೆ ತರದ ನಂಜಿಗೂ ಸನ್ನಿರೋಗಕ್ಕೂ ಕ್ರಿಮಿ ರೋಗಕ್ಕೂ, ಜೇನಿನ ಸಂಗಡ ಬಿಳೀ ಕುಷ್ಠಕ್ಕೂ ಉಪಯೋಗ.

**Aristolochia indica,** *Lin.*—(Order Aristolochiaceæ.)

*Tam.* Īšuravēr, garuḍakkoḍi, perumarundu, īyavari. *Tel.* Īšvaravēru, dūla-gōvela. *Can.* Īšvara-bēru, gōpālapuṭṭi-toppalu. *Tu.* Isarabēru. *Mal.* Īšvara-mulla, kaḍalivēgam, perumarunnu, perunkiḻaṇu. *Kon.* Sāpsikaḍḍūla. *San.* Ahigandhā.

### 47. ಉಗುರುಸುತ್ತು ಬಳ್ಳಿ, ಹಾಲ್ಕೊರಟಿಗ, ಹಾಲಕೊರಟಿಗನ ಬಳ್ಳಿ.

ತ. ವೇಲಿಪರುತ್ತಿ, ಉತ್ತಾಮಣಿ, ಉತ್ತಮದಾಳಿ, ಕುಡಗರಮ್, ಅಚ್ಚಾಣಿಮೂಲಿ. ತೆ. ಗುರುಟಿಚೆಟ್ಟು, ಜುಷ್ಟುಪು, ದುಷ್ಟುಪು. ಮ. ವೇಲಿಪರುತ್ತಿ. ಸಂ. ಯುಗ್ಮಫಲಿಕಾ.

**ಹುಟ್ಟು:** ದಕ್ಷಿಣ ಹಿಂದುಸ್ಥಾನದಲ್ಲಿ. **ಪುಷ್ಪ:** ಆಷಾಢದಿಂದ ಮಾರ್ಗಶಿರದ ವರೆಗೆ.

**ಉಪಯೋಗ:** ಔಷ: ಕಲ್ಕಸೀರು ಕಫೋದ್ರೇಕಕ್ಕೆ ಆಗುತ್ತದೆ; ಮಿ. ವಿಷಾರಿ ತಕ್ಕೊಂಡರೆ, ಓಕರಿಕೆ ಮತ್ತು ವಾಂತಿ ಆಗಲಿಕ್ಕೆ ಸಾಕು. ಎಲೆಗಳ ರಸಕ್ಕೆ ಸುಣ್ಣ ಸೇರಿಸಿ ವಾತದ ಬೀಗುಗಳಿಗೆ ಲೇಪಿಸುತ್ತಾರೆ. ಸಾಧಾ: ದಂಟಿನಲ್ಲಿ ಒಳ್ಳೇ ನಾರು ಅದೆ.

**Dæmia extensa,** *Br.*—Cynanchum extensum, *Ait.*—C. cordifolium, *Retz.*—(Order Asclepiadaceæ.)

*Tam.* Vēliparutti, uttāmaṇi, uttamadāḷi, kuḍagaram, aččāṇimūli. *Tel.* Guruṭi-čeṭṭu, jushṭupu, dushṭupu. *Can.* Ugurusuttu-baḷḷi, hālkoraṭiga, hālakoraṭigana-baḷḷi. *Mal.* Vēliparutti. *San.* Yugmaphalikā.

### 48. ಉಡಿ ಮರ, ಸಿಂಟಿ ಮರ.

ತ. ಒಡಿಯಮರಮ್, ಅಪ್ಪಿರಿಯದರು. ತೆ. ಒಡ್ಡಿಮಾನು. ಮ. ಒತಿ, ಉತಿ. ಸಂ. ಅಜಶೃಂಗೀ.

**ಹುಟ್ಟು:** ಪಶ್ಚಿಮಪೂರ್ವ ತೀರಗಳು, ಬಂಗಾಳ. **ಪುಷ್ಪ:** ಮಾಘ, ಫಾಲ್ಗುಣ.

**ಉಪಯೋಗ:** ಔಷ: ಬಹು ಒಗರುಗುಣವುಳ್ಳ ಚಕ್ಕೆಯ ಕಷಾಯ ಸಂಧಿಗೂ ಕಠಿಣ ವ್ರಣಗಳಿಗೂ ಆಗುತ್ತದೆ. ಅದನ್ನು ಮುಕ್ಕುಳಿಸಲಿಕ್ಕೆ ಸಹ ಪ್ರಯೋಗಿಸುತ್ತಾರೆ. ತೆಂಗಿನ ಹಾಲು ಕೂಡಿಸಿದ ಹಗಸೂ ಎಣ್ಣೆಯಲ್ಲಿ ಕಾಸಿದ ಚಕ್ಕೆ ಎಲೆಗಳೂ ಗಾಯ ವ್ರಣಗಳಿಗೆ ಲೇಪ. ಸಾಧಾ: ಮರ ಕೆಲಸಕ್ಕೆ ಬರುತ್ತದೆ. ಕೊಂಬೆ ನೆಟ್ಟರೆ, ಸುಲಭವಾಗಿ ಬೆಳೆಯುವದು. ಚಕ್ಕೆಯಲ್ಲಿ ನಾರು ಉಂಟು.

**Odina Wodier,** *Roxb.*—(Order Anacardiaceæ.)

*Tam.* Odiyamaram, appiriyadaru. *Tel.* Oḍḍimānu. *Can.* Uḍi-mara, sinṭi-mara. *Mal.* Oti, uti. *San.* Ajašṛiṅgī.

### 49. ಉಣಾಮಿಣಿ ಗಿಡ.

ಮ. ನರುಂಪಾಣಲ್. ತು. ಪಾಂಡೆಲ್. ಕೊಂ. ಗುಣಾಮಣಿಝಾಡ.

**ಉಪಯೋಗ:** ಔಷ: ಎಲೆಗಳು ಶ್ರೋಣಿತವಾತಕ್ಕೂ, ಬೇರು ಕಾಮಿಲೆಗೂ

ನಂಜೆಗೂ ಜ್ವರಕ್ಕೂ ಪಿತ್ತದೋಷಕ್ಕೂ ಉಪಯೋಗ. ಆದರಿಂದ ಒಂದು ಎಣ್ಣೆ ಮಾಡುತ್ತಾರೆ.

**Uvaria narum**, *Wall.*—Unona narum, *Dun.*—(Order Anonaceæ.)

*Can.* Uṇāmiṇi-giḍa. *Mal.* Narumpāṇal. *Tu.* Pāṇḍel. *Kon.* Guṇāmaṇi-jhāḍa.

## 50. ಉತ್ತರಣೀ ಗಿಡ.

ತ. ನಾಯುರುವಿ, ನಾಯ್ಕುರುವಿ, ಶಿರುಕಡಲಾಡಿ, ಕೇಚರಿಗಮ್. ತೆ. ಉತ್ತರೇಣಿ, ಅಪಾಮಾರ್ಗಮು. ಮ. ಕಡಲಾಡಿ. ಕೊಂ. ಕಾಂಟಮೊಗ್ರಿ. ಸಂ. ಅಪಾಮಾರ್ಗಃ, ಖರಮಂಜರೀ, ಮಾಂಸಘಟ್ಟಿ, ದೀರ್ಘಮಂಜರೀ.

**ಹುಟ್ಟು**: ದಕ್ಷಿಣ ಹಿಂದುಸ್ಥಾನ, ಬಂಗಾಳ. **ಪುಷ್ಪ**: ಸ್ವಲ್ಪ ಕಡಿಮೆ ಇಡೀ ವರ್ಷ.

**ಉಪಯೋಗ**: ಔಷ: ಎಲೆಗಳನ್ನು ಚೇಳು ಕಚ್ಚಿದ ಗಾಯಕ್ಕೆ ಕಟ್ಟುವರು. ಬೀಜ ಹುಚ್ಚುನಾಯಿ ಕಚ್ಚಿದ್ದಕ್ಕೂ ಕಣ್ಣುರೋಗಕ್ಕೂ ಸರ್ಪದಂಶಕ್ಕೂ ಚರ್ಮ ನಂಜಿಗೂ ಬಳಿಸುವರು. ಗಿಡ ಸುಟ್ಟು ಭಸ್ಮ ಮಾಡಿ ಗಂಜಿಯಲ್ಲಿ ತಕ್ಕೊಂಡರೆ, ಬೀಗು ಹರ. ಸಾಧಾ: ಬೇರು ಹಾಲಿನಲ್ಲಿ ಹಾಕಿ, ಕಾಸಿ, ಹಾಲನ್ನು ಕುಡಿಯುತ್ತಾರೆ. ಬೇರಿನಿಂದ ಹಲ್ಲು ತಿಕ್ಕುವದು ಒಳ್ಳೇದು.

**Achyranthes aspera**, *Lin.*—(Order Amarantaceæ.)

*Tam.* Nāyuruvi, nāykuruvi, širukaḍalāḍi, kēčarigam. *Tel.* Uttarēṇi, apāmārgamu. *Can.* Uttaraṇī-giḍa. *Mal.* Kaḍalāḍi. *Kon.* Kāṇṭamogri. *San.* Apāmārgaḥ, kharamañjarī, māṁsaghaṭṭi, dīrghamañjarī.

## 51. ಉದ್ದು (Black Gram).

ತ. ಉಳುನ್ದು. ತೆ. ಮಿನುಮುಲು. ತು. ಉರ್ದು. ಮ. ಉಳುನ್ನ್. ಕೊಂ. ಉಡಿದು. ಹಿಂ. ಉಡೀದ್. ಸಂ. ಮಾಷಃ, ಪಚೇಲಿಮಃ, ಕಷಾಯಂ.

**ಹುಟ್ಟು**: ಕೃಷಿಗಿಡ. **ಪುಷ್ಪ**: ಮಾರ್ಗಶಿರ, ಪುಷ್ಯ.

**ಉಪಯೋಗ**: ಸಾಧಾ: ಉತ್ತಮ ತರದ ಆಹಾರ. ಉಷ್ಣದಿಂದ ರಕ್ತಸ್ರಾವವುಳ್ಳವರಿಗೆ ಇದರ ಕಡಬು ಮಾಡಿಕೊಡುವದು ಒಳ್ಳೇದು. ಹಿಟ್ಟಿನಿಂದ ಅಂಟು ಸಹ ಮಾಡಬಹುದು. ಸಹಮೂಲ ದನಕ್ಕೆ ಆಹಾರ.

**Phaseolus Mungo, var. glaber**, *Roxb.*—(Order Leguminosæ.)

*Tam.* Uḷundu. *Tel.* Minumulu. *Can.* Uddu. *Tu.* Urdu. *Mal.* Uḷunnu. *Kon.* Uḍidu. *Hin.* Uḍīd. *San.* Māshaḥ, pačēlimaḥ, kashāyam.

## 52. ಉಪ್ಪಲಿಗೆ, ಬೆಟ್ಟದಾವರೆ ಮರ.

ತ. ಉತ್ತತಾಮರೈ. ತು. ಉಪ್ಪಲ. ಮ. ಉಪ್ಪಿಲ. ಕೊಂ. ಚಂದವೆ.

**ಹುಟ್ಟು**: ಮಲಬಾರತೀರ, ನೀಲಗಿರಿಗಳಲ್ಲಿ. **ಪುಷ್ಪ**: ಮಾರ್ಗಶಿರ, ಪುಷ್ಯ.

ಉಪಯೋಗ: ಸಾಧಾ: ಮರ ಕೆಲಸಕ್ಕೆ ಒಳ್ಳೇದು. ಎಲೆ ನಿರ್ದೋಷವಾದ್ದು; ಕಡಬು ಬೇಯಿಸುವಾಗ ಸುತ್ತುವದಕ್ಕೂ ಊಟ ಬಡಿಸುವದಕ್ಕೂ ಪ್ರಯೋಗಿಸುವರು. ಚೆಕ್ಕೆಗೆ ಗಾಯ ಮಾಡಿದರೆ, ಹಗಿನು ದೊರಕುತ್ತದೆ.

**Macaranga indica,** *Wight.*—(Order Euphorbiaceæ.)

*Tam.* Uttatāmarai. *Can.* Uppalige, beṭṭadāvare-mara. *Tu.* Uppala. *Mal.* Uppila. *Kon.* Čandaḍe.

## 53. ಉರಲಗಡ್ಡೆ, ಆಲುಗಡ್ಡೆ, ಬಟಾಟೆ (Potato).

ತ. ಉರಳಕಿಳಙ್ಗು. ತೆ. ಉರಲಗಡ್ಡ. ತು. ಪಟಾಟೆ. ಮ. ಉರುಳಕೆಳಙ್. ಕೊಂ. ಬಟ್ಟಟೊ. ಹಿಂ. ಬಟಾಟಾ.

ಉಪಯೋಗ: ಸಾಧಾ: ಈ ಗಿಡವನ್ನು ಕೊಡಗು ಮೈಸೂರ ಸೀಮೆಗಳಲ್ಲಿಯೂ ನೀಲಗಿರಿಗಳಲ್ಲಿಯೂ ಬೆಳಿಸಿ, ಗಡ್ಡೆ ಮಾರುತ್ತಾರೆ. ಅದು ಒಳ್ಳೇ ಆಹಾರ. ಅದನ್ನು ಅರದು ಸುಟ್ಟ ಚರ್ಮಕ್ಕೆ (ಬೆಂದ ಹುಣ್ಣಿಗೆ) ಹಚ್ಚುವದು ಒಳ್ಳೇದು.

**Solanum tuberosum,** *Lin.*—(Order Solanaceæ.)

*Tam.* Uraḷakiḷaṅgu. *Tel.* Uralagaḍḍa. *Can.* Urala-gaḍḍe, ālu-gaḍḍe, baṭāṭe. *Tu.* Paṭāṭe. *Mal.* Uruḷakeḷaṅṅ. *Kon.* Baṭṭaṭo. *Hin.* Baṭāṭā.

## 54. ಊರಾಳಗಿಡ, ನಾಯಿತುಳಸಿ (Ageratum).

ಹುಟ್ಟು: ಸಾಧಾರಣ.

ಉಪಯೋಗ: ಇದರ ರಸ ತೆಗೆದು ತೆಂಗಿನ ಅಥವಾ ಎಳ್ಳಿನ ಎಣ್ಣೆಯ ಸಂಗಡ ಬೇಯಿಸಿ ವಾತಕ್ಕೆ ಎಣ್ಣೆ ಮಾಡುತ್ತಾರೆ.

**Ageratum conyzoides,** *Lin.*—(Order Compositæ.)

*Can.* Ūrāḷa-giḍa, nāyituḷasi.

## 55. ಊರು ಎಳ್ಳು ಗಿಡ (Gingely Oil or Teelseed Plant).

ತ. ಎಳ್ಳು, ನೂವು. ತೆ. ಸುವ್ವುಲು. ತು. ಊರು ಯೆಳ್ತ್ರ. ಮ. ಕಾರೆಳ್ಳು. ಕೊಂ. ತೀಳು. ಸಂ. ತಿಲಃ, ಕಾರುಜಃ.

ಹುಟ್ಟು: ಕೃಷಿಗಿಡ. ಪುಷ್ಪ: ಆಷಾಢ.

ಉಪಯೋಗ: ಔಷ: ಎಣ್ಣೆ ವ್ರಣಗಳಿಗೆ ಒಳ್ಳೇದು. ಕುರ ಬಾವುಗಳು ಹಣ್ಣಾಗುವ ಹಾಗೆ ಎಲೆಗಳ ಪೋಲ್ಟಿಸ್ ಮಾಡಬಹುದು. ಎಳ್ಳನ್ನು ಅರದು ಮೂಲವ್ಯಾಧಿಗೆ ಕೊಡುತ್ತಾರೆ. ಸಾಧಾ: ಎಣ್ಣೆ ಆಹಾರಕ್ಕೂ ದೀಪಕ್ಕೂ ಬೇರೆ ಬಹಳ ತರದ ಉಪಯೋಗಕ್ಕೂ ಬರುತ್ತದೆ. ನೀರು ಸೇರದಿದ್ದರೆ, ಕೆಲವು ವರ್ಷ ವರೆಗಾದರೂ ಚೆಡ್ಡಾಗದು.

**Sesamum indicum,** *Dec.*—(Order Pedaliaceæ.)

*Tam.* Eḷḷu, nūvu. *Tel.* Nuvvulu. *Can.* Uru-yeḷḷu-giḍa. *Tu.* Ūru-eṇme. *Mal.* Kāreḷḷu. *Kon.* Tiḷu. *San.* Tila*h*, kāruja*h*.

## 56. ಎಕ್ಕ, ಎಕ್ಕೆ, ಎಕ್ಕೆಮಾಲೆ, ಅರ್ಕ ಗಿಡ
## (Gigantic Swallow Wort or Madar).

ತ. ಬದಾಬಡಮ್, ಎರುಕ್ಕು, ಅರ್ಕ್ಕಮ್. ತೆ. ಜಿಲ್ಲೇಡು, ಅರ್ಕಮು, ಮಂದಾರಮು. ತು. ಯೆಕ್ಕಮಾಲೆ. ಮ. ಎರಿಕ್ಕು, ಎರಿ. ಕೊಂ. ರೂವಿ. ಹಿಂ. ಮದಾರ್. ಸಂ. ಅರ್ಕಾಹ್ವಃ, ವಸುಕಃ, ಆಸ್ಫೋಟಃ, ಗಣರೂಪಃ, ವಿಕೀರಣಃ, ಮಂದಾರಃ, ಅರ್ಕಪರ್ಣಃ, ಆದಿತ್ಯಃ.

**ಹುಟ್ಟು:** ದಕ್ಷಿಣ ಹಿಂದುಸ್ಥಾನದ ಬೈಲುಸ್ಥಳಗಳಲ್ಲಿ. **ಪುಷ್ಪ:** ಇಡೀ ವರುಷ.

**ಉಪಯೋಗ:** ಔಷ: ಇದರಲ್ಲಿ ಬೇರು ಮುಖ್ಯವಾದದ್ದು. ಅದನ್ನು ಬೇಸಿಗೆಯಲ್ಲಿ ಹುಡುಕಿ ತೆಗದು ನೆರಳಲ್ಲಿಟ್ಟು, ಗೀಚಿದರೆ ಹಾಲು ತೋರದ ಮಟ್ಟಿಗೆ ಒಣಗಿಸಿ ಚೆಕ್ಕೆ ಪುಡಿ ಮಾಡಿ ಕುಪ್ಪಿಯಲ್ಲಿ ಇಟ್ಟುಕೊಳ್ಳಬೇಕು. ಪುಡಿಯನ್ನು ಎಣ್ಣೆಯೊಡನೆ ಹಳೇ ಹುಣ್ಣುಗಳಿಗೆ ಹಚ್ಚಿದರೆ, ಒಳ್ಳೇದು. ಎಲೆಗಳು ಮೆಣಸಿನ ಸಂಗಡ ಸರ್ಪದಂಶಕ್ಕೆ, ಎಣ್ಣೆಯಲ್ಲಿ ಕಾಸಿ ಮೈಗೆ ಹಚ್ಚಿದರೆ ದದ್ದಿಗೆ, ಅವನ್ನು ಎಣ್ಣೆಹಚ್ಚಿ ಹೊಟ್ಟೆಗೆ ಕಟ್ಟಲು ನೋವಿಗೆ ಗುಣಕರ. ಮನುಷ್ಯನು ಬಿದ್ದರೆ, ಎಲೆಗಳಿಗೆ ಎಣ್ಣೆಹಚ್ಚಿ, ಬೆಂಕೀ ಮೇಲೆ ಹಿಡಿದು ಕಾಸಿ ಸೇಕ ಕೊಡುವದು. ಚಿಗುರುಗಳ ಹಾಲು ಕಿವಿನೋವಿಗೆ. ಬೇರು, ಚೆಕ್ಕೆ ಮತ್ತು ಹಾಲು ಬಲವುಳ್ಳ ಮಲಭೇದಿ. ಗಿಡದ ಹಾಲು ವಿಶೇಷ ಗುಣವುಳ್ಳದ್ದು: ಉಪ್ಪಿನ ಸಂಗಡ ತಿಕ್ಕಿದರೆ, ಹಲ್ಲುನೋವು ಗುಣ; ಇದಲ್ಲದೆ ವಾಂತಿ ಮಾಡಿಸಲಿಕ್ಕೂ ಪಕ್ಷವಾತಕ್ಕೂ ಅಪಸ್ಮಾರಕ್ಕೂ ಕ್ರಿಮಿರೋಗಕ್ಕೂ ಜಂತುಗಳ ವಿಷಕ್ಕೂ ಕುಷ್ಠರೋಗಕ್ಕೂ ಬೀಗಗೂ ಗಂಟುವಾತಕ್ಕೂ ವಿಷಮಜ್ವರಕ್ಕೂ ಅಂಗದಾಹಕ್ಕೂ ಉಪಯೋಗ. ಇಂಗು ಎರಡು ಪಾಲು, ಕಂಕಣಖಾರ ಒಂದು ಪಾಲು ಈ ಎಲೆಗಳ ರಸದಿಂದರದು, ಸಣ್ಣ ಮೆಣಸಿನಷ್ಟು ಗುಳಿಗೆಗಳನ್ನು ಮಾಡಿ, ಒಂದು ಗುಳಿಗೆ ಗಾಯಕ್ಕೆ ಹಚ್ಚಿದರೆ, ಸರ್ಪದಂಶ ಪರಿಹಾರವಾಗುವದಂತೆ. ಇದೇ ಒಂದು ಗುಳಿಗೆಯನ್ನು ನೀರಿನಲ್ಲಿ ಸನ್ನಿಗೂ ಕೊಡಬಹುದು. ಸಾಧಾ: ಗಿಡಕ್ಕೂ ಅದರ ಕಾಯಿಗಳಿಗೂ ಉತ್ತಮ ನಾರು ಉಂಟು. ಹಾಲು ಕೆಲಸಕ್ಕೆ ಪ್ರಯೋಜನ.

**Calotropis gigantea,** *Br.*—Asclepias gigantea, *Willd.*—(Order Asclepiadaceæ.)

*Tam.* Badābaḍam, erukku, arkkam. *Tel.* Jillēḍu, arkamu, mandāramu. *Can.* Ekka, ekke, ekkemāle, arka-giḍa. *Tu.* Yekkamāle. *Mal.* Erikku, eri. *Kon.* Rūvi. *Hin.* Madār. *San.* Arkāhva*h*, vasuka*h*, āsphōṭa*h*, gaṇarūpa*h*, vikīraṇa*h*, mandāra*h*, arkaparṇa*h*, āditya*h*.

## 57. ಎಡತರಿ, ವದವಿನ, ವಡುವಾರದ ಮರ.

ತ. ವಿಡತ್ತೇರ್. ತೆ. ವೆಲುತುರು, ವೆಣುತುರು. ಸಂ. ವೀರವೃಕ್ಷಃ.

**ಹುಟ್ಟು:** ದಕ್ಷಿಣ ಹಿಂದುಸ್ಥಾನದಲ್ಲಿ. **ಪುಷ್ಪ:** ಚೈತ್ರ, ವೈಶಾಖ.

ಉಪಯೋಗ: ಔಷ: ಎಳೇ ಚಿಗುರುಗಳನ್ನು ಜಜ್ಜಿ ಕಣ್ಣುರೋಗಕ್ಕೆ ಬಳಿಸುತ್ತಾರೆ. ಸಾಧಾ: ಮರ ಘಟ್ಟಿಯಾಗಿದೆ; ಅಲಂಕಾರದ ಹೂ.

**Dichrostachys cinerea,** *W. and A.*—Desmanthus cinereus, *Willd.*—Acacia cinerea, *Spr.*—A. Dalea, *Desv.*—Mimosa cin. *Linn.*—(Order Leguminosæ.)

*Tam.* Viḍattēr. *Tel.* Veluturu, veṇuturu. *Can.* Eḍatari, vadavina, vaḍuvārada-mara. *San.* Vīravṛikshaḥ.

## 58. ಎಲವ, ಕೆಂಪು ಬೂರುಗದ ಮರ (Red Cotton Tree).

ತ. ಇಲವು, ಶಾನ್ಮಲಿ, ಕೋಂಗು, ಪೂರಣಿ, ಮುಳ್ಳಿಲವು. ತೆ. ಬೂರುಗ. ತು. ಮುಳ್ಳಾಲದ ಮರ. ಮ. ಮುಳ್ಳಿಲವ್, ಪೂಳ, ಇಲವ್. ಕೊಂ. ಸಾವರೀರೂಕು. ಸಂ. ಶಾಲ್ಮಲಿಃ, ಪೂರಣೀ, (ಕುಕ್ಕುಟವಂದಕ). ರಕ್ತಪುಷ್ಪಾ.

(ಇದೇ ಮರದ ವರ್ಣನೆ *16, a* ಎಂಬ ಅಂಕೆಯಲ್ಲಿ ಸಹ ಬರುತ್ತದೆ.)

ಉಪಯೋಗ: ಔಷ: ಇದರ ಹಸಿನು (ಅಂಟು) ಹೊಟ್ಟೇ ಅಕ್ರಮುಕ್ಕೂ ಊತಿ ರೋಗಕ್ಕೂ ಪಿತ್ತಕ್ಕೂ ಮಲಬದ್ಧಕ್ಕೂ ಹಾಲಿನಲ್ಲಿ ಕೊಡುತ್ತಾರೆ. ಬೇರಿನ ಸಿಪ್ಪೆ ವಾಂತಿ ಮಾಡಿಸುತ್ತದೆ. ಸಾಧಾ: ಹೂವಿಗೆ ಸೀಗೇ ಗುಣ. ಹತ್ತಿ ಹಾಸಿಗೆಗಳಿಗೆ ಆಗುತ್ತದೆ.

**Bombax malabaricum,** *Dec.*—(Order Malvaceæ.)

*Tam.* Ilavu, šāumali, kōṅgu, pūraṇi, muḷḷilavu. *Tel.* Būruga. *Can.* Elava, kempu būrugada-mara. *Tu.* Muḷḷālada-mara. *Mal.* Muḷḷilavu, pūḷa, ilavam. *Kon.* Sāvarī-rūku. *San.* Šālmaliḥ, pūraṇī, (kukkuṭavandaka), raktapushpā.

## 59. ಎಲೆಕಳ್ಳಿ, ದುಂಡುಕಳ್ಳಿ, ಗೂಟಕಳ್ಳಿ.

ತ. ಇಲೈಕ್ಕಳ್ಳಿ. ತೆ. ಆಕುಜೆಮುಡು. ತು. ಇರೆಕಳ್ಳಿ. ಮ. ಇಲಕಳ್ಳಿ. ಕೊಂ. ಪಾನ್ನಾನಿವಲಿ. ಸಂ. ಪತ್ರಸ್ನುಕ್, (ಶ್ವರಸನಾ).

ಹುಟ್ಟು: ಮಲಬಾರ ಚೋಳಮಂಡಲ ತೀರಗಳಲ್ಲಿ. ಪುಷ್ಪ: ಫಾಲ್ಗುಣ, ಚೈತ್ರ.

ಉಪಯೋಗ: ಔಷ: ಎಲೆಗಳ ರಸ ಭೇದಿ ಮಾಡುತ್ತದೆ. ಬೇರಿನ ಚೆಕ್ಕೆ ಬೀಗಿಗೆ ಉಪಯೋಗ. ಎಲೆಗಳ ರಸಕ್ಕೆ ಬೇವಿನ ಎಣ್ಣೆ ಕೂಡಿಸಿ ವಾತಕ್ಕೆ ಹಚ್ಚುವರು; ಅದನ್ನು ಸ್ವಲ್ಪ ಬಿಸಿ ಮಾಡಿ ಕಿವಿಗೆ ಹಿಂಡಿದರೆ, ನೋವು ಗುಣ; ಮಂದ ಕಣ್ಣಿಗೂ ಒಳ್ಳೇದು. ಎಲೆಗಳನ್ನು ಕಾಸಿ ಕಿಬ್ಬೊಟ್ಟೆಗೆ ಹಾಕಿದರೆ, ಮೂತ್ರಬುಲಾಬಾಗುವದು. ದಂಟಿನ ತಿರುಳನ್ನು ಹಸಿ ಶುಂಠೀ ಸಮೇತ ಹುಚ್ಚುನಾಯಿ ಕಚ್ಚಿದವರಿಗೆ ಹುಚ್ಚು ಕಾಣಿಸಿ ಕೊಳ್ಳುವದಕ್ಕೆ ಮುಂಚಿತಾಗಿ ಕೊಡುವದು. ಇದು ಹೆಚ್ಚು ಜಾಗರೂಕತೆಯಿಂದ ಪ್ರಯೋಗಿಸಬೇಕು.

**Euphorbia Nivulia,** *Ham.*—(Order Euphorbiaceæ.)

*Tam.* Ilaikkaḷḷi. *Tel.* Ākujemuḍu. *Can.* Elekaḷḷi, duṇḍukaḷḷi, gūṭakaḷḷi. *Tu.* Irekaḷḷi. *Mal.* Ilakaḷḷi. *Kon.* Pānnānivali. *San.* Patrasnuk, (švarasanā).

### 60. ಎರುಂಬಳ್ಳಿ, ಎರುವ ಬಳ್ಳಿ, ಅಗ್ನಿಬಳ್ಳಿ, ಬೆಕ್ಕಿನ ತೊಡ್ಡಿನ ಬಳ್ಳಿ, ಬುಡ್ಡಕಾಕರ ತೀಗೆ (Heart Seed).

ತ. ತಿರಗಮೂಲಗಮ್, ಸಮುದ್ದಿರತೋಯಮ್, ಮುಡಕೊತ್ತಾನ್, ಮುಡಕತ್ತಾನ್. ತೆ. ಬುಡ್ಡಕಾಕರ, ಉಪ್ಪರಿಂತ, ಉಲ್ಲನತೀಗೆ. ತು. ಉರುಂಡೆ ಬೂರು. ಮ. ಉೞಿಞ, ಪಾಲುರುವಂ. ಸಂ. ಶಕ್ರಲತಾ.

**ಹುಟ್ಟು**: ಸಾಧಾರಣ. **ಪುಷ್ಪ**: ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ**: ಔಷ: ನೀರಿನಲ್ಲಿ ಅರದು ಹಚ್ಚಿದರೆ, ವಾತಕ್ಕೂ ಸಂದುಹಿಡಿತಕ್ಕೂ ಬಹು ಒಳ್ಳೇದು. ಎಲೆಗಳ ಕಷಾಯ ಮಲಭೇದಿ; ಕಫೋಪದ್ರವಕ್ಕೂ ಆಗುತ್ತದೆ. ಬೇರನ್ನು ಎಣ್ಣೆಯಲ್ಲಿ ಕಾಸಿ ಮೈಗೆ ಹಚ್ಚಿದರೆ, ಪಿತ್ತದೋಷ ಹರ. ಬೆಲ್ಲದ ಸಂಗಡ ಎಣ್ಣೆಯಲ್ಲಿ ಕಾಸಿದ ಎಲೆಗಳು ಉರಿಗಣ್ಣಿಗೆ ಔಷಧ. ಹಾಲಿನಲ್ಲಿ ತೇದ ಸಮೂಲವು ಬಾವುಗಳಿಗೆ ಒಳ್ಳೇದು. ಬೇರು ಬೆವರುವದಕ್ಕೂ ಮೂತ್ರಜುಲಾಬು ಮಾಡುವದಕ್ಕೂ ಉಪಯೋಗ. ಸಾಧಾ: ಎಲೆಗಳು ಪಲ್ಯ. ಅವು ತೊಳಿಯಲಿಕ್ಕೂ ಉಪಯೋಗ.

**Cardiospermum Halicacabum**, *Lin.*—(Order Sapindaceæ.)

*Tam.* Tiragamūlagam, samuddiratōyam, muḍakottān, muḍakattān. *Tel.* Buḍḍakākara, upparinta, ullanatīge. *Can.* Ērumbaḷḷi, ēruva-baḷḷi, agni-baḷḷi, bekkina-toḍḍina-baḷḷi, buḍḍakākara-tīge. *Tu.* Urunḍe-būru. *Mal.* Uḷiṅa, pāluruvam. *San.* Śakralatā.

### 61. ಏಲಕ್ಕಿಗಿಡ (Cardamom Plant).

ತ. ಏಲಮ್, ಚಿತ್ತೇಲವ್, ಏಲರಿಶಿ, ಇರಾವಡಿ, ಇಲಾಂಜ್ಞಿ. ತೆ. ಏಲ, ಏಲಕಿ. ತು. ಏಲಕಿ. ಮ. ಏಲಮ್, ಏಲತ್ತರಿ. ಮಹಾ., ಕೊಂ. ಏಳ. ಹಿಂ. ಏಲಾಚೀ. ಸಂ. ಏಲಾ, ದ್ರಾವಿಡೀ, ಗಂಧಕುಟಿ.

**ಹುಟ್ಟು**: ಕೊಡಗು, ವೈನಾಡು, ನಾಗೂರು, ತಿರುವಂಕೋಡು, ಇವುಗಳ ಬೆಟ್ಟಗಳಲ್ಲಿ.

**ಉಪಯೋಗ**: ಔಷ: ಪಿತ್ತಹರ, ಕಾರುವದನ್ನು ನಿಲ್ಲಿಸುತ್ತದೆ. ಏಲಕ್ಕಿಯ ಕಷಾಯ ಕೆಮ್ಮಿಗೆ ಒಳ್ಳೇದು; ಕರಳುಗಳ ಅಕ್ರಮಕ್ಕೂ ಆಗುತ್ತದೆ. ಸಾಧಾ: ಪಾಯಸ ಮುಂತಾದ ಪದಾರ್ಥಗಳಲ್ಲಿ ಸೇರಿಸ ತಕ್ಕ ಒಳ್ಳೇ ಗಂಧಿಕ.

**Elettaria cardamomum**, *Maton.*—Alpinia cardamomum, *Roxb.*—Zingiber Ensal, *Gært.*—Amomum card., *Linn.*—A. racemosum, *Lam.*—A. repens, *Willd.*—(Order Scitamineæ.)

*Tam.* Ēlam, čittēlam, ēlariši, irāvaḍi, ilāňči. *Tel.* Ēla, ēlaki. *Can.* Ēlakki-giḍa. *Tu.* Ēlaki. *Mal.* Ēlam, ēlattari. *Mah., Kon.* Ēḷa. *Hin.* Ēlāčī. *San.* Ēlā, drāviḍī, gandhakuṭi.

### 62. ಒಂದೆಲಗ, ಇಲೀಕಿವೀ ಬಳ್ಳಿ (Indian Penny Wort).

ತ. ವಲ್ಲಾರೈ. ತೆ. ಮಂಡೂಕಬ್ರಹ್ಮಿಚೆಟ್ಟು, ಬೊಕ್ಕುಡುಚೆಟ್ಟು, ಛೀಕವರ್ಣಮು. ತು. ತಿಮರೆ. ಮ. ಮುತ್ತಳ್, ಕುಟಕಂ, ಕೊದೊಗಂ. ಹಿಂ. ವಲ್ಲಾರಿ. ಕೊಂ., ಮಹಾ. ಏಕಪಾನಿ. ಸಂ. ಮಂಡೂಕಪರ್ಣೀ, ಮಂಡೂಕಪತ್ರಾ, ಬ್ರಾಹ್ಮೀ, ಸತ್ಯನಾಥ.




ಹುಟ್ಟು: ಇಡೀ ಹಿಂದುಸ್ಥಾನದಲ್ಲಿ ಗದ್ದೆಗಳ ಬದಿಯಲ್ಲಿ.

ಉಪಯೋಗ: ಔಷ: ತ್ರಿದೋಷಶಮನ; ಚುರುಕು ಮಾಡುತ್ತದೆ; ಕುಷ್ಠರೋಗಕ್ಕೂ ಕರಳುಗಳ ಅಕ್ರಮಕ್ಕೂ ಮಕ್ಕಳ ಜ್ವರಕ್ಕೂ ಒಳ್ಳೇದು. ಪೆಟ್ಟು ತಾಗಿದಲ್ಲಿ ಉರಿಯಾಗದ ಹಾಗೆ ಎಲೆಗಳನ್ನರೆದು ಹಚ್ಚುವರು. ಮೂತ್ರಜುಲಾಬು ಮಾಡುತ್ತದೆ. ವ್ರಣ ಸಂಜುಗಳಿಗೆ ಹೊರಗೂ ಒಳಗೂ ಪ್ರಯೋಗಿಸಬಹುದು. ಅದರ ಪುಡಿ ಬೇಕಾದರೆ, ನೆರಳಲ್ಲಿ ಒಣಗಿಸಬೇಕು; ಬಿಸಿ ತಾಗಿದರೆ ಗುಣ ಕೆಡುವದು. ಸಾಧಾ: ಚಟ್ಣಿ ಮಾಡುತ್ತಾರೆ.

**Hydrocotyle asiatica,** *Lin.*—(Order Umbelliferæ.)

*Tam.* Vallārai. *Tel.* Maṇḍūka-brahmičeṭṭu, bokkuḍučeṭṭu, bhīkaparṇamu. *Can.* Ondelaga, ilīkivī-baḷḷi. *Tu.* Timare. *Mal.* Muttaḷ, kuṭakam, kodogam. *Hind.* Vallāri. *Kon., Mah.* Ēkapāni. *San.* Maṇḍūkaparṇī, maṇḍūkapatrā, brāhmī, satyanātha.

## 63. ಒಳ್ಳೇ ನೀಲಿ, ಹೆಣ್ಣು ನೀಲಿ (Indigo).

ತ. ಅವರಿ, ಅವಿರಿ, ಅವುರಿ, ನೀಲಿ, ಚಾಮುಣ್ಡಿ, ಕರುಂಡೋಳಿ. ತೆ. ಅವಿರಿ, ನೀಲಿ. ತು. ನೀಲಿ. ಮ. ಅವರಿ, ಅಮರಿ. ಸಂ. ವಜ್ರನೀಲಿ, ನೀಲಿನೀ, ಕ್ಲೀತಕಿಕಾ.

ಹುಟ್ಟು: ಹಿಂದುಸ್ಥಾನದಲ್ಲೆಲ್ಲಿಯೂ. ಪುಷ್ಪ: ಆಷಾಢ, ಶ್ರಾವಣ.

ಉಪಯೋಗ: ಔಷ: ಬೇರು ನಿರ್ವಿಷಗುಣವುಳ್ಳದ್ದು; ಬಾಣಂತಿಯ ನಂಜುವೆಂಬ ಮೂರ್ಛೆಗೆ ಸಹ ಕೊಡುತ್ತಾರೆ. ಎಲೆಗಳ ಪುಡಿ ಜೇನು ಕೂಡಿಸಿ ಪಿತ್ತಕೋಶದ ರೋಗವುಳ್ಳವರು ಸೇವಿಸುತ್ತಾರೆ. ಎಲೆಗಳನ್ನರೆದು ಕಜ್ಜಿಗೆ ಲೇಪಿಸಬಹುದು. ಬೇರಿನ ಕಷಾಯ ಅಶ್ಮರಿ ಎಂಬ ಮೂತ್ರಕಲ್ಲಿಗೆ ಆಗುತ್ತದೆ. ಮೂತ್ರಕಟ್ಟಿಗೆ ಎಲೆಗಳನ್ನು ಗಿವಿಚಿ ನಾಭಿಯ ಕೆಳಗೆ ಲೇಪಿಸುವರು. ಹಸಿ ಚಿಗುರುಗಳ ರಸ ಜೇನಿನೊಡನೆ ಮಕ್ಕಳ ಅಗ್ರಕ್ಕೆ ಒಳ್ಳೇದಂತೆ. ನೀಲಿಗಡ್ಡೆ ಬಾವಿಗೂ ಅಪಸ್ಮಾರಕ್ಕೂ ಕಠಿಣ ಹುಣ್ಣುಗಳಿಗೂ ದದ್ದಿಗೂ ಕೆಂಪಿರೋಗಕ್ಕೂ ಉಪಯೋಗ. ಸಾಧಾ: ಉತ್ತಮವಾದ ನೀಲ ಬಣ್ಣ.

**Indigofera tinctoria,** *Lin.*—Ind. indica, *Lam.*—Ind. sumatrana, *Gært.*—(Order Leguminosæ.)

*Tam.* Avari, aviri, avuri, nīli, čāmuṇḍi, karuṇḍōḷi. *Tel.* Aviri, nīli. *Can.* Oḷḷē-nīli, heṇṇu-nīli. *Tu.* Nīli. *Mal.* Avari, amari. *San.* Vajranīli, nīlinī, klītakikā.

## 64. ಒಳ್ಳೇ ಮೆಣಸಿನ ಬಳ್ಳಿ (Black Pepper Vine, also White Pepper, according to the preparation).

ತ. ಶೆವ್ವಿಯಮ್, ಮಿಳಗು, ಅರಿಶು. ತೆ. ಶವ್ಯಮು, ಮಿರ್‍ಯಾಲತೀಗೆ. ತು. ಯೆಷ್ಟೆಮುಣ್ಚಿ. ಮ. ಕುರುಮುದಿಳ್, ಮಿದಕು. ಹಿಂ. ಕಾಲಾಮಿರಿಚ. ಮಹಾ., ಕೊಂ. ಮಿರೇಂ. ಸಂ. ಮರಿಚಮ್, ತೀಕ್ಷ್ಣಂ, ಊಷಣಂ, ರೂಷಕಂ.

**ಉಪಯೋಗ**: ಔಷ: ಚುರುಕು ಕೊಡುವ ಗುಣ; ಹೊಟ್ಟೆಗೆ ಒಳ್ಳೇ ಅಗ್ನಿ ದೀಪಕ; ಸನ್ನಿರೋಗದ ವಾಂತಿ ನಿಲ್ಲಿಸುತ್ತದೆ. ಲೇಪ ಮಾಡಿದರೆ, ದೀರ್ಘಕಾಲದ ವಾತಕ್ಕೆ ಒಳ್ಳೇದು. ಬೀಜದ ಕಷಾಯ ಪಾಷಾಣದ ವಿಷಕ್ಕೂ, ಎಣ್ಣೆಯಲ್ಲಿ ಕಾಸಿದ ಎಲೆಗಳ ರಸವು ಸಂಜಿಗೂ ಆಗುತ್ತದೆ; ಇದಲ್ಲದೆ ಮೂರ್ಛೆಗೂ ಪಕ್ಷವಾತಕ್ಕೂ ಶ್ರೋಣಿತವಾತಕ್ಕೂ ಉಪಯೋಗ. ಮಿತಿ ಮೀರಿ ತಕ್ಕೊಂಡರೆ, ವಿಷದಂತೆ ಹೊಟ್ಟೆ ಉರಿಯುವದು. ಸಾಧಾ: ಸಂಬಾರಜೀನಸು.

**Piper nigrum**, *Lin.*—P. aromaticum, *Poir.*—(Order Piperaceæ.)

*Tam.* Ševviyam, miḷagu, arišu. *Tel.* Šavyamu, miryālatīge. *Can.* Oḷḷē-meṇasina-baḷḷi. *Tu.* Yeḍḍe-munči. *Mal.* Kuru-muḷagu, miḷagu. *Hin.* Kālā-miriči. *Mah., Kon.* Mīre. *San.* Maričam, tīkshṇam, ūshaṇam, rūshakam.

## 65. ಓಮ, ವೋಮ, ಅಜಾಮೂಲ ಗಿಡ (Bishop's Weed or Omum Plant).

ತ. ಓಮಮ್, ಅಜಮೋದಗಮ್. ತೆ. ಓಮಮು, ಅಜಮೋದ, ದೀಪ್ಯಮು. ತು. ವೋಮ. ಮ. ಓಮಮ್. ಕೊ. ವೋಂವೊ. ಹಿ. ಅಜವಾನ್. ಸಂ. ಬ್ರಹ್ಮದರ್ಭ, ಅಜಮೋದ, ಯವಾನಿಕಾ, ಅಗ್ನಿವರ್ಧನ, ದೀಪ್ಯಕಮ್, ದೀಪ್ಯಕಃ.

**ಹುಟ್ಟು**: ಕೃಷಿಗಿಡ (ಮುಖ್ಯವಾಗಿ ಬಂಗಾಳದಲ್ಲಿ). ಪುಷ್ಪ: ಮಾರ್ಗಶಿರ, ಪುಷ್ಯ.

**ಉಪಯೋಗ**: ಔಷ: ಓಮವು ತೀಕ್ಷ್ಣವಾದ ಸುಗಂಧವುಳ್ಳದ್ದಿದ್ದು ಊರೌಷಧಗಳಲ್ಲಿ ವಿಶೇಷವಾಗಿರುತ್ತದೆ. ಇದರಲ್ಲಿ ಸಾಸಿವೆಯಂಥ ಉತ್ತೇಜಕ ಗುಣವೂ, ಕಿರಿಯಾತಿನಂಥ ಸ್ವಲ್ಪ ಕಹಿ ಗುಣವೂ, ಹಿಂಗಿನಂಥ ಶಳವುನಿವಾರಕ ಗುಣವೂ ಕೂಡಿರುತ್ತವೆ. ಇದರ ಸಾಧಾರಣ ಉಪಯೋಗದಿಂದ ಉಗುಳುನೀರು ಹೆಚ್ಚುತ್ತದೆ, ಜಠರದ್ರವ ವೃದ್ಧಿಸುತ್ತದೆ. ಒಟ್ಟಾರೆ ಇದು ಉತ್ತೇಜಕವಾಗಿಯೂ ವಾಯುಹರವಾಗಿಯೂ ಅಗ್ನಿದೀಪಕವಾಗಿಯೂ ಇರುತ್ತದೆ. ಅಜೀರ್ಣದಿಂದ ಕಾರುವದು, ಆಹಾರದೋಷದಿಂದ ಉಂಟಾಗುವ ಹೊಟ್ಟೆನೋವು ಅಥವಾ ಅತಿಸಾರ, ಸಾಧಾರಣ ವಾಯುವುಪದ್ರ, ಕಿರಿಹೊಟ್ಟೆ ಉಬ್ಬೋಣ, ಮೂರ್ಛೆ, ನಿತ್ರಾಣ, ಕೀಳ್ಕರುಳುಗಳ ವ್ಯಾಧಿ, ಛರ್ದ್ಯಾತಿಸಾರ, ಮುಖ್ಯವಾಗಿ ಮಕ್ಕಳ ಅತಿಸಾರ, ವಾಯುಸಮ್ಮಂಧವಾದ ಉದರಶೂಲೆ, ಇವುಗಳಲ್ಲಿ ಓಮದ ಸತ್ವ ತೆಗೆದುಕೊಳ್ಳುವದು ಬಹಳ ಗುಣಕರ. ಸತ್ವ ತೆಗೆಯಲಿಕ್ಕೆ ಓಮವನ್ನು ಜಜ್ಜಿ ಒಂದು ತೆಳ್ಳಗಾದ ವಸ್ತ್ರದಲ್ಲಿ ಕಟ್ಟಿ, ನೀರಿನಲ್ಲಿ ಬಟ್ಟಿ ಇಳಿಸುವದು. ಬಟ್ಟಿ ಇಳಿಸಿ ಎಣ್ಣೆ ಸಹ ತೆಗೆಯುತ್ತಾರೆ. ಹಾಗೆ ತೆಗೆದ ಎಣ್ಣೆಯ ೧-೩ ತಟಕುಗಳನ್ನು ಒಂದಿಷ್ಟು ಸಕ್ಕರೆಯಲ್ಲಿ ಹಾಕಿ, ಅಥವಾ ಅರಬಿ ಗೋಂದಿನ ಸಂಗಡ ಲೇಹ್ಯ ಮಾಡಿಕೊಡಬಹುದು. ಓಮದ ನೀರು ಭೋಜನದೋಷದಿಂದುಂಟಾಗುವ ಅಥವಾ ವಾಂತಿಭ್ರಾಂತಿಯ ಅತಿಸಾರದಲ್ಲಿ ಅಮೂಲ್ಯ ಔಷಧವಾಗಿರುತ್ತದೆ. ಮಕ್ಕಳಿಗಾದರೆ, ಅವರ ಪ್ರಾಯಕ್ಕನುಸಾರವಾಗಿ, ಒಂದು ಚಾಸೌಟಿನಿಂದ ಮೇಜಿನ ಸೌಟಿನ ವರೆಗೆ ಕೊಡಬಹುದು.

**Carum copticum,** *Benth.*—Ptyochotis coptica, *Dec.*—Carum Ajowan, *Dec.*—(Order Umbelliferæ.)

*Tam.* Ōmam, ajamōdagam. *Tel.* Ōmamu, ajamōdu, dīpyamu. *Can.* Ōma, vōma, ajāmūla-giḍa. *Tu.* Vōma. *Mal.* Ōmam. *Kon.* Vōnvo. *Hin.* Ajavān. *San.* Brahmadarbha, ajamōda, yavānikā, agnivarddhana, dīpyakam, dīpyakaḥ.

## 66. ಕಂಚಿ, ಕಾಡು ಕುಂಬಳ ಮರ.

ತ. ಆಕುಪ್ಪೂವರಶು. ಮ. ಕಾಂಚಿ.

ಹುಟ್ಟು: ಕೊಂಕಣತೀರ, ಮಲಬಾರದಲ್ಲಿ. ಪುಷ್ಪ: ಮಾಘ, ಫಾಲ್ಗುಣ.

ಉಪಯೋಗ: ಔಷ: ಬೇರಿನ ಕಷಾಯವನ್ನು ಮೈಯಲ್ಲಿರುವ ಬಾವು ಹೋಗು ವದಕ್ಕೆ ಕೊಡುತ್ತಾರೆ. ಶ್ರೋಣಿತವಾತಕ್ಕೆ ಅದರದು ಒಂದು ಲೇಪ ಮಾಡುವದು.

**Trewia nudiflora,** *Lin.*—Rottlera indica, *Willd.*—Tetragastris ossea, *Gært.*—(Order Euphorbiaceæ.)

*Tam.* Ākupūvarašu. *Can.* Kañči, kāḍu-kumbaḷa-mara. *Mal.* Kāñči.

## 67. ಕಂಟಕಾರಿ, ನೆಲಗುಳ್ಳ, ರಾಮಗುಳ್ಳ ಗಿಡ.

ತ. ಕಣ್ಡಙ್ಕತ್ತರಿ, ಉದರವಣಿ, ನಿತಿಗಮ್. ತೆ. ನೇಲಮುಲಕ, ನೇಲಮುಲ್ಲಾಕು, ವ್ರಾಕುಡು, ಪಿನ್ನ ಮುಲಕ. ತು. ಗುಳ್ಳ. ಮ. ವೆಳ್ಳೋಟ್ಟುವಳುತಿನ. ಕೊಂ. ಚಿಂಚರ್ಟಿ. ಸಂ. ಕಂಟಕಾರಿ, ವ್ಯಾಘ್ರೀ.

ಹುಟ್ಟು: ಪಶ್ಚಿಮಪೂರ್ವತೀರಗಳಲ್ಲಿ. ಪುಷ್ಪ: ಇಡೀ ವರುಷ.

ಉಪಯೋಗ: ಔಷ: ಕೆಮ್ಮಿಗೂ ಉಬ್ಬಸಕ್ಕೂ ಗಂಟ್ಲನೋವಿಗೂ ಮೂತ್ರ ಕಟ್ಟಿಗೂ ಆಗುತ್ತದೆ. ಸುಡುವ ಬೀಜಗಳ ಹೊಗೆ ಹಲ್ಲುನೋವಿಗೆ ಒಳ್ಳೇದು. ದಂಟು ಹೂ ಕಾಯಿಗಳನ್ನು ಉರಿಗಾಲಿಗೆ ಲೇಪಿಸಿ, ನೆಗಡಿಗೂ ಉದರವಾಯುವಿಗೂ ಜ್ವರಕ್ಕೂ ಕೊಡುವದು.

**Solanum xanthocarpum,** *Schr. and Wendl.*—S. Jacquini, *Willd.*—S. diffusum, *Roxb.*—S. virginianum, *Jacq.*—(Order Solanaceæ.)

*Tam.* Kanḍaṅkattari, udaravaṇi, nitigam. *Tel.* Nēlamulaka, nēlamullāku, vrākuḍu, pinnamulaka. *Can.* Kaṇṭakāri, nelaguḷḷa, rāmaguḷḷa-giḍa. *Tu.* Guḷḷa. *Mal.* Veḷḷōṭṭuvaḷutina. *Kon.* Čiṅčarṭi. *San.* Kaṇṭakāri, vyāghrī.

## 68. ಕಂದಗಡ್ಡೆ, ಕಾಡು ಸೂರ್ಣ ಗಡ್ಡೆ (Purple-stalked Dragon).

ತ. ಕಾಟ್ಟುಕ್ಕರಣೈ. ತೆ. ಅಡವಿಕಂದ, ಕಂದಗಡ್ಡ. ತು. ಕಾಟ್‌ಕೇನೆ. ಮ. ಕಾಟ್ಟುಚೇನ. ಕೊಂ. ಕಾಡುಸೂರ್ನು. ಹಿಂ. ಜಂಗ್ಲಿಕಂದಿ. ಸಂ. ಕಾನನಕಂದ.

ಉಪಯೋಗ: ಔಷ: ಕಾಡುಗಳಲ್ಲಿ ಸಿಕ್ಕುವಂಥ ಇದರ ಗಡ್ಡೆ ಉಸುರುಸಿಕ್ಕಿಗೂ ಎಳವುರೋಗಕ್ಕೂ ಮೂಲವ್ಯಾಧಿಗೂ ಉಪಯೋಗ. ಸಾಧಾ: ಕೆಲವು ಕಡೆಯಲ್ಲಿ

ಹುಳಿ ಹಾಕಿ ಬೇಯಿಸಿ ತಿನ್ನುತ್ತಾರೆ, ಇಲ್ಲವೆ ಮೇಲೋಗರ ಮಾಡುತ್ತಾರೆ. ಬರೇ ತಿಂದರೆ, ಬಾಯಿ ತುರಿಸುವದು; ಜಾಗರೂಕತೆಯಿಂದ ಉಪಯೋಗ.

**Amorphophallus dubius,** *Bl.*—Dracontium polyphyllum, *Denst.*—(Order Aroideæ.)

*Tam.* Kāṭṭukkaraṇai. *Tel.* Aḍavikanda, kandagaḍḍa. *Can.* Kanda-gaḍḍe, kāḍu-sūrṇa-gaḍḍe. *Tu.* Kāṭu-kēne. *Mal.* Kāṭṭu-čēna. *Kon.* Kāḍu-sūrnu. *Hin.* Jaṅgli-kandi. *San.* Kānana-kanda.

## 69. ಕಂದರೊಳ, ಜೋಗಿಯರಳೆ, ಹೂವರಸಿ, ಬಂಗಾಳಿ, ಅಡವಿಬೆಂಡೇ ಮರ (Portia Tree).

ತ. ಪೂವರಶು, ಪೂಪ್ಪರುತ್ತಿ. ತೆ. ಗಂಗರಾವಿಚೆಟ್ಟು. ತು. ಜೋಗಿ ಮರ. ಮ. ಪೂವರಚು, ಕಲ್ಲಾಲ್, ಪೂಪರುತ್ತಿ. ಸಂ. ಕುನ್ದಃ, ಕುಬೇರಕಃ, ನನ್ದೀವೃಕ್ಷಃ.

ಹುಟ್ಟು: ಮಲಬಾರತೀರ, ಬಂಗಾಳ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಕಾಯಿ ಮತ್ತು ಚೆಕ್ಕೆಯ ಕಷಾಯ ಸಂಜೆಗೆ ಆಗುತ್ತದೆ. ಸಾಧಾ: ಮರ ಕೆಲಸಕ್ಕೆ ಒಳ್ಳೇದು. ಕಾಯಿ ಹಳದಿ ಬಣ್ಣಕ್ಕೆ ಉಪಯೋಗ.

**Thespesia populnea,** *Corr.*—Hibiscus populneus, *Lin.*—H. populneoides, *Roxb.*—Malvaviscus populneus, *Gaert.*—(Order Malvaceæ.)

*Tam.* Pūvarašu, pūpparutti. *Tel.* Gaṅgarāvičeṭṭu. *Can.* Kandaroḷa, jōgi-yaraḷe, hūvarasi, baṅgāḷi, aḍavibeṇḍe-mara. *Tu.* Jōgi-mara. *Mal.* Pūvaraču, kallāl, pūparutti. *San.* Kunda*h*, kubēraka*h*, nandīvṛiksha*h*.

## 70. ಕಕ್ಕೆ, ಕೊಂದೆ, ಆರಗಿನ ಮರ, ಆರಗ್ವಧ, ಆರೇವತ ಮರ (Pudding Pipe Tree, or Indian Laburnum).

ತ. ಕೊನ್ನೆ, ಇರಾಜವಿರುಟ್ಟಮ್. ತೆ. ರೇಲಚೆಟ್ಟು, ಆರಗ್ವಧಮು, ಕೋಲಪೆನ್ನ. ತು. ಕೊಂಡೆ. ಮ. ಕೊನ್ನೆ. ಕೊಂ. ಕಕ್ಕಾಯಿ. ಸಂ. ರಾಜವೃಕ್ಷ, ಅಂತ್ರದ್ರು, ಸುವರ್ಣಕ.

ಹುಟ್ಟು: ಅಡವಿ ಘಟ್ಟಗಳಲ್ಲಿ. ಪುಷ್ಪ: ವೈಶಾಖ, ಜ್ಯೇಷ್ಠ.

ಉಪಯೋಗ: ಔಷ: ಬೇರು ಜ್ವರಕ್ಕೂ ಮಲಭೇದಿ ಮಾಡಲಿಕ್ಕೂ, ಚೆಕ್ಕೆ ಎಲೆಗಳು ಬೀಗಿಗೂ ಕಾಮಿಲೆಗೂ ಅನ್ನಕೋಶದ ಪೀಡೆಗೂ ಬೊಕ್ಕೆಗಳಿಗೂ ಉಪಯೋಗ. ಬೀಜದ ಸುತ್ತಲಿರುವ ಸೀಯಾದ ತಿರುಳು ಮಕ್ಕಳಿಗೆ ಮಲಶೋಧನೆ ಮಾಡಿಸುವದು. ಸಾಧಾ: ಕಷಾಯ ಬಣ್ಣಕ್ಕೆ ಪ್ರಯೋಗ.

**Cassia Fistula,** *Lin.*—C. rhombifolia, *Roxb.*—(Order Leguminosæ.)

*Tam.* Konrai, irājaviruṭṭam. *Tel.* Rēlačeṭṭu, āragvadhamu, kōlapenna. *Can.* Kakke, konde, āragina-mara, aragvadha, ārēvata-mara. *Tu.* Konde. *Mal.* Konne. *Kon.* Kakkāyi. *San.* Rājavṛiksha, antradru, suvarṇaka.

## 71. ಕಗ್ಗಲಿ, ಕೆಂಪು ಖೈರದ ಜಾಲಿ, ಶಮೆ, ತರೇದ ಮರ.

ತ. ಕರುಂಗಾಳಿ. ತೆ. ಚಂದ್ರಚೆಟ್ಟು, ಖದಿರಮು. ಮ. ಕರಿಞ್ಞಾಲಿ. ಸಂ. ಖದಿರಃ, ಹೋಮವೃಕ್ಷ, ಮೃದುಪತ್ರಿಕಾ.

ಹುಟ್ಟು: ವಿಶೇಷವಾಗಿ ತಿರುವಂಕೋಡದಲ್ಲಿ. ಪುಷ್ಪ: ಆಷಾಢ, ಶ್ರಾವಣ.

ಉಪಯೋಗ: ಸಾಧಾ: ಹಗಿನು ಕೊಡುತ್ತದೆ. ಮರ ಬಹಳ ಘಟ್ಟಿ.

**Acacia sundra,** *Dec.*—A. chundra, *Willd.*—Mimosa sundra, *Roxb.*—(Order Leguminosæ.)

*Tam.* Karuṅgāḷi. *Tel.* Čandračeṭṭu, khadiramu. *Can.* Kaggali, kempu-khairada jāli, šame, tarēda-mara. *Mal.* Kariñāli. *San.* Khadira*h*, hōma-vṛiksha, mṛudupatrikā.

## 72. ಕಚೋರ, ಕಚು, ಸಪ್ಪಂಗ ಗಿಡ (Long Zedoary).

ತ. ಕತ್ತೂರಿಮಞ್ಚಳ್, ನಿರ್ವಿಷಂ. ತೆ. ಕಚೋರಮು, ಕಚ್ಚೂರಮು. ಮ. ಅಡವಿಕಚ್ಚೋಲ. ಹಿಂ. ಪತ್ತಂಗಲಕಡಿ. ಸಂ. ಚೋರ, ದುಷ್ಪತ್ರ.

ಉಪಯೋಗ: ಔಷ: ಬೇರು ಉದರವಾಯುವಿಗೂ ಉರುಳಿಕಾಯಿಯೂ ಅಕ್ರಮಕ್ಕೂ ಆಗುತ್ತದೆ. ಅದಕ್ಕೆ ಚುರುಕು ಕೊಡುವ ಗುಣ. ಸಾಧಾ: ಪರಿಮಳ. ಬಣ್ಣಕ್ಕೆ ಮತ್ತು ಕೆಂಪು ಶಾಯಿಗೆ ಉಪಯೋಗ.

**Curcuma latifolia,** *Rosc.*—(Order Scitamineæ.)

*Tam.* Kattūrimañčaḷ, nirvisham. *Tel.* Kačōramu, kaččūramu. *Can.* Kačōra, kaču, sappaṅga-giḍa. *Mal.* Aḍavi-kaččōla. *Hin.* Pattaṅga-lakaḍi. *San.* Čōra, dushpatra.

## 73. ಕಚ್ಚೂರ.

ತ. ಕಚ್ಚೋಲಕ್ಕಿಳಂಗು. ತೆ. ಚಂದ್ರಮೂಲ. ಮ. ಕಚ್ಚೂರಂ. ಕೊಂ. ಕಚ್ಚೂರು. ಸಂ. ಸುಗಂಧವಚ.

ಹುಟ್ಟು: ತೋಟಗಳಲ್ಲಿ. ಪುಷ್ಪ: ಭಾದ್ರಪದ, ಆಶ್ವೀಜ.

ಉಪಯೋಗ: ಔಷ: ಗಡ್ಡೆಯ ಪುಡಿಯನ್ನು ಜೇನಿನ ಸಂಗಡ ಕೆಮ್ಮಿಗೂ ಶ್ವಾಸಕೋಶದ ಅಕ್ರಮಕ್ಕೂ ಕೊಡಬಹುದು. ಅದನ್ನು ಹಾಕಿ ಕಾಸಿದ ಎಣ್ಣೆ ಮೂಗು ಕಟ್ಟಿಗೂ ನೆಗಡಿಗೂ ಹಚ್ಚುವದು. ಸಾಧಾ: ಪರಿಮಳ.

**Kæmpferia galanga,** *Lin.*—K. humilis, *Salisb.*—K. plantaginifolia, *Salisb.*—Alpinia sessilis, *Kœn.*—(Order Scitamineæ.)

*Tam.* Kaččolakkiḷaṅgu. *Tel.* Čandramūla. *Can.* Kaččūra. *Mal.* Kaččūram. *Kon.* Kaččūru. *San.* Sugandhavača.

## 74. ಕಟುಕರೋಹಿಣಿ.

ತ. ಕಟುರೋಹಿಣಿ. ತೆ. ಕಟುಕರೋಹಿಣಿ. ಮ. ಕಟುಕರೋಹಿಣಿ, ಕಟುಕಿರಮಣಿ. ಕೊಂ. ಕಟುಕರೋಹಿಣಿ. ಸಂ. ಕಟುಕರೋಹಿಣೀ, ಕೃಷ್ಣಭೇದಾ, ಲಿಪ್ತಾಂಗಿ.

ಹುಟ್ಟು: ಘಟ್ಟದ ಮೇಲೆ.

ಉಪಯೋಗ: ಔಷ: ಬೇರು ಮತ್ತು ಎಲೆಗಳು ನರಗಳ ಮಂದತ್ವಕ್ಕೂ ಪಕ್ಷ ವಾತಕ್ಕೂ ಸ್ಥಿರತಪ್ಪಿದ್ದಕ್ಕೂ ಭೇದಿ ಮಾಡುವದಕ್ಕೂ ಉಪಯೋಗ. ಈ ಔಷಧ ಸೇವಿಸುವಲ್ಲಿ ಜಾಗ್ರತೆ ಇರಬೇಕು; ಯಾಕಂದರೆ ಮಿತಿ ಮೀರಿ ತಕ್ಕೊಂಡರೆ, ಜುಲಾಬು ಆಗುವದು.

**Helleborus niger,** *Lin.*—H. altifolius, *Hayne.*—H. grandiflorus, *Salisb.*—(Order Ranunculaceæ.)

*Tam.* Katurōhiṇi. *Tel., Can.* Katukarōhiṇi. *Mal.* Katukarōhiṇi, kaṭukiramaṇi. *Kon.* Kaṭukarohiṇi. *San.* Kaṭurōhiṇī, kṛishṇabhēdā, lipṭāṅgi.

## 75. ಕಡಗೋಲು, ಗೊಂದಹಣ್ಣು, <u>ಗೂದೆ</u>, ಗೂದೆಕಟ್ಟು, ಚಪ್ಪರಬದನೆಕಾಯಿ, ತಕ್ಕಾಳಿ ಗಿಡ (Love Apple or Tomato).

ತ. ಶೀಮೈಮಣತ್ತಕ್ಕಾಳಿ, ಎರುಮೈತ್ತಕ್ಕಾಳಿ. ತೆ. ಟಕ್ಕಲಿಪಂಡು, ಕರ್ಪೂರವಂಕಾಯಿ. ಮ. ಪೇತಕ್ಕಾಳಿ.

ಉಪಯೋಗ: ಸಾಧಾ: ಹಣ್ಣು ತಿನ್ನುತ್ತಾರೆ.

**Lycopersicum esculentum,** *Mill.*—Solanum Lycopersicum, *Lin.*—(Order Solanaceæ.)

*Tam.* Šimaimaṇattakkāḷi, erumaittakkāḷi. *Tel.* Ṭakkalipaṇḍu, karpūravankāyi. *Can.* Kaḍagōlu, gondahaṇṇu, gūde, gūdekaṭṭu, čapparabadanekāyi, takkāḷi-giḍa. *Mal.* Pētakkāḷi.

## 76. ಕಡಲೆ (Chicken Pea, Bengal Gram).

ತ. ಕಡಲೈ, ಮಞ್ಚೂರಮ್. ತೆ. ಸೆನಗಲು, ಚಣಕಮುಲು. ತು. ಕಡಲೆ. ಮ. ಕಟಲ. ಕೊಂ. ಚಣೊ. ಹಿಂ. ಚನಾ. ಸಂ. ಚಣಕಃ, ಕಳಾಯ, ಪುಟಸಂಜಾ.

ಹುಟ್ಟು: ಕೃಷಿಗಿಡ. ಪುಷ್ಪ: ಭಾದ್ರಪದ, ಆಶ್ವೀಜ.

ಉಪಯೋಗ: ಔಷ: ಎಲೆಗಳು ಮೂತ್ರಜುಲಾಬು ಮಾಡುತ್ತವೆ. ಗುಣ ತಂಪು, ಆದದರಿಂದ ಜ್ವರವಿರುವವರಿಗೆ ಉಪಯೋಗ. ಹುರಿದ ಬೀಜ ವಾಯುವಿಗೂ ಮೂತ್ರ ಹಿಡಿತಕ್ಕೂ ಆಗುತ್ತದೆ. ಸಾಧಾ: ಪಲ್ಯ. ದನಕ್ಕೆ ಪುಷ್ಟಿ ಕೊಡುತ್ತದೆ. ಮೈಸೂರ ಸೀಮೆಯಲ್ಲಿ ಎಳೆ ಗಿಡಗಳ ಮೇಲೆ ವಸ್ತ್ರ ಹರವಿ ಮಂಜಿನ ನೀರನ್ನು ಹಿಂಡಿ ಪಾನಕ ಮಾಡುತ್ತಾರೆ.

**Cicer arietinum,** *Lin.*—(Order Leguminosæ.)

*Tam.* Kaḍalai, mañčūram. *Tel.* Senagalu, čaṇakamulu. *Can.* Kaḍale. *Tu.* Kaḍale. *Mal.* Kaṭala. *Kon.* Čaṇo. *Hin.* Čanā. *San.* Čaṇakaḥ, kaḷāya, puṭasañjā.

### 77. ಕಡವ, ಕಾಡಂಬ, ಕದಂಬ, ಕಡಹದ ಮರ (Cadamba).

ತ. ಕಡಂಬಮ್. ತೆ. ಕದಂಬಮು, ನೀಪಮು, ಪ್ರೇಂಖಣಮು, ನೃಪಾಲಕದಂಬಮು. ಮ. ಕಟಂಪು, ನೀಪಂ. ಸಂ. ನೀಪಃ, ಪ್ರಿಯಕಃ, ಕಾದಂಬರ್ಯಃ, ನದೀಜಃ, ದಾಸವೃಕ್ಷಃ.

**ಹುಟ್ಟು:** ಅಡವಿಗಳು, ಹೆಚ್ಚಾಗಿ ಬಂಗಾಳದಲ್ಲಿ. **ಪುಷ್ಪ:** ಚೈತ್ರ, ವೈಶಾಖ.

**ಉಪಯೋಗ:** ಸಾಧಾ: ಶೃಂಗಾರದ ಮರ. ಹೂ ಅಂಬಲಿ ಮಾಡಬಹುದು. ಮರ ಕೆಲಸಕ್ಕೆ ಆಗುತ್ತದೆ.

**Anthocephalus Cadamba,** *Miq.*—Nauclea Cadamba, *Roxb.*—Sarcocephalus cadamba, *Kurz.*—(Order Rubiaceæ.)

*Tam.* Kaḍambam. *Tel.* Kadambamu, nīpamu, prēkhaṇamu, nṛipālakadambamu. *Can.* Kaḍava, kāḍamba, kadamba, kaḍahada-mara. *Mal.* Kaṭampu, nīpam. *San.* Nīpa*h*, priyaka*h*, kādambarya*h*, nadīja*h*, dāsavṛiksha*h*.

### 78. ಕಣಗಲ, ಕಳಿಗಳ ಗಿಡ, ಕಾಡುಗೆಣಸು ಗಡ್ಡೆ (Tapioca, Bitter Cassava Plant).

ತ. ಮಲೈಚ್ಚಕ್ಕರೈವಳ್ಳಿ, ಮರವಳ್ಳಿಕ್ಕಿೞಙ್ಗು. ಮ. ಮರವೇಲಿ, ವೇಲಿಕಿೞಙ್, ಮರಕ್ಕಿೞಙ್, ಪೂಳಕ್ಕಿೞಙ್, ಚೀನಕಂಟಲ್.

**ಹುಟ್ಟು:** ಮಲಬಾರತೀರ, ತಿರುವಂಕೋಡು. **ಪುಷ್ಪ:** ಚೈತ್ರ, ವೈಶಾಖ.

**ಉಪಯೋಗ:** ಔಷ: ಬೇರಿನ ಸಿಪ್ಪೆ ಕೆಟ್ಟ ಹುಣ್ಣುಗಳಿಗೆ ಉಪಯೋಗ. ಸಾಧಾ: ಹಸಿ ಬೇರಿನ ಹಿಟ್ಟು ಒಳ್ಳೇ ಆಹಾರ. ಅದಕ್ಕೆ ವ್ಯಾಪಾರದಲ್ಲಿ ತಪಿಯೋಕ ಎಂಬ ಹೆಸರುಂಟು. ತಿರುವಂಕೋಡಿನಲ್ಲಿ ಬಹು ಜನರು ಆಷಾಢ ಶ್ರಾವಣ ಭಾದ್ರಪದ ತಿಂಗಳುಗಳಲ್ಲಿ ಅದರಿಂದಲೇ ಜೀವನ ಮಾಡುತ್ತಾರೆ. ಬೇರು ಬೇಯಿಸದಿದ್ದರೆ, ವಿಷ. ಈ ಗಿಡವು ಸ್ವಲ್ಪ ಕಡಿಮೆ ಎಲ್ಲಾ ತರದ ಮಣ್ಣಿನಲ್ಲಿ ಬದುಕುತ್ತದೆ; ಅದನ್ನು ಬೆಳಿಸುವ ಕೆಲಸವು ದೊಡ್ಡದಲ್ಲ, ಎರಡು ತಿಂಗಳು ಮಾತ್ರ ಅದಕ್ಕೆ ಮಳೆಯಾಗಲಿ ನೀರಾಗಲಿ ಅವಶ್ಯವು. ಅದರ ಉತ್ಪನ್ನವು ಬೇರೆ ಹುಡಿ ಬಿತ್ತುವದಕ್ಕಿಂತ ಹೆಚ್ಚಿನದು. ಅದನ್ನು ವ್ಯಾಪಾರಕ್ಕೂ ಆಹಾರಕ್ಕೂ ತಯಾರು ಮಾಡುವಂಥಾದ್ದು ಸುಲಭ, ಮತ್ತು ಅದು ಆಹಾರಕ್ಕೆ ಬಹು ಒಳ್ಳೇದಾಗಿದೆ. ನೂರು ಸಲೆ ಗಜದ ಸ್ಥಳದಲ್ಲಿ ಆಗುವ ಉತ್ಪನ್ನವು ಎರಡು ಜನರಿಗೆ ೧೦ ತಿಂಗಳಿನ ಆಹಾರ ಕೊಡುವದು, ಇಲ್ಲವೆ ಒಂದು ಮುಡಿ ಬಂಜರು ಭೂಮಿಯದು ೭೦ ಅಥವಾ ೮೦ ಮಂದಿಗೆ ಒಂದು ವರ್ಷಕ್ಕೆ ಸಾಕಾಗುವದು. ಹೀಗಾಗಿ ಖಾಲಿ ಸ್ಥಳಗಳಲ್ಲಿ ಈ ಪ್ರಯೋಜನವುಳ್ಳ ಗಿಡವನ್ನು ನಟ್ಟು ಬೆಳಿಸಿದರೆ, ಬಹಳ ಒಳ್ಳೇದೆಂದು ತೋರುತ್ತದೆ.

ಪ್ರಯೋಗ ಎರಡು ತರದ್ದು. ಗಡ್ಡೆಯನ್ನು ತೊಳದು ಸಿಪ್ಪೆ ತೆಗದು, ತುಂಡು ಮಾಡಿ ಬೇಯಿಸಿ, ಉಪ್ಪು, ಮೆಣಸು, ತೆಂಗಿನಕಾಯಿ, ತೆಂಗಿನ ಎಣ್ಣೆ, ಅರಸಿನ ಮುಂತಾದ ಮಸಾಲೆ ಮಾಡಿ ಹಾಕಿ ತಿನ್ನುವದುಂಟು.

ಸಾಧಾರಣವಾಗಿ ಗಡ್ಡೆಯಿಂದ ಹಿಟ್ಟು ಮಾಡುತ್ತಾರೆ. ಅದಕ್ಕೂ ಎರಡು ರೀತಿ ಉಂಟು: ಮನೇ ಖರ್ಚಿಗಾದರೆ, ಗಡ್ಡೆಯನ್ನು ತೊಳದು, ಸಿಪ್ಪೆ ತೆಗದು, ಗಡ್ಡೆಯನ್ನು ಉದ್ದಕ್ಕೆ ಸೀಳಿ, ನಡು ನಾರೂ ಬಿಳೇ ಹೊದಿಕೆಯನ್ನೂ ಬಿಸಾಟು, ತುಂಡು ತುಂಡು ಮಾಡಬೇಕು. ಮಾಡಿದ ತುಂಡುಗಳನ್ನು ಎರಡು ಮೂರಾವರ್ತಿ ತೊಳದು, ಸ್ವಲ್ಪ ಬೇಯಿಸಿ, ತಿರಿಗಿ ತೊಳದು, ಬಿಸಿಲಿನಲ್ಲಿ ಚನ್ನಾಗಿ ಒಣಗಿಸಬೇಕು. ಈ ಪ್ರಕಾರ ಒಣಗಿಸಿದ ತುಂಡುಗಳು ಕೆಲವು ತಿಂಗಳ ವರೆಗೆ ಕೆಡದೆ ಇರುವವು. ಅಡಿಗೆಗೆ ಬೇಕಾದಷ್ಟು ತೆಗದು ಕುಟ್ಟಿ, ಹಿಟ್ಟು ಮಾಡಬಹುದು.

ವ್ಯಾಪಾರಕ್ಕಾದರೆ, ಅವರು ಅರರುತ್ ಎಂಬ ಕೂವೆಹಿಟ್ಟನ್ನು ಹ್ಯಾಗೋ ಹಾಗೆ ಇದರ ಹಿಟ್ಟನ್ನು ಸಹ ಮಾಡುತ್ತಾರೆ.

ಗಿಡಗಳನ್ನು ನೆಡುವದಕ್ಕೆ ಮಳೆಗಾಲ ಅರ್ಧ ಕಳೆದಾಗ ಒಳ್ಳೇ ಸಮಯ; ಯಾಕಂದರೆ ನಟ್ಟನಂತರ ಕೆಲವು ಸರ್ತಿ ಮಳೆ ಬಿದ್ದರೆ, ನೀರು ಹೊಯ್ಯುವದವಶ್ಯವಿಲ್ಲ. ಒಂದು ಸಲೆ ಗಜದ ಸ್ಥಳದಲ್ಲಿ ಮೂರು ನಾಲ್ಕು ಹೊಂಡಗಳನ್ನು ತೆಗದು, ಒಂದೊಂದರಲ್ಲಿ ಎರಡು ಗೆಲ್ಲು ನಟ್ಟು, ಹೊಂಡವನ್ನು ಮಣ್ಣು ಒಣ ಎಲೆಗಳಿಂದ ತುಂಬಿಸಬೇಕು; ಕುಮಕಿ ಮುಂತಾದ ಸ್ಥಳಗಳಲ್ಲಿ ಆದರೆ ಕುಮರಿ ಸಾಗುವಳಿಗೆ ಮಾಡುವಂತೆ ನೆಲವನ್ನು ಸುಡಬೇಕು. ಗಡ್ಡೆಗಳು ಬೆಳದ ಮೇಲೆ ಒಮ್ಮೆಯೇ ತೆಗಿಯಲಿಕ್ಕೆ ಅವಶ್ಯವಿಲ್ಲ; ನಾಲ್ಕು ತಿಂಗಳ ಪರ್ಯಂತರ ದಿನದಿನಕ್ಕೆ ಬೇಕಾದ್ದನ್ನು ಮಾತ್ರ ತೆಗದು, ಕಡೆಗೆ ಉಳಿದದ್ದನ್ನು ಮೇಲೆ ಹೇಳಿದ ಪ್ರಕಾರ ಒಣಗಿಸಬಹುದು.

**Manihot utilissima,** *Pohl.*—Jatropha manihot, *Lin.*—Janipha manihot, *Kth.*—(Order Euphorbiaceæ.)

*Tam.* Malaiččarkaraivaḷḷi, maravaḷḷikkiḷaṅgu. *Can.* Kaṇagala, kaḷigaḷa-giḍa, kāḍugeṇasu-gaḍḍe. *Mal.* Maravēli, vēlikiḷaṅṅu, marakkiḷaṅṅu, pūḷakkiḷaṅṅu, čīnakaṇṭal.

## 79. ಕಣಗಿಲು(-ಲೆ), ಕಣಿಗಿನ, ಕಣಿಗಳು, ಗಣಿಗಳು, ಕರವೀರ, ಪಡ್ಡಳೆ ಗಿಡ (Oleander).

ತ. ಅಲರಿ, ಅಶುವಬರಿ, ಅಯಮರಮ್, ಕರವೀರಮ್. ತೆ. ಕಸ್ತೂರಿಪಟ್ಟೆ, ಗನ್ನೇರು, ಕರವೀರಮು. ಮ. ಕಣಾವೀರಮ್, ಚುವನ್ನ ಅರಳೆ. ಸಂ. ಕರವೀರಃ, ಹಯಮಾರಕಃ, ವಿಷವೃಕ್ಷಾಂಕ, ವೀರರುಹ.

**ಹುಟ್ಟು**: ನದಿತೀರಗಳೂ ತೋಟಗಳೂ. **ಪುಷ್ಪ**: ಜ್ಯೇಷ್ಠದಿಂದ ಶ್ರಾವಣದ ವರೆಗೆ.

**ಉಪಯೋಗ**: ಔಷ: ಬೇರಿನ ಸಿಪ್ಪೆಯ ಲೇಪ ದದ್ರುಹರ. ಬೇರು ತಾನೇ ವಿಷ. ಆ ವಿಷದ ಸತ್ವ ಹೊರ ತೆಗದು ಕುಷ್ಠಕ್ಕೂ ನಂಜುಕುರಗಳಿಗೂ ಪ್ರಯೋಗಿಸಬಹುದು.

**Nerium odorum,** *Soland.*—N. indicum, *Mill.*—N. odoratum, *Lam.*—(Order Apocynaceæ.)

*Tam.* Alari, ašuvabari, ayamaram, karavīram. *Tel.* Kastūripaṭṭe, gannēru, karavīramu. *Can.* Kaṇagilu(-le), kaṇigina, kaṇigaḷu, gaṇigaḷu, karavīra, paḍḍaḷe-giḍa. *Mal.* Kaṇāvīram, čuvanna-araḷe. *San.* Karavīra*h*, hayamāraka*h*, visha-vṛikshāṅka, vīraruha.

### 80. ಕಣೆರಿ ಗಿಡ, ಸುರಿಮುಳ್ಳು.

ತು. ತೂರಿಮುಳ್ಳು. ಮ. ತುಟಲಿಮುಳ್ಳ್. ಕೊಂ. ಕಣೇರೀಝಾಡ.

ಉಪಯೋಗ: ಸಾಧಾ: ಒಗುರು ಗುಣ; ಜೀರ್ಣ ಮಾಡುತ್ತದೆ. ಚಿಗುರೆಲೆಗಳಿಂದ ಚಟ್ಣಿ, ಸಾರು ಮತ್ತು ತಂಬಳಿ ಮಾಡುತ್ತಾರೆ. ಹಣ್ಣು ತಿನ್ನಬಹುದು. ಗಿಡ ಬೇಲಿಗೆ ಒಳ್ಳೇದು.

**Zizyphus œnoplia,** *Mill.*—Z. albens, *Roxb.*—Z. Napeca, *Roth.*—Rhamnus œnoplia, *Lin.*—(Order Rhamneæ.)

*Can.* Kaṇeri-giḍa, surimuḷḷu. *Tu.* Tūrimuḷḷu. *Mal.* Tuṭalimuḷḷu. *Kon.* Kaṇērī-jhāḍa.

### 81. ಕತ್ತಾಳಿ ಗಿಡ (Hedge Aloe).

ತ. ಕತ್ತಾಳೈ. ತೆ. ಕಲಬಂದ. ತು. ನೋಳಿಸರ. ಮ. ಕಟ್ಟವಾಳ. ಸಂ. ಕುಮಾರೀ, ಗೃಹಕನ್ಯಕಾ.

ಹುಟ್ಟು: ಸಾಧಾರಣ ತೋಟಗಳಲ್ಲಿ.

ಉಪಯೋಗ: ಔಷ: ಎಲೆಗಳ ರಸವು ಕಠಿಣ ಜುಲಾಬು ಮಾಡುತ್ತದೆ.

**Aloe barbadensis,** *Mill.*—A. maculata vera, *Forsk.*—A. officinalis, *F.*—A. perfoliata, *Ait.*—A. perf. vera, *Lin.*—A. perf. vulgaris, *Aubl.*—A. vulgaris, *Dec.*, *Willd.*—(Order Liliaceæ.)

*Tam.* Kattāḷai. *Tel.* Kalabanda. *Can.* Kattāḷi-giḍa. *Tu.* Nōḷisara. *Mal.* Kaṭṭavāḷa. *San.* Kumārī, gṛihakanyakā.

### 82. ಕನಕ ಮರ.

ತ. ನಾಯ್ಪುಡುಕ್ಕನ್. ಮ. ಇರಿಪ್ಪ. ಸಂ. ಮಧೂಕ.

ಉಪಯೋಗ: ಔಷ: ಬೇರು ಭೇದಿಯಾಗಿದೆ. ಎಲೆಗಳನ್ನು ಹಾಲಿನಲ್ಲಿ ಬೇಯಿಸಿ, ಜೇನು ಸೇರಿಸಿ ಕುಡಿದರೆ, ಕುಷ್ಠಕ್ಕೂ ಬೇರೆ ನಂಜಿಗೂ ಒಳ್ಳೇದು. ಅದೇ ಪ್ರಕಾರ ಬೀಜಗಳ ಎಣ್ಣೆ.

**Cynometra ramiflora,** *Lin.*—(Order Leguminosæ.)

*Tam.* Nāypuḍukkan. *Can.* Kanaka-mara. *Mal.* Irippa. *San.* Madhūka.

### 83. ಕಪ್ಪುಕುರ್ಣೆ, ಕಪ್ಪುಬೊಬ್ಬುಳಿ.

ಮ. ಕರಿಕುರಿಞ್ಞಿ, ಕೊರಂಡ.

ಹುಟ್ಟು: ಸಾಧಾರಣ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಎಲೆಗಳ ಕಷಾಯ ಮೂತ್ರಕಟ್ಟಿಗೂ, ಬೇರು ವಾತಕ್ಕೂ ಒಳ್ಳೇದು. ಬೇರೂ ಎಲೆಗಳೂ ಅಶ್ಮರಿಯೆಂಬ ಮೂತ್ರಕಲ್ಲಿಗೆ ಉಪಯೋಗ.

**Ecbolium Linneanum,** *Kurz.*—Justicia Ecbolium, *Lin. and Medic.*—(Order Acanthaceæ.)

*Can.* Kappu-kurṇi, kappu-bobbuḷi. *Mal.* Karikuriñi, koraṇḍa.

## 84. ಕಬ್ಬು (Sugar-cane).

ತ. ಕರುಮ್ಬು, ಉಗ್ಗಿರಗನ್ಧಿ, ಇಕ್ಕು (or ಇಕ್ಷು). ತೆ. ಚೆರುಕು, ರಸಾಲಮು. ತು. ಕಂಬುರ್. ಮ. ಕರಿಂಪು. ಮಹಾ. ಊಸ. ಹಿಂ. ಗನ್ನಾ. ಸಂ. ಇಕ್ಷುಃ, ರಸಾಲಃ, ಮಹಾರಸಃ, ಶಸ್ತ್ರಂ.

ಹುಟ್ಟು: ನೆಟ್ಟು ಬೆಳಿಸುವದು. ಪುಷ್ಪ: ಆಷಾಢ, ಶ್ರಾವಣ, ಭಾದ್ರಪದ.

ಉಪಯೋಗ: ಔಷ: ಪಾಷಾಣ ತಾಂಬ್ರ ಇತ್ಯಾದಿ ಲೋಹ ಕಿಲುಬಿನ ವಿಷದಲ್ಲಿ ಕಬ್ಬಿನ ರಸವು ವಾಂತಿ ನಿಲ್ಲಿಸುತ್ತದೆ; ಸಕ್ಕರೆ ಸಹ ಒಳ್ಳೇದು. ಸಕ್ಕರೆ ಪುಡಿ ಮಾಡಿ ಹುಣ್ಣುಗಳಿಗೆ ಚಿಮಿಕಿಸುವದು ಒಳ್ಳೇದು. ಸಾಧಾ: ರಸದಿಂದ ಬೆಲ್ಲ ಮತ್ತು ಸಾರಾಯಿ ಮಾಡುತ್ತಾರೆ. ತಿನ್ನುವ ವಸ್ತುಗಳು ಕೊಳೆಯದಂತೆ ಸಕ್ಕರೆಯಲ್ಲಿಡಬಹುದು.

**Saccharum officinarum,** *Lin.*—(Order Gramineæ.)

*Tam.* Karumbu, uggiragandhi, ikku (*or* ikshu). *Tel.* Čeruku, rasālamu. *Can.* Kabbu. *Tu.* Karmbu. *Mal.* Karimbu. *Mah.* Ūsa. *Hin.* Gannā. *San.* Ikshu*h*, rasāla*h*, mahārasa*h*, šastram.

## 85. ಕಮಲ, ತಾವರೆ (Sacred Lotus).

ತ. ತಾಮರೈ, ತಿರುಮಾಲುನ್ದಿ, ಇರಾಜೀವಂ. ತೆ. ತಾಮರ, ಪದ್ಮಮು, ಸೌಗಂಧಿಕಮು. ತು. ತಾಮರೆ, ಅಲ್ಲಿಗೆ. ಮ. ಅರವಿಂದಮ್, ತಾಮರ, ತಣ್ಡಾರ್. ಕೊಂ. ಕಮಲ, ಸಾಳಕ ಸಂ. ಪದ್ಮಂ, ತಾಮರಸಂ, ಜಲಜಂ, ಅರವಿಂದಂ.

ಹುಟ್ಟು: ಕೆರೆಗಳಲ್ಲಿ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಎಲೆಗಳ ರಸದ ಸಂಗಡ ಎಣ್ಣೆ ಕಾಯಿಸಿ ತಲೆಗೆ ಹಚ್ಚಿದರೆ, ಮಕ್ಕಳ ತಾಮರೆ ರೋಗ ಗುಣ. ಸಾಧಾ: ಬೀಜ ಮತ್ತು ತಿರುಳು ತಿನ್ನುತ್ತಾರೆ; ಅಲಂಕಾರದ ಮತ್ತು ಪರಿಮಳದ ಹೂ.

**Nelumbium speciosum,** *Willd.*—N. asiaticum, *Rich.*—Cyamus mysticus, *Salisb.*—C. Nelumbo, *Smith.*—Nelumbo indica, *Poir.*—Nymphæa Nelumbo, *Lin.*—(Order Nymphæaceæ.)

*Tam.* Tāmarai, tirumālundi, irājīvam. *Tel.* Tāmara, padmamu, saugandhikamu. *Can.* Kamala, tāvare. *Tu.* Tāmare, allige. *Mal.* Aravindam, tāmara, taṇḍāru. *Kon.* Kamala, sāḷaka. *San.* Padmam, tāmarasam, jalajam, aravindam.

## 86. ಕರಂಡೆ, ಮೂಡುಗಟ್ಟಿನ ಗಿಡ, ಬೋಡುಕಡಲೆ ಸೊಪ್ಪು.

ತ. ವಿಷ್ಣುಕರನ್ದೈ, ತಿರಿಲೋಕಿ, ಕುಟ್ಟಿಕ್ಕರನ್ದೈ. ತೆ. ಬೊಡತರಪುಚೆಟ್ಟು. ತು. ಕಂಡೆರ್. ಮ. ಅಟಕಾಮಣಿಯನ್. ಕೊಂ. ಕಳಂಬೊ.

ಹುಟ್ಟು: ದಕ್ಷಿಣ ಹಿಂದುಸ್ಥಾನ, ಗದ್ದೆಗಳ ಬದಿಯಲ್ಲಿ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಮೂತ್ರಬುಲಾಬು ಮಾಡಿಸುತ್ತದೆ. ಬೇರು ಇಲ್ಲವೆ ಗಿಡವನ್ನು ಜೀರಿಗೇ ಪುಡಿಯು ಸಮೇತ ಹಾಕಿ ಕಷಾಯ ಮಾಡಿಕೊಟ್ಟರೆ, ಹೊಟ್ಟೇ ಅಕ್ರಮಕ್ಕೂ, ಜೇನಿನೊಡನೆ ಕೆಮ್ಮಿಗೂ ಉಪಯೋಗ. ಅದರ ಲೇಪ ನಂಜಿಗೆ ಒಳ್ಳೇದು. ಬೀಜದ ಪುಡಿ ಕ್ರಿಮಿಗೂ, ಬೇರಿನ ಸಿಪ್ಪೆ ಅರದು ಹಚ್ಚಿದರೆ ಮೂಲವ್ಯಾಧಿಗೂ, ಹೂ ರಕ್ತಶುದ್ಧಿಗೂ ಸಂಜಿಗೂ ಆಗುತ್ತವೆ. ಅಕ್ಕಿ ಮುಂತಾದ ಧಾನ್ಯಗಳಲ್ಲಿ ಹುಳಗಳಾಗದಂತೆ ಇದರ ಎಲೆ ಬೆರಸಿ ಇಡುತ್ತಾರೆ.

**Sphæranthus indicus,** *Linn.*—S. hirtus, *Willd.*—S. africanus, *Wall.*—(Order Compositæ.)

*Tam.* Vishṇukarandai, tirilōki, kuṭṭaikkarandai. *Tel.* Bōḍatarapučeṭṭu. *Can.* Karaṇḍe, mūḍugaṭṭina-giḍa, bōḍukaḍale-soppu. *Tu.* Karṇḍe. *Mal.* Aṭakā-maṇiyan. *Kon.* Kaḷańčo.

## 87. ಕರವದೀ, ಹರೀಕಳಿವಿ, ಕೊರಿಂಡ, ಕವಳಿಕಾಯಿ ಗಿಡ.

ತ. ಪೆರುಕಳಾಚೆಡಿ. ತೆ ಒಕಚೆಟ್ಟು, ಕಲಿವಿ, ವಾಕಲ್ವಿ. ಮ. ಕರಂಟ, ಕಳಾವು. ತು. ಕರ್ಂಡೇಪುಳಿ. ಕೊಂ. ಕಾರಾಂಜ.

ಹುಟ್ಟು: ಕಾಡು, ಬೈಲುಸ್ಥಳಗಳು. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಸಾಧಾ: ಇದು ಮುಳ್ಳುಗಿಡವಾಗಿದ್ದು ಬೇಲಿಗೆ ಉತ್ತಮ. ಹುಳಿ ಕಾಯಿಯಿಂದ ಒಳ್ಳೇ ಉಪ್ಪಿನಕಾಯಿ ಮಾಡುವರು. ಹಣ್ಣು ತಿನ್ನುತ್ತಾರೆ.

**Carissa Carandas,** *Lin.*, *Adans.*—C. congesta, *Wight.*—(Order Apocynaceæ.)

*Tam.* Perukaḷāčeḍi. *Tel.* Okačettu, kalivi, vākalvi. *Can.* Karavadī, harī-kaḷivi, korinḍa, kavaḷikāy-giḍa. *Mal.* Karanṭa, kaḷāvu. *Tu.* Karnḍē-puḷi. *Kon.* Kārāñja.

## 88. ಕರಿಚುಳ್ಳಿ.

ಮ. ಕರಚುಳ್ಳಿ, ತು. ಚುಳ್ಳಿ.

ಹುಟ್ಟು: ದಕ್ಷಿಣ ತೀರ, ಮೈಸೂರು. ಪುಷ್ಪ: ಮಾರ್ಗಶಿರ, ಪುಷ್ಯ.

ಉಪಯೋಗ: ಔಷ: ಬೇರಿನ ಕಷಾಯ ಮೂತ್ರಕಟ್ಟು ಬಿಡಿಸುತ್ತದೆ. ಗಿಡವನ್ನು ಹುಡಿ ಮಾಡಿ ಸಿರ್ಕದಲ್ಲಿ ಹಾಕಿ ಬಾವಿಗೂ ಕುರಗಳಿಗೂ ಉಪಯೋಗಿಸುತ್ತಾರೆ.

**Barleria obovata,** *Hamilt.*—B. buxifolia, *Roxb.*—B. caristata β, *Lam.*—(Order Acanthaceæ.)

*Can.* Karičuḷḷi. *Mal.* Karačuḷḷi. *Tu.* Čuḷḷi.

## 89. ಕರಿಜಾಲಿ, ಶಮೀ, ಗೊಬ್ಲಿ ಮರ (Babool).

ತ. ಕರುವೇಲ್. ತೆ. ನಲ್ಲತುಮ್ಮ, ಬರ್ಬೂರಮು, ಯುಗಳಾಕ್ಷಕಮು. ಮ. ಕರುವೇಲಮ್. ಕೊಂ. ಶಮೀರೂಕು. ಹಿಂ. ಬಾಬುಲ್. ಸಂ. ಬರ್ಬೂರಃ, ಅರಿಮೇದಃ, ಕೃಷ್ಣಖದಿರಃ.

**ಹುಟ್ಟು**: ದಕ್ಷಿಣ, ಚೋಳಮಂಡಲ, ಬಂಗಾಳ. **ಪುಷ್ಪ**: ವೈಶಾಖದಿಂದ ಭಾದ್ರಪದದ ವರೆಗೆ.

**ಉಪಯೋಗ**: ಔಷ: ಚೆಕ್ಕೆ ಬಲಕರ; ಹಾವು ಕಚ್ಚಿದ ಬಲಹೀನರಿಗೆ ಒಳ್ಳೇದು. ಅದರ ಕಷಾಯ ಕೆಟ್ಟ ಹುಣ್ಣುಗಳನ್ನು ತೊಳೆಯುವದಕ್ಕೂ, ಅದರ ಪುಡಿ ಮಾಡಿ ಎಳ್ಳೆಣ್ಣೆ ಕೂಡಿಸಿದರೆ ಸೂತಿಗೂ ಉಪಯೋಗ. ಮೊಗ್ಗೆಗಳು ಕೆಮ್ಮಿಗೂ, ಮರದ ಗೋಂದು ಕೆಮ್ಮಿಗೂ ಬಹುಮೂತ್ರಕ್ಕೂ ಒಳ್ಳೇದು. ಸಾಧಾ: ಪರಿಮಳ, ಚೆಕ್ಕೆಗೆ ಗಾಯ ಮಾಡಿದರೆ, ಗೋಂದು ದೊರಕುತ್ತದೆ. ಚೆಕ್ಕೆಯ ಕಷಾಯಕ್ಕೆ ಸೀಗೇ ಗುಣ. ಅದು ಚರ್ಮ ಹದ ಮಾಡುವದಕ್ಕೂ ಬಣ್ಣಕ್ಕೂ ಉಪಯೋಗ. ಮರ ಕೆಲಸಕ್ಕೆ ಆಗುತ್ತದೆ. ಬೀಜಗಳೂ ಚಿಗುರುಗಳೂ ಕುರಿಗಳಿಗೆ ಆಹಾರ.

**Acacia arabica,** *Willd.*—Mimosa arabica, *Lam.*—(Order Leguminosæ.)

*Tam.* Karuvēl. *Tel.* Nallatumma, barbūramu, yugaḷākshakamu. *Can.* Karijāli, šamī, gobli-mara. *Mal.* Karuvēlam. *Kon.* Šamī-rūku. *Hin.* Bābul. *San.* Barbūra*h*, arimēda*h*, krishṇakhadira*h*.

## 90. ಕರಿಜೀನಂಗಿ, ಅರಿಸಿನ ಜೀನಂಗಿ ಮರ.

ತ. ಕರುಂಶೆಂಬೈ. ತೆ. ಜಲುಗು.

**ಹುಟ್ಟು**: ದಕ್ಷಿಣ, ಬಂಗಾಳದಲ್ಲಿ. **ಪುಷ್ಪ**: ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ**: ಔಷ: ಕೀವು ಹೊರಗೆ ಬರುವ ಹಾಗೆ ಇದರ ಎಲೆಗಳಿಂದ ಪೋಲ್ಟಿಸ್ ಮಾಡುತ್ತಾರೆ. ಸಾಧಾ: ಮರದಿಂದ ಕೋವಿಮದ್ದಿಗಾಗುವಂಥ ಒಳ್ಳೇ ಮಸಿ ಮಾಡಬಹುದು. ಕೊಂಬೆಗಳನ್ನು ಕೆಲವು ಕಡೆಯಲ್ಲಿ ಬಿದಿರಿಗೆ ಬದಲಾಗಿ ಉಪಯೋಗಿಸುತ್ತಾರೆ.

**Sesbania ægyptiaca,** *Pers.*—Aeschynomene indica, *Burm.*—Ae. Sesban, *Lin.*, *Burm.*—Coronilla Sesban, *Willd.*—(Order Leguminosæ.)

*Tam.* Karumšembai. *Tel.* Jalugu. *Can.* Karijīnangi, arisina-jīnangi-mara.

## 91. ಕರಿಜೀರಿಗೆ (Fennel Flower).

ತ. ಕರುಞ್ಜೀರಗಮ್, ಇರುಳಿ, ವಿಳುತ್ತಮ್, ಅದ್ದುಲಾಕ್ಕಿ. ತೆ. ನಲ್ಲಜೀಲಕರ್ರ. ತು. ಕಪ್ಪಲ್‌ಜೀರ್‌ದರಿ. ಮ. ಕರಿಂಜೀರಕಮ್. ಕೊಂ. ಕರಿಜೀರೆ. ಸಂ. ಉಪಕುಂಚಿಕಾ, ಕಾರಭಿ, ಯೋನಿಶೂಲಘ್ನ.

**ಉಪಯೋಗ**: ಔಷ: ಗುಣ ಉಷ್ಣ. ಅಜೀರ್ಣಕ್ಕೂ ನೆಗಡಿಗೂ ಕ್ರಿಮಿರೋಗಕ್ಕೂ ಉದರವಾಯುವಿಗೂ ಶ್ಲೇಷ್ಮಕ್ಕೂ, ಎಳ್ಳೆಣ್ಣೆಯೊಡನೆ ಬಾಹ್ಯಲೇಪನವಾಗಿ ನಂಜಿಗೂ ಆಗುತ್ತದೆ.

**Nigella sativa,** *Lin.*—(Order Ranunculaceæ.)

*Tam.* Karuñčīragam, iruḷi, viḷuttam, addulākki. *Tel.* Nallajīlakarra. *Can.* Karijīrige. *Tu.* Kappal-jīrdari. *Mal.* Kariñčīrakam. *Kon.* Karijīre. *San.* Upakuñčikā, kārabhi, yōniśūlaghna.

## 92. ಕರಿತುಂಬೆ ಗಿಡ, ಮೊಗಬೀರಚೆಟ್ಟು (Malabar Catmint).

ತ. ಪೇಯಿಮರುಟಿ. ತೆ. ಮೊಗಬೀರಾಕು. ಮ. ಕರಿಂತುಂಪ. ಕೊಂ. ಕಾಳೊತುಂಬೊ. ಸಂ. ಅಲಮೂಲ, ಓಷ್ಠಫಲ, ವೈಕುಂಠ.

ಹುಟ್ಟು: ತಿರುವಂಕೋಡಿನಲ್ಲಿ. ಪುಷ್ಪ: ಆಷಾಢ, ಶ್ರಾವಣ.

ಉಪಯೋಗ: ಔಷ: ಎಲೆಗಳ ರಸ ಮಕ್ಕಳ ಉದರಶೂಲೆಗೂ ಅಜೀರ್ಣಕ್ಕೂ ಹಲ್ಲು ಬರುವ ಜ್ವರಕ್ಕೂ ಒಳ್ಳೇದು. ಅವುಗಳ ಕಷಾಯ ಅನ್ನಕೋಶದ ಅಕ್ರಮಕ್ಕೂ ಅತಿಸಾರಕ್ಕೂ ವರಿಸೇ ಜ್ವರಕ್ಕೂ ಕೊಡುತ್ತಾರೆ. ಈ ಗಿಡ ಒಟ್ಟಿ ಇಳಿಸಿ, ವಾತಕ್ಕೆ ಗುಣಕರವಾದ ಕೆಂಪು ಎಣ್ಣೆ ಮಾಡಬಹುದು. ಕಷಾಯದಿಂದ ಮೈ ತೊಳದರೆ, ಜೀಗೂ ಶ್ರೋಣಿತವಾತವೂ ಹರ. ಎಲೆಗಳಿಗೆ ಒಗರು ಗುಣ; ಜೀರ್ಣಕ್ಕೆ ಅನುಕೂಲ.

**Anisomeles malabarica,** *Br.*—Ajuga fruticosa, *Roxb.*—Nepeta malabarica, *Lin.*—(Order Labiatæ.)

*Tam.* Pēyimaruṭi. *Tel.* Mogabīrāku. *Can.* Karitumbe-giḍa, mogabīra-čheṭṭu. *Mal.* Karintumba. *Kon.* Kāḷo-tumbo. *San.* Alamūla, ōshṭhaphala, vaikunṭha.

## 93. ಕರಿತುಳಸಿ ಗಿಡ (Holy Basil or Tulasi).

ತ. ತುಳಸಿ, ಅಲಂಜಿಕ್ಕೈ, ಪಿರುನ್ದಮ್. ತೆ. ತುಲಸಿ. ತು. ಕಪ್ಪು ತೊಳಚಿ. ಮ. ಕೃಷ್ಣತುಳಸಿ, ಶಿವತುಳಸಿ. ಕೊಂ. ಕಾಳಿ ತುಳಸಿ. ಸಂ. ಭಾರತಿ, ಭೂತಕ, ದಿವ್ಯಾ, ಕೃಷ್ಣಮೂಲ.

ಹುಟ್ಟು: ನಟ್ಟು ಬೆಳಿಸುವದು. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಬೇರಿನ ಕಷಾಯ ಜ್ವರಕ್ಕೆ, ಎಲೆಗಳ ರಸ ಕೆಮ್ಮಿಗೆ; ಅದಕ್ಕೆ ಲಿಂಬೆರಸ ಕೂಡಿಸಿದರೆ, ನಂಜಿಗೂ ದದ್ದಿಗೂ ಒಳ್ಳೇದು. ಎಲೆಗಳನ್ನು ಒಣಗಿಸಿ ಪುಡಿ ಮಾಡಿ ನಸೆಯಾಗಿ ಬಳಿಸಿದರೆ, ಮೂಗುಹುಳಗಳು ಹೊರಡುವವು. ಸಾಧಾ: ಚಿಗುರುಗಳಿಂದ ಮಾಲೆ ಮಾಡುತ್ತಾರೆ.

**Ocimum sanctum,** *Lin.*—O. frutescens, *Burm.*—O. hirsutum, *Benth.*—O. inodorum, *Burm.*—O. monachorum, *Lin.*—O. scutellarioides, *Willd.*—O. tenuiflorum, *Lam.*—O. tomentosum, *Lam.*—O. villosum, *Roxb.*—O. zeylanicum, *Burm.*—Sumnitzera tenuiflora, *Spr.*—Plectranthus monachorum, *Spr.*—(Order Labiatæ.)

*Tam.* Tuḷasi, alañgai, pirundam. *Tel.* Tulasi. *Can.* Kari-tuḷasi-giḍa. *Tu.* Kappu-toḷači. *Mal.* Kṛishṇa-tuḷasi, śiva-tuḷasi. *Kon.* Kāḷi-tuḷasi. *San.* Bhārati, bhūtaka, divyā, kṛishṇamūla.

### 94. ಕರಿನೆಕ್ಕಿ ಗಿಡ, ನಚ್ಚುಕಡ್ಡಿ.

ತ. ಕರುನೊಚ್ಚಿ. ತೆ. ನಲ್ಲನೊಚ್ಚಿಲಿ, ನಲ್ಲವಾವಿಲಿ, ನೇಲವಾವಿಲಿ. ತು. ಕರಿನೆಕ್ಕಿ. ಮ. ಕರಿನೊಚ್ಚಿಲ್. ಕೊಂ. ಕಾಳೊನಿಗುಂಡು. ಹಿಂ. ಕಾಲಾಬಾಷಿಂಬ. ಸಂ. ಕೃಷ್ಣನಿರ್ಗುಂಡಿ.

**ಉಪಯೋಗ:** ಔಷ: ಚಿಗುರೆಲೆಗಳು ದೀರ್ಘಕಾಲದ ವಾತಕ್ಕೂ, ಎಲೆಗಳ ಕಷಾಯ ಜ್ವರಕ್ಕೂ, ಅವನ್ನು ಎಣ್ಣೆಯಲ್ಲಿ ಗಿವಿಚಿ ಹಚ್ಚಿದರೆ ಬಾವಿಗೂ, ಸಾಸಿವೆಯೊಡನೆ ವಾಂತಿ ಮಾಡಿಸುವದಕ್ಕೂ ಉಪಯೋಗ. ಎಲೆಗಳನ್ನು ಉಪ್ಪಿನ ಸಂಗಡ ಒಂದು ವಸ್ತ್ರದಲ್ಲಿ ಹಾಕಿ ಬಿಸಿ ಮಾಡಿ, ಸಂದುರೋಗದಲ್ಲಿ ಸೇಕ ಕೊಡುತ್ತಾರೆ. ಜ್ವರವುಳ್ಳವರು ಎಲೆಗಳ ಕಷಾಯದಲ್ಲಿ ಮಿಾಯುವದು ಒಳ್ಳೇದು. ಎಲೆಗಳ ರಸ ಮಕ್ಕಳ ಕೆಮ್ಮಿಗಾಗುತ್ತದೆ. ಸಾಧಾ: ಎಲೆಗಳಿಂದ ಹೊಗೆ ಹಾಕಿದರೆ, ಸುಸಿ ಮುಂತಾದ ಹುಳಗಳು ಸಾಯುತ್ತವೆ. ವಸ್ತ್ರಕ್ಕೆ ಹುಳ ಹಿಡಿಯದ ಹಾಗೆ ಅವನ್ನು ವಸ್ತ್ರದ ಪೆಟ್ಟಿಗೆಯಲ್ಲಿ ಹಾಕಿಡುವರು. ತೋಟಗಳಲ್ಲಿ ಬೇಲಿಗಳ ಅಂಚನ್ನು ಚಂದ ಮಾಡುವದಕ್ಕೆ ನೆಡುತ್ತಾರೆ.

**Justicia Gendarussa,** *Lin.*—Gendarussa vulgaris, *Nees.*—(Order Acanthaceæ.)

*Tam.* Karunočči. *Tel.* Nallanoččili, nallavāvili, nēlavāvili. *Can.* Karinekki-giḍa, naččukaḍḍi. *Tu.* Karinekki. *Mal.* Karinoččil. *Kon.* Kāḷoniguṇḍu. *Hin.* Kālābāshimba. *San.* Kṛishṇanirguṇḍi.

### 95. ಕರಿನೆಲ್ಲಿ, ಕಿರುನೆಲ್ಲಿ, ಅರನೆಲ್ಲಿ, ರಾಯರನೆಲ್ಲಿ ಮರ (Country Gooseberry).

ತ. ಅರಿನೆಲ್ಲಿ, ಚಡಾದರಮ್. ತೆ. ರಾಚಯುಸರಿಕೆಚೆಟ್ಟು. ಮ. ನೆಲ್ಲಿಪುಳಿ, ಅರಿನೆಲ್ಲಿಕ್ಕ. ಕೊಂ. ರಾಜಾವಾಳೊ.

**ಹುಟ್ಟು:** ತೋಟಗಳಲ್ಲಿ. **ಪುಷ್ಪ:** ವೈಶಾಖ.

**ಉಪಯೋಗ:** ಔಷ: ಬೇರು ಕಠಿಣ ಜುಲಾಬು ಮಾಡುತ್ತದೆ. ಎಲೆಗಳು ಮೈ ಬೆವರುವದಕ್ಕೂ, ಬೀಜ ಉದರವಾಯುವಿಗೂ ಉಪಯೋಗ. ಸಾಧಾ: ಕಾಯಿಯಿಂದ ಉಪ್ಪಿನಕಾಯಿ ಮಾಡಬಹುದು. ಹಣ್ಣು ತಿನ್ನುತ್ತಾರೆ, ಪಾಕ ಸಹ ಮಾಡಿ ಮಾರುತ್ತಾರೆ.

**Phyllanthus distichus,** *Müll.*—Cicca disticha, *Lin.*—Phyllanthus longifolius, *Jacq.*—(Order Euphorbiaceæ.)

*Tam.* Arinelli, čaḍādaram. *Tel.* Račayusarike-čeṭṭu. *Can.* Karinelli, kirunelli, aranelli, rāyaranelli-mara. *Mal.* Nellipuḷi, arinellikka. *Kon.* Rājāvāḷo.

### 96. ಕರಿಬೇವು (Curry Leaf Tree).

ತ. ಕರುವೆಪ್ಪಿಲೈ. ತೆ. ಕರಿವೇಪಮು. ತು. ಬೇಸೊಪ್ಪು. ಮ. ಕರಿವೇಪು. ಕೊಂ. ಕರಬೇವು. ಸಂ. ಕೃಷ್ಣನಿಂಬ, ಕೃಷ್ಣಪತ್ರ, ಕೈಡರ್ಯ, ಕಾಲಶಾಕ.

ಹುಟ್ಟು: ಮಲಬಾರತೀರದಲ್ಲಿ. ಪುಷ್ಪ: ಚೈತ್ರದಿಂದ ಆಷಾಢದ ವರೆಗೆ.

ಉಪಯೋಗ: ಔಷ: ಹಸಿ ಎಲೆಗಳಿಂದ ರಕ್ತಭೇದಿ ಗುಣ. ಬೇರು ಚೆಕ್ಕೆಗಳ ಕಷಾಯ ಸನ್ನಿರೋಗದ ವಾಂತಿ ನಿಲ್ಲಿಸುತ್ತದೆ. ಚಿಗುರೆಲೆಗಳನ್ನು ಹಾಲಿನಲ್ಲಿ ಬೇಯಿಸಿ, ಅರದು, ವಿಷದ ಹುಳ ಕಚ್ಚಿದ ಸ್ಥಳಕ್ಕೆ ಹಚ್ಚುವರು. ಬೇರು ಮಲಶೋಧನೆ ಮಾಡುತ್ತದೆ. ಬೇರು ಮತ್ತು ಚೆಕ್ಕೆ ಅರದು ಲೇಪಿಸುವದರಿಂದ ಹುರುಕು ಕೊಟ್ಟು, ನಂಜು ಹರ. ಸಾಧಾ: ಮರ ಕೆಲಸಕ್ಕೆ ಒಳ್ಳೇದು. ಬೀಜದಲ್ಲಿ ಎಣ್ಣೆ ಉಂಟು. ಎಲೆಗಳಿಂದ ಪದಾರ್ಥಕ್ಕೆ ಒಗ್ಗರಣೆ ಕೊಡುವರು.

**Murraya Kœnigii,** *Spreng.*—Bergera Kœnigii, *Lin.*—(Order Rutaceæ.)

*Tam.* Karuveppilai. *Tel.* Karivēpamu. *Can.* Karibēvu. *Tu.* Bēsoppu. *Mal.* Karivēpu. *Kon.* Karabēvu. *San.* Krishṇanimba, krishṇapatra, kaiḍarya, kālaśāka.

## 97. ಕರಿಮರ, ಅಬನಾಸಿ, ಬಿಲಾರದ ಮರ (Coromandal Ebony Tree).

ತ. ಕರುಂಗಾಲಿ, ತಾಂಬಿಲಿ. ತೆ. ತುಮಿದ, ತುಮ್ಮಿಕ. ಮ. ಕರಿಮರಮ್, ಕರುವೀಟ್ಟಿ. ಹಿಂ. ಸೀಸಂಕೇ ಝಾಡ್.

ಹುಟ್ಟು: ಪಶ್ಚಿಮ ಪೂರ್ವ ಘಟ್ಟಗಳಲ್ಲಿ. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ಚೆಕ್ಕೆ ಹುಡಿ ಮಾಡಿದರೆ ಹುಣ್ಣಿಗೂ, ಕರಿಮೆಣಸಿನೊಡನೆ ರಕ್ತಾತಿಸಾರಕ್ಕೂ ಗುಣಕರ. ಸಾಧಾ: ಮರವು ಉತ್ತಮ ತರದ ಕೆಲಸಕ್ಕೆ ಬರುತ್ತದೆ.

**Diospyros Tupru,** *Buch. Ham. Journ.*—D. melanoxylon, *Hiem.*—(Order Ebenaceæ.)

*Tam.* Karuṅgāli, tāmbili. *Tel.* Tumida, tummika. *Can.* Karimara, abanāsi, bilārada-mara. *Mal.* Karimaram, karuvīṭṭi. *Hin.* Sīsaṅkē-jhāḍ.

## 98. ಕರಿಯಹೂಲಿ, ಕರೆಸೂಲ, ಕರೆಹೂಲ, ಗುಡಪಾಲ, ನೆಲಮಾಗಳಿಚೇರ.

ತ. ವರಪ್ಪೂಲ್, ಪೂಲಾ, ಇರುಬೂಲೈ. ತೆ. ತೆಲ್ಲಪುರುಗುಡು, ಸಾಲೆಮುಂತ, ಮೇಕರಾಯಿ. ಮ. ಪೆರಿಂಕ್ಲಾವ್. ಸಂ. ಅಪ್ರಿಯದ್ರುಮ, ಕೃಷ್ಣಪಾಕ, ನಿಲಿಶಿಲಾ.

ಉಪಯೋಗ: ಔಷ: ಬೇರಿಗೆ ಒಗರು ಗುಣವದೆ. ಅತಿಸಾರ ನಿಲ್ಲಿಸಲಿಕ್ಕೆ ಅದರ ಪುಡಿಯನ್ನು ದಿನಕ್ಕೆ ಎರಡು ಸರ್ತಿ ಎರಡು ಗುಲಗುಂಜಿ ತೂಕದಷ್ಟು ಕೊಡುವರು.

**Flueggia microcarpa,** *Blume.*—F. leucopyrus, *Willd.*—Phyllanthus leucopyrus, *Kan.*—(Order Euphorbiaceæ.)

*Tam.* Varappūlu, pūlā, irubūlai. *Tel.* Tellapuruguḍu, sālemunta, mēkarāyi. *Can.* Kariyahūli, karesūla, karehūla, guḍapāla, nelamāgaḷičēra. *Mal.* Periṅklāvu. *San.* Apriyadruma, krishṇapāka, nilišilā.

### 99. ಕರಿಲಾವಂಚಹುಲ್ಲು, (ಪೂರ್ವಳಿಹುಲ್ಲು).

ತ. ಕಾಮಾಟ್ಚಿಪಿಲ್ಲು. ತೆ. ವಾಸನಗಡ್ಡಿ, ನಿಮ್ಮಗಡ್ಡಿ. ತು. ಕರಿಮುಡ್ಯಲ. ಕೊಂ. ಕರ್ಂಬಲೊ.

ಹುಟ್ಟು: ಹೆಚ್ಚಾಗಿ ಉತ್ತರ ಹಿಂದುಸ್ಥಾನದಲ್ಲಿ.

ಉಪಯೋಗ: ಔಷ: ಬೇರಿನ ಕಷಾಯ ಅಹಿಕ ಜ್ವರಕ್ಕೆ ಉಪಯೋಗಿಸುತ್ತಾರೆ. ಸಾಧಾ: ಪರಿಮಳ.

**Andropogon Iwarancusa,** *Jones.*—Cymbopogon Iwarancusa, *Schuelt.*—(Order Gramineæ.)

*Tam.* Kāmātčipillu. *Tel.* Vāsanagaḍḍi, nimmagaḍḍi. *Can.* Karilāvañča-hullu, (pūrvaḷi-hullu). *Tu.* Karimuḍyala. *Kon.* Karmbalo.

### 100. ಕರಿಹತ್ತಿ ವಿಲಾಯತಿಹತ್ತಿ (American Cotton).

ತ. ತಾಳಿಪ್ಪರುತ್ತಿ. ಕೊಂ. ಕಾಳಿಕಾಪ್ಸಿಣಿ. ಸಂ. ಮಾಘನಿ, ಪೂರ್ವ್ವಂ.

ಉಪಯೋಗ: ಔಷ: ಎಲೆ ಕಾಯಿಗಳನ್ನರದು ಲೂತಿ ಇದ್ದವರು ಹಾಲಿನಲ್ಲಿ ಕುಡಿಯುತ್ತಾರೆ. ಸಾಧಾ: ಹತ್ತಿ ಆಗುತ್ತದೆ.

**Gossypium Barbadense,** *Lin.*—G. nigrum β., *Wight and A.*—G. Stocksii, *Mast.*—(Order Malvaceæ.)

*Tam.* Tāḷipparutti. *Can.* Karihatti, vilāyatihatti. *Kon.* Kāḷikāpsiṇi. *San.* Māghani, pūrvvam.

### 101. ಕಲ್ಲಟ್ಟೆ (-ತ್ತಿ), ಸೊಂಡೇ, ಪೌಡಂಗೀ ಗಿಡ.

ತ. ಚುಂಡೈ. ಮ. ಚುಂಡ. ಕೊಂ. ಕಲ್ಲಾಂಟ. ಸಂ. ವಿದಾರಿ, ಪಥಿ.

ಹುಟ್ಟು: ಸಾಧಾರಣ. ಪುಷ್ಪ: ಚೈತ್ರದಿಂದ ಜ್ಯೇಷ್ಠದ ವರೆಗೆ.

ಉಪಯೋಗ: ಸಾಧಾ: ಕಾಯಿಪಲ್ಯ ಮತ್ತು ಉಪ್ಪಿನಕಾಯಿ ಸಹ ಮಾಡುತ್ತಾರೆ. ಎಲೆಗಳಿಗೆ ತಂಪು ಗುಣ.

**Solanum verbascifolium,** *Lin.*—S. erianthum, *Don.*—S. pubescens, *Roxb.*—(Order Solanaceæ.)

*Tam.* Čuṇḍai. *Can.* Kallaṭṭe(-tti), soṇḍē, pauḍaṅgī-giḍa. *Mal.* Čuṇḍa. *Kon.* Kallāṇṭa. *San.* Vidāri, pathi.

### 102. ಕಸಕಸೆ, ಗಸಗಸೆ ಗಿಡ (Opium Poppy).

ತ. ಗಸಗಸಾ. ತೆ. ಗಸಗಸ. ತು. ಕಸಕಸೆ. ಮ. ಕಶಕಶ. ಕೊಂ. ಕಸ್ಕಸ. ಹಿಂ. ಪೋಸ್ತು.

ಹುಟ್ಟು: ದಕ್ಷಿಣದಲ್ಲಿಯೂ ಉತ್ತರದಲ್ಲಿಯೂ ಬೆಳಿಸುವರು. ಪುಷ್ಪ: ಮಾಘ, ಫಾಲ್ಗುಣ.

**ಉಪಯೋಗ:** ಔಷ: ಅಫೀನಿ ಎಂಬ ಈ ಗಿಡದ ಸತ್ವ ರಕ್ತಾತಿಸಾರ, ಸನ್ನಿರೋಗ, ಸೋವು, ನಿದ್ರಾಭಂಗ, ಮೈಲಿಗೆರೋಗ, ಆಹಿಕಜ್ವರ, ವಾತ, ಇವುಗಳಲ್ಲಿ ಉಪಯೋಗ. ಹೆಚ್ಚು ತಕ್ಕೊಂಡರೆ ವಿಷವಾದ್ದರಿಂದ ಈ ಔಷಧವನ್ನು ಸೇವಿಸುವಲ್ಲಿ ಬಹು ಜಾಗ್ರತೆ ಇರಬೇಕು. ಅಫೀನಿಯ ವ್ಯಸನದಿಂದ ಬುದ್ಧಿಭ್ರಮೆ, ದೇಹಕ್ಷೀಣತೆ, ಅಲ್ಪಾಯುಷ್ಯ.

**Papaver somniferum,** *Lin.*—P. album, *Crantz.*—P. indehiscens, *Dumort.*—P. nigrum, *Crantz.*—P. officinale, *Gmel.*—P. opiiferum, *Forsk.*—(Order Papaveraceæ.)

*Tam.* Gasagasā. *Tel.* Gasagasa. *Can.* Kasakase, gasagase-giḍa. *Tu.* Kasakase. *Mal.* Kaśakaśa. *Kon.* Kaskase. *Hin.* Pōstu.

## 103. ಕಸ್ತೂರಿಮಲ್ಲಿಗೆ, ಬಾಸ್ತಿಮಲ್ಲಿಗೆ (Common Jasmine).

ತೆ. ಕುಂದಮು, ಗುಜರಿ. ತು. ಬೊಳ್ದುಮಲ್ಲಿಗೆ. ಮ. ಕುಂದಮ್, ಕುರುಣ, ಕುರುಕುತ್ತಿಮುಲ್ಲ. ಕೊಂ. ಕಸ್ತೂರಿಮೊಗ್ರೆ.

**ಹುಟ್ಟು:** ಪಶ್ಚಿಮ ಪೂರ್ವ ತೀರಗಳಲ್ಲಿಯೂ ಬಂಗಾಳದಲ್ಲಿಯೂ. **ಪುಷ್ಪ:** ಸ್ವಲ್ಪಕಡಿಮೆ ಇಡೀ ವರುಷ.

**ಉಪಯೋಗ:** ಔಷ: ಎಣ್ಣೆಯಲ್ಲಿ ಬೇಯಿಸಿದ ಎಲೆಗಳು ಕಣ್ಣುರೋಗಕ್ಕೂ, ಬೇರು ಬಜೇಬೇರಿನ ಸಮೇತ ಸರ್ಪದಂಶಕ್ಕೂ ಉಪಯೋಗಿಸುತ್ತಾರೆ. ಸಾಧಾ: ಅಲಂಕಾರದ ಮತ್ತು ಪರಿಮಳದ ಹೂ.

**Jasminum pubescens,** *Willd.*—J. hirsutum, *Willd.*—J. multiflorum, *Roth.*—Nyctanthes pubescens, *Retz.*—Mogorium pubescens, *Lamk.*—(Order Oleaceæ.)

*Tel.* Kundamu, gujari. *Can.* Kastūri-mallige, bāsti-mallige. *Tu.* Boḷdu-mallige. *Mal.* Kundam, kurukuttimulla. *Kon.* Kastūri-mogre.

## 104. ಕಹಿಪಡವಲ, ಸಣ್ಣಪಡವಲ, ಕಾಡಾಡು ಬಳ್ಳಿ.

ತ. ಪೇಯ್ಪುಡಲ್, ಕಾಟ್ಟುಪ್ಪೇಪುಡಲ್, ಕಟಾಸ್ಕೊಟೋಚ್ಛೈ. ತೆ. ಅಡವಿಪೊಟ್ಲ, ಚೇದುಪೊಟ್ಲ. ತು. ಕಾಡ್‌ಪಟ್ಲಕಾಯಿ. ಮ. ಕಾಟ್ಟುಪಟೋಲಂ. ಕೊಂ. ಕಾಡಪಡ್ವಾಲ. ಸಂ. ತಿಕ್ತಫಲ.

**ಹುಟ್ಟು:** ದಕ್ಷಿಣ ಹಿಂದುಸ್ಥಾನದಲ್ಲಿ, ಬಂಗಾಳದಲ್ಲಿ. **ಪುಷ್ಪ:** ಶ್ರಾವಣದಿಂದ ಮಾರ್ಗಶಿರದ ವರೆಗೆ.

**ಉಪಯೋಗ:** ಔಷ: ಕಾಯಿ ಬಾವುಗಳು ಹಣ್ಣಾಗುವ ಹಾಗೆ ಮಾಡುತ್ತದೆ. ದಂಟಿನ ಕಷಾಯ ಶ್ಲೇಷ್ಮ ಬಿಡಿಸುತ್ತದೆ; ಎಲೆಗಳ ರಸ ವಾಂತಿ, ಬೇರಿನ ರಸ ಮತ್ತು ಒಣಗಿದ ಕಾಯಿ ಮಲಭೇದಿ ಹುಟ್ಟಿಸುತ್ತವೆ. ಬೀಜ ಹೊಟ್ಟೇ ಅಕ್ರಮಕ್ಕೂ ಜ್ವರಕ್ಕೂ ಕ್ರಿಮಿರೋಗಕ್ಕೂ ಆಗುತ್ತದೆ. ಚಿಗುರುಗಳ ಮತ್ತು ಒಣಗಿದ ಕಾಯಿಗಳ ಕಷಾಯ

ಜೀರ್ಣಬಲಕ್ಕಾಗಿ ಕುಡಿಯುತ್ತಾರೆ. ಸಾಧಾ: ಊರಪಡವಲ ಅಥವಾ ಪಟೋಲ ವೆಂಬ ಕಾಯಿ ಮಾತ್ರ ತಿನ್ನಬಹುದು; ಕಹಿ ಪಡವಲ ತಿನ್ನಕೂಡದು.

**Trichosanthes cucumerina,** *Lin.*—(Order Cucurbitaceæ.)

*Tam.* Pēypuḍal, kāṭṭuppēpuḍal, kāṭānkoṭōčai. *Tel.* Aḍavipoṭla, čēdupotla. *Can.* Kahipaḍavala, saṇṇapaḍavala, kāḍāḍu-baḷḷi. *Tu.* Kāṭu-paṭlakāyi. *Mal.* Kāṭṭupatōlam. *Kon.* Kāḍa-paḍḍūla. *San.* Tiktaphala.

## 105. ಕಹಿಸೋರೆ, ಎಲಚೀ, ಅಲಾಬು, ಈಸಗಾಯಿ ಬಳ್ಳಿ (White Pumpkin, Bitter Bottle Gourd).

ತ. ಶುರೈ, ಕೂಡಂಬಿಲ್. ತೆ. ಅಲಾಬುವು, ಸುರಕಾಯ, ಆನಪಕಾಯಿ. ತು. ಕಾಟ್ತುರೆ. ಮ. ಕೈಪ್ಪಚುರಮ್, ಕಾಟುಚುರಮ್. ಕೊಂ. ಕಾಡದುದ್ದಿ. ಮಹಾ. ರಾನಭೋಂಪಳ. ಹಿಂ. ಜಂಗ್ಲಿಖದ್ದು. ಸಂ. ಅಲಾಬು, ದ್ವಿಕಂಟಕ, ಅಂಬುನಿರ, ಪಿಂಡಫಲ.

ಹುಟ್ಟು: ತೋಟಗಳಲ್ಲಿ. ಪುಷ್ಪ: ಆಷಾಢದಿಂದ ಭಾದ್ರಪದದ ವರೆಗೆ.

ಉಪಯೋಗ: ಔಷ: ಎಲೆಗಳ ಕಷಾಯ ಸಕ್ಕರೆ ಬೆರಸಿ ಅರಸಿನಮುಂಡಕ್ಕೆ ಕೊಡುತ್ತಾರೆ. ಕಾಯಿೂ ತಿರುಳೂ ಮಲಭೇದಿ. ಅದರ ರಸ ಎಣ್ಣೆಗೆ ಸೇರಿಸಿ ಕಾಸಿ ಹಚ್ಚಿದರೆ, ವಾತಹರ. ಬೀಜ ಎಣ್ಣೆಯಲ್ಲಿ ಅರದು ಕಿವಿಗೆ ಹಿಂಡಿದರೆ, ಓಪುಹುಳ ಸಾಯುವದು. ಸಾಧಾ: ಕಾಯಿಯಿಂದ ಬುರುಡೆಗಳನ್ನು ಮಾಡುತ್ತಾರೆ.

**Lagenaria vulgaris,** *Ser.*—Cucurbita Lagenaria, *Lin.*—(Order Cucurbitaceæ.)

*Tam.* Šurai, kūḍambil. *Tel.* Alābuvu, surakāya, ānapakāyi. *Can.* Kahisōre, elačī, alābu, īsagāyi-baḷḷi. *Tu.* Kāṭu-ture. *Mal.* Kaippačuram, kāṭučuram. *Kon.* Kāḍaduddi. *Mah.* Rāna-bhōmpaḷa. *Hin.* Jangli-khaddu. *San.* Alābu, dvikaṇṭaka, ambunira, piṇḍaphala.

## 106. ಕಹಿಹೀರೆ, ನಾಗದಾಳಿ ಬಳ್ಳಿ.

ತ. ಪೇಪ್ಪೀರ್ಕಮ್. ತೆ. ಚೇದುಬೀರ, ವೆರ್ರಿಬೀರ, ಚೇತಿಬೀರ. ಕೊಂ. ನಾಗತಾಳಿ. ಸಂ. ಕಟುಕಿ, ಜಾಲಿನೀ, ರಕ್ತಕೋಶಾತಕೀ.

ಹುಟ್ಟು: ದಕ್ಷಿಣ ಹಿಂದುಸ್ಥಾನದಲ್ಲಿ, ಬಂಗಾಳದಲ್ಲ. ಪುಷ್ಪ: ಶ್ರಾವಣದಿಂದ ಆಶ್ವೀಜದ ವರೆಗೆ.

ಉಪಯೋಗ: ಔಷ: ಕಾಯಿೂ ಬೀಜಗಳ ಕಷಾಯದಿಂದ ವಾಂತಿಯೂ ಭೇದಿಯೂ ಆಗುವದು. ತಲೆನೋವಿಗೆ ಹಸಿ ಕಾಯಿ ಹುರಿದು ಅದರ ರಸವನ್ನು ಕಣ್ಣಾಲೆಗೆ ಹಚ್ಚುವರು.

**Luffa amara,** *Roxb.*—L. Pluckenetiana, *Sering.*—L. acutangula var., *Hook.*—Cucumis acutangulus β., *Lam.*—(Order Cucurbitaceæ.)

*Tam.* Pēppīrkam. *Tel.* Čēdubīra, verribīra, čētibīra. *Can.* Kahihīre, nāgadāḷi-baḷḷi. *Kon.* Nāgatāḷi. *San.* Kaṭuki, jālinī, raktakōšātakī.

## 107. ಕಲ್ಲಂಗಡಲೆ (ಕಲ್ಲಂಗಡ್ಲೆ) ಗಿಡ.

ತ. ಮಯಿರ್ಮಾಣಿಕ್ಕಮ್. ತೆ. ಮಯಿಲುಮಾಣಿಕ್ಯಮ್. ತು. ಕಡೀರ್. ಮ. ಕುರುಂತೋಟ್ಟಿ, ಕುರುಂತುವಟಿ. ಕೊಂ. ತುಪ್ಕಡಿ. ಸಂ. ಬಲಾ, ವಾತಘ್ನಿ, ಅಹಿಖಂಡಮ್.

ಹುಟ್ಟು: ಮಲಬಾರತೀರ, ತಿರುವಂಕೋಡಿನಲ್ಲಿ. ಪುಷ್ಪ: ಶ್ರಾವಣದಿಂದ ಮಾರ್ಗಶಿರದ ವರೆಗೆ.

ಉಪಯೋಗ: ಔಷ: ಬೇರಿನ ಕಷಾಯದಿಂದ ಎಣ್ಣೆ ಕಾಸಿ ಹಚ್ಚಿದರೆ, ವಾತಕ್ಕೆ ಒಳ್ಳೇದು. ಕುಡಿಯುವದಕ್ಕೆ ಅದರಿಂದ ಕಲ್ಕ ಸಹ ಮಾಡಬಹುದು. ಶರೀರಕ್ಕೆ ಬಲ ಕೊಡುವಂಥಾದ್ದು. ಸಾಧಾ: ಎಲೆಗಳಿಗೆ ಒಳ್ಳೇ ಸೀಗೇ ಗುಣ.

**Sida retusa,** *Lin.*—(Order Malvaceæ.)

*Tam.* Mayirmāṇikkam. *Tel.* Mayilumāṇikyam. *Can.* Kallaṅgaḍale (kallaṅgaḍle)-giḍa. *Tu.* Kaḍīru. *Mal.* Kuruntoṭṭi, kuruntuvaṭi. *Kon.* Tupkaḍi. *San.* Balā, vātaghni, ahikhaṇḍam.

## 108. ಕಾಕಮಾರಿ, ಕಾಗೆಮಾರಿ.

ತ. ಕಾಕಕುಲ್ಲಿ, ಪೇನ್ಕೊಟ್ಟೈ, ಕಾಕೆಕೊಲ್ಲಿವಿರೈ. ತೆ. ಕಾಕಮಾರಿ, ಕಾಕಿಚಂಪ. ತು. ಚಿಪುಳ್ಕೊಟ್ಟೆ, ಚಿಪ್ಲೊಟ್ಟೆ. ಮ. ಮಿನ್ನಞು, ನಞ್ಜಿನ್ಕುರು, ನಚತ್ತಿನ್ನಾಯಿ. ಕೊಂ. ಗರುಡಫಳ. ಸಂ. ಕಾಕಾಹ್ವಾ, ಕಾಕನಾಶಿಕಾ.

ಹುಟ್ಟು: ಕೊಂಕಣ, ಮಲಬಾರತೀರಗಳಲ್ಲಿ.

ಉಪಯೋಗ: ಔಷ: ಬೀಜ ಕಠಿಣ ವಿಷವುಳ್ಳದ್ದಾದರೂ ಕೆಲವು ರೋಗಗಳಲ್ಲಿ ಜಾಗ್ರತೆಯಾಗಿ ಉಪಯೋಗಿಸಬಹುದು. ಹುಡಿ ಮಾಡಿದ ಬೀಜದ ಲೇಪ ಮೈಯುರಿಗೆ, ಕಾಯಿ ಕಜ್ಜಿಗೂ ಹುಳಕ್ಕೂ ಕೆಟ್ಟ ಹುಣ್ಣುಗಳಿಗೂ ಗಂಡಮಾಲೆಗೂ ಗುಣಕರ. ಸಾಧಾ: ಮೀನು ಕಾಗೆ ತಗಣೆ ನಾಶಕ.

**Anamirta Cocculus,** *W. and A.*—A. paniculata, *Colebr.*—Menispermum Cocculus, *Lin.*—N. heteroclitum, *Roxb.*—(Order Menispermaceæ.)

*Tam.* Kākakulli, pēnkoṭṭai, kākekollivirai. *Tel.* Kākamāri, kākičampa. *Can.* Kākamāri, kāgemāri. *Tu.* Čipuluṅkoṭṭe, čiploṭṭe. *Mal.* Minnañu, nañjinkuru, načattinnāyi. *Kon.* Garuḍaphaḷa. *San.* Kākāhvā, kākanāśikā.

## 109. ಕಾಕಮುಂಚಿ, ಅಂಬುಸೊಂಡೆ ಬಳ್ಳಿ, ಮುಳ್ಳುಮುಸ್ತ (Three-lobed Nightshade).

ತ. ತೂದುಳೈ, ಕೂದಳಮ್. ತೆ. ಮುಂಡ್ಲಮುಸ್ತೆ, ಅಲರ್ಕಪತ್ರಮು, ಉಸ್ತೆ. ಮ. ತೂದವಳಮ್.

ಹುಟು: ಪಶ್ಚಿಮತೀರ, ಕನ್ಯಾಕುಮಾರಿ, ದಕ್ಷಿಣದಲ್ಲಿ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಬೇರು ಎಲೆ ಚಿಗುರುಗಳು ಕ್ಷಯರೋಗಕ್ಕೆ, ಹೂ ಮತ್ತು ಕಾಯಿಯ ಕಷಾಯ ಕೆಮ್ಮಿಗೆ ಉಪಯೋಗ.

**Solanum trilobatum,** *Lin.*—S. acetosæfolium, *Lam.*—(Order Solanaceæ.)

*Tam.* Tūduḷai, kūdaḷam. *Tel.* Muṇḍlamuste, alarkapatramu, uste. *Can.* Kākamuñči, ambusoṇḍe-baḷḷi, muḷḷumusta. *Mal.* Tūdavaḷam.

### 110. ಕಾಕಿ (ಕಾಕೆ), ಕಾರೆ ಗಿಡ (Carray Cheddie).

ತ. ಕಾರೈ. ತೆ. ಬಲುಸು. ತು. ಕಕ್ಕೆಂಡೆಲ್. ಮ. ಕಣ್ಣಂಗಾರಿ, ನೀರೂರಿ. ಕೊಂ. ಕಾಯಿಳಿ.

ಹುಟ್ಟು: ಪಶ್ಚಿಮ ತೀರದಲ್ಲಿಯೂ ದಕ್ಷಿಣ ಮಹಾರಾಷ್ಟ್ರದಲ್ಲಿಯೂ. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ಬೇರು ಕ್ರಿಮಿಗೂ, ಚಕ್ಕೆ ಮತ್ತು ಚಿಗುರುಗಳು ಉಷ್ಣಭೇದಿಗೂ ಅಶಕ್ತಿಗೂ ಉಪಯೋಗ. ಸಾಧಾ: ಒಳ್ಳೇ ಬೇಲಿಯಾಗುತ್ತದೆ. ಎಲೆಗಳನ್ನು ಪದಾರ್ಥಕ್ಕೂ, ದಂಟನ್ನು ಸಾರು ಮಾಡುವದಕ್ಕೂ ಬಳಿಸುತ್ತಾರೆ.

**Canthium parviflorum,** *Lam.*—Webera tetrandra, *Willd.*—(Order Rubiaceæ.)

*Tam.* Kārai *Tel.* Balusu. *Can.* Kāki (kāke), kāre-giḍa. *Tu.* Kakkeṇḍel. *Mal.* Kaṇḍaṅgāri, nīrūri. *Kon.* Kāyiḷi.

### 111. ಕಾಕೆಮುಂಡಲಿ, ಅವಗೂದೆ, ಕಾಗೆಮಾರೆ ಬಳ್ಳಿ.

ತ. ಕುರಟ್ಟೈ, ಶವರಿ. ತೆ. ಅವ್ವಗೂದ, ಕಾಕಿದೊಂಡ, ಆಬುವ್ವ. ಮ. ಕಾಕತೊಂಟಿ.

ಹುಟ್ಟು: ದಕ್ಷಿಣ ಹಿಂದುಸ್ಥಾನದಲ್ಲಿ, ಬಂಗಾಳದಲ್ಲಿ. ಪುಷ್ಪ: ಶ್ರಾವಣ, ಭಾದ್ರಪದ.

ಉಪಯೋಗ: ಔಷ: ತೆಂಗಿನ ಎಣ್ಣೆಯಲ್ಲಿ ಸೇರಿಸಲ್ಪಟ್ಟ ಅದರ ಕಾಯಿ ಕಿವಿ ನೋವಿಗೆ ಒಳ್ಳೇದು. ಕಾಯಿಯ ಕೆನೆ ಬಲವುಳ್ಳ ಮಲಭೇದಿ. ಸಾಧಾ: ವಿಷವುಳ್ಳದ್ದು; ಬೇರು ಗೋವುಗಳ ಔಷಧಕ್ಕೆ ಸೇರುತ್ತದೆ. ಕಾಯಿಯ ಕೆನೆ ಇಲಿಗಳ ಕಾಟ ನಿಲ್ಲಿಸುವದಕ್ಕೆ ಬೋನಿನಲ್ಲಿ ಇಡಬಹುದು.

**Trichosanthes palmata,** *Roxb.*—T. anguina, *var. F., Wall.*—T. laciniosa, *Wight.*—(Order Cucurbitaceæ.)

*Tam.* Kuraṭṭai, šavari *Tel.* Avvagūda, kākidoṇḍa, ābuvva. *Can.* Kākemandali, avagūde, kāgemāre-baḷḷi. *Mal.* Kākatoṇṭi.

### 112. ಕಾಚು, ಖದಿರ, ತರೆ, ಕಗ್ಗಲಿ ಮರ (Brown-barked Acacia).

ತ. ವೊದಲೈ, ವೋದಳವ್. ತೆ. ಕಾಚು, ಪೊಗಮು. ತು. ಕಾಚ್. ಮ. ಕರಿಂಙಾಲಿ, ಖದಿರಮ್. ಕೊಂ. ಕಾತು, ಖೈರು. ಸಂ. ಖದಿರ, ಅರುಣಕ, ಜೀವಮಂಗಲ್ಯಾ.

ಹುಟ್ಟು: ಮಲಬಾರತೀರ, ದಖ್ಖಣ. ಪುಷ್ಪ: ಜ್ಯೇಷ್ಠದಿಂದ ಆಶ್ವೀಜದ ವರೆಗೆ.

**ಉಪಯೋಗ:** ಔಷ: ಮರದ ಒಳಭಾಗವನ್ನೂ ಹಸಿ ಮೊಗ್ಗೆಗಳನ್ನೂ ಬೇಯಿಸಿ, ಕಾಚುವೆಂಬ ಸತ್ವ ತೆಗಿಯುತ್ತಾರೆ. ಅದಕ್ಕೆ ಒಗರು ಗುಣವದೆ. ಕಿರಿಯಾತಿನ ಕಷಾಯದೊಡನೆ ಅಧಿಕ ಜ್ವರಕ್ಕೆ ಆಗುತ್ತದೆ. ಬೇರೆ ಔಷಧಗಳ ಸಂಗಡ ಕಠಿಣ ವ್ರಣಗಳಿಗೂ ಕುಷ್ಠಕ್ಕೂ ಉಪಯೋಗ. ಕೀವು ಬರುವ ವ್ರಣಗಳಿಗೆ ಅದನ್ನು ಜೇನುಮೇಣ ಜೇನು ತುಪ್ಪದೊಡನೆ ಮುಲಾಮು ಮಾಡಿ ಹಚ್ಚುತ್ತಾರೆ. ಸಾಧಾ: ಚರ್ಮ ಹದ ಮಾಡುವದಕ್ಕೂ ಬಣ್ಣಕ್ಕೂ ಪ್ರಯೋಜನಕರ.

**Acacia catechu,** *Willd.*—Mimosa catechu, *Roxb.*—Acacia Wallichiana, *Dec.*—(Order Leguminosæ.)

*Tam.* Vodalai, vōdaḷam. *Tel.* Kāču, pūgamu. *Can.* Kāču, khadira, tare, kaggali-mara. *Tu.* Kāčų. *Mal.* Karińāli, khadiram. *Kon.* Kātu, khairu *San.* Khadira, aruṇaki, jīvamaṅgalyā.

## 113. ಕಾಡ ಅಶ್ವತ್ಥ ಮರ.

ತು. ಕಾಟ್ ಅತ್ತಸ್. ಮ. ಕಲ್ಲರೆಯಾಲ್. ಕೊಂ. ಕಾಡಪಿಂಪಳು, ಕಾಡಅಶ್ವತ್ಥು. ಹಿಂ. ಜಂಗ್ಲಿ ಪಿಪ್ಪಲ್. ಸಂ. ಪ್ಲಕ್ಷ.

**ಉಪಯೋಗ:** ಔಷ: ಚಿಕ್ಕ ಮಕ್ಕಳ ತಲೆಕಜ್ಜಿಗೂ ಕುರುಗಳಿಗೂ ಉಪಯೋಗ.

**Ficus Arnottiana,** *Miq.*—Urostigma Arnottianum, *Miq.*—(Order Urticaceæ.)

*Can.* Kāḍa-aśvattha-mara. *Tu.* Kāṭų-attasų. *Mal.* Kallareyāl. *Kon.* Kāḍa-pimpaḷu, kāḍa-aśvatthu. *Hin.* Jaṅgli-pippal. *San.* Plaksha.

## 114. ಕಾಡಕಲ್ಲಟ್ಟೆ, ಕಾರಶೆ, ಕಾಡಕಡನೆ ಗಿಡ.

ತ. ಕೊತ್ತುಕತ್ತರಿ. ಮ. ಪುತ್ತರಿಚುಂಟ.

**ಉಪಯೋಗ:** ಔಷ: ಬೇರು ಹಲ್ಲರಸಿಗೂ ಕ್ರಿಮಿರೋಗಕ್ಕೂ ವಾತಕ್ಕೂ ಜ್ವರಕ್ಕೂ ಆಗುತ್ತದೆ.

**Solanum torvum,** *Swartz.*—S. stramonifolium, *Roxb.*—(Order Solanaceæ.)

*Tam.* Kottukattari. *Can.* Kāḍakallaṭṭe, kāraśe, kāḍakaḍane-giḍa. *Mal.* Puttaričuṇṭa.

## 115. ಕಾಡಕೆಸು ಗಿಡ.

ತ. ಶೇಂಬು, ಶೇಂಬೈ, ಶಗುಡಂ. ತೆ. ಚಾಮುಗಡ್ಡ. ತು. ಕಾಟ್‌ತೇವು. ಮ. ವೆಳಿತಾಳ್. ಕೊಂ. ತೆರೊ.

**ಹುಟ್ಟು:** ಇಡೀ ಹಿಂದುಸ್ಥಾನದಲ್ಲಿ. **ಪುಷ್ಪ:** ಶ್ರಾವಣದಿಂದ ಮಾರ್ಗಶಿರದ ವರೆಗೆ.

**ಉಪಯೋಗ:** ಔಷ: ಬೀಜಗಳನ್ನು ಗೆದಲೆಯ ಮೊಟ್ಟೆಗಳ ಸಂಗಡ ಅರದು ಸುಪ್ತಿ ವಾತವೆಂಬ ಜುಮ್ಮಿಗೆ ಉಪಯೋಗಿಸುತ್ತಾರೆ. ಸಾಧಾ: ಗಡ್ಡೆ ಎಲೆಗಳು ಪಲ್ಯ.

**Colocasia nymphæifolia,** *Roxb.*—(Order Aroideæ.)

*Tam.* Šēmbu, šēmbai, šagudam. *Tel.* Čāmagadda. *Can.* Kāda-kesu-gida. *Tu.* Kātu-tēvu. *Mal.* Veḷitāḷ. *Kon.* Tēro.

## 116. ಕಾಡಕೊಂದೆ ಮರ.

ತು. ಕಕ್ಕೆಕಾಯಿ ಮರ. ಮ. ಕಾಟ್ಟುಕೊನ್ನ. ಸಂ. ಆರಗ್ವಧ.

ಹುಟ್ಟು: ಕೊಂಕಣತೀರದಲ್ಲಿ. ಪುಷ್ಪ: ಫಾಲ್ಗುಣದಿಂದ ವೈಶಾಖದ ವರೆಗೆ.

ಉಪಯೋಗ: ಔಷ: ಎಲೆಗಳ ಕಷಾಯ ಕೇಶವೃದ್ಧಿಗೂ, ಕುಷ್ಠಕ್ಕೂ ಉಪಯೋಗ; ಕಾಮಿಲೆಯಲ್ಲಿ ಸಹ ಕೊಡುತ್ತಾರೆ.

**Pithecolobium bigeminum,** *Benth.*—Inga bigemina, *Willd.*—I. Wightiana, *Grah.*—Mimosa bigemina, *Lin.*—(Order Leguminosæ.)

*Can.* Kāda-konde-mara. *Tu.* Kakkekāyi-mara. *Mal.* Kāttu-konna. *San.* Āragvadha.

## 117. ಕಾಡಜೀರಿಗೆ, ಕಾಳಜೀರಿಗೆ (Purple Fleabane).

ತ. ಕಾಟ್ಟುಚೀರಗಂ. ತೆ. ಅಡವಿಜೀಲಕರ. ತು. ಕಾಲಜೀರ್ದರಿ. ಮ. ಕಾಳಜೀರಕಂ, ಕಾಟ್ಟುಜೀರಕಂ. ಕೊಂ. ಕಾಳಜೀರೆ. ಸಂ. ಅಗ್ನಿಬೀಜ.

ಹುಟ್ಟು: ದಕ್ಷಿಣ ಹಿಂದುಸ್ಥಾನವೂ ಬಂಗಾಳವೂ. ಪುಷ್ಪ: ಕಾರ್ತಿಕ ಮಾರ್ಗಶಿರ.

ಉಪಯೋಗ: ಔಷ: ಬೀಜ ಹೊಟ್ಟೆನೋವಿಗೂ ವಾತರೋಗಕ್ಕೂ ಬಾಣಂತಿಗೂ ಕ್ರಿಮಿನಾಶಕ್ಕೂ ಮೂತ್ರಜುಲಾಬಾಗುವದಕ್ಕೂ, ಬೇರೆ ಔಷಧಗಳ ಸಂಗಡ ಹಾವಿನ ವಿಷಕ್ಕೂ ಉಪಯೋಗ. ಅದರ ಕಷಾಯ ಕೆಮ್ಮಿಗೂ ಉದರವಾಯುವಿಗೂ ಒಳ್ಳೇದು. ಶರೀರಕ್ಕೆ ಚುರುಕು ಕೊಡುವೆಂಥಾದ್ದು.

**Vernonia anthelmintica,** *Willd.*—Ascaricida indica, *Cassin.*—Serratula anth., *Roxb.*—(Order Compositæ.)

*Tam.* Kāttučīragam. *Tel.* Adavijīlakara. *Can.* Kādajīrige, kāḷajīrige. *Tu.* Kālajīrdari. *Mal.* Kāḷajīrakam, kāttujīrakam. *Kon.* Kāḷajīre. *San.* Agnibīja.

## 118. ಕಾಡತ್ತಿ, ಕಲ್ಲತ್ತಿ, ವನಸಂಪಿಗೆ ಮರ (Mountain Ebony).

ತ. ಕಾಟ್ಟಾತ್ತಿ, ತಿರುವಾತ್ತಿ, ಕಾಟ್ಟುಮಂದಾರೈ. ತೆ. ಅಡವಿಮಂದಾರಮು. ತು. ಕಾಟರ್ತಿ ಮರ. ಮ. ಕಾಂಚನಪ್ಪೂ, ಕಾಟ್ಟತ್ತಿ. ಕೊಂ. ಕಾಡರುಂಬಡಿರೂಕು. ಸಂ. ಫಲ್ಗು.

ಹುಟ್ಟು: ಮಲಬಾರ ಚೋಳಮಂಡಲ ತೀರಗಳು, ಅಯೋಧ್ಯ. ಪುಷ್ಪ: ಆಷಾಢ, ಶ್ರಾವಣ.

ಉಪಯೋಗ: ಔಷ: ಒಣಗಿದ ಎಲೆ ಹಸಿ ಹೂವುಗಳು ಅಜೀರ್ಣರೋಗಕ್ಕೂ, ಬೇರಿನ ಸಿಪ್ಪೇ ಕಷಾಯ ಪಿತ್ತದೋಷಕ್ಕೂ ಕಫಕ್ಕೂ ಹೊಟ್ಟೆಕ್ರಿಮಿಗೂ ಆಗುತ್ತದೆ. ಚೆಕ್ಕೆಯ ಹುಡಿ ಬಾವು ಗಾಯಗಳಿಗೆ ಹಚ್ಚುತ್ತಾರೆ. ಸಾಧಾ: ಬೀಜ ತಿನ್ನ ಬಹುದು; ಅದು ಬಲಕರವಾದ್ದು.

**Bauhinia tomentosa,** *Lin.*—(Order Leguminosæ.)

*Tam.* Kāṭṭātti, tiruvātti, kāṭṭumandārai. *Tel.* Aḍavimandāramu. *Can.* Kāḍatti, kallatti, vanasampige-mara. *Tu.* Kāṭarti-mara. *Mal.* Kāñčanapū, kāṭṭatti. *Kon.* Kāḍa-rumbaḍi-rūku. *San.* Phalgu.

## 119. ಕಾಡರಸಿನ, ಅಂಬೇಹಳದಿ, ಕಸ್ತೂರಿ ಅರಿಸಿನ ಗಿಡ (Zedoary).

ತ. ಕಸ್ತೂರಿಮಂಜಲ್. ತೆ. ಕಸ್ತೂರಿಪಸುವು, ಅಡಿವಿಪಸುವು. ತು. ಆನೆಮಂಜಲ್. ಮ. ಕಾಟ್ಟು ಮಞ್ಞಲ್. ಹಿಂ. ಜಂಗ್ಲಿಹಲ್ದಿ. ಕೊಂ. ಅಂಬಹಳದಿ.

ಹುಟ್ಟು: ಪಶ್ಚಿಮತೀರ, ಬಂಗಾಳ. ಪುಷ್ಪ: ಫಾಲ್ಗುಣ, ಚೈತ್ರ, ವೈಶಾಖ.

ಉಪಯೋಗ: ಔಷ: ಬೇರು ಅಥವಾ ಗಡ್ಡೆ ಬಲಕರವಾಗಿದೆ; ಅದರ ರಸ ಮೈಗೆ ಹಚ್ಚಿದರೆ, ಕಜ್ಜಿ ಒಣಗುವದು; ಉರುಳೀಕಾಯಿಯ ಅಕ್ರಮಕ್ಕೂ ಆಗುತ್ತದಂತೆ; ಉದರ ವಾಯು ಹರ. ಸಾಧಾ: ಪರಿಮಳಕ್ಕಾಗಿ ಉಪ್ಪಿನಕಾಯಿಗೆ ಸೇರಿಸುತಾರ್ತೆ.

**Curcuma Zedoaria,** *Rosc.*—C. Zerumbet, *Roxb.*—Amomum Zedoaria, *Berg.*, *Willd.*—(Order Scitamineæ.)

*Tam.* Kastūrimañjal. *Tel.* Kastūripasuvu, aḍivipasuvu. *Can.* Kāḍarasina, ambēhaḷadi, kastūri-arisina-giḍa. *Tu.* Ānemañjal. *Mal.* Kāṭṭumaññal. *Kon.* Āmbhaḷadi. *Hin.* Janglihaldi.

## 120. ಕಾಡವ್ವೋಮ, ಗುಡ್ಡವ್ವೋಮ ಗಿಡ (Goosefoot).

ಮ. ಕಾಟ್ಟು ಅಯಮೋದಕಮ್. ಕೊಂ. ಕಾಡುವ್ವೋಂವೊ.

ಉಪಯೋಗ: ಔಷ: ಬಾಣಂತಿಗೂ ಅಜೀರ್ಣಕ್ಕೂ ಹೊಟ್ಟೇಹುಳಕ್ಕೂ ಉಪಯೋಗಿಸುತ್ತಾರೆ.

**Chenopodium ambrosioides,** *Linn.*—(Order Chenopodiaceæ.)

*Can.* Kāḍavōma, guḍḍavōma-giḍa. *Mal.* Kāṭṭu-ayamōdakam. *Kon.* Kāḍu-vō*n*vo.

## 121. ಕಾಡಹಾಕುಕಾರೆ, ಕಾಡುಮೆಣಸು ಗಿಡ.

ತ. ಮಿಳಕರಣೈ. ತೆ. ಪರಗೋಕಿ, ಕೊಂಡಕಸಿಂದ, ಮಿರಪಕಾಂಡ್ರ. ತು. ಕಾಡಕಾರೆ ದೈ. ಮ. ಕಾರ. ಕೊಂ. ಗಾಳಾಯಿ.

ಉಪಯೋಗ: ಔಷ: ಈ ಗಿಡ ಜ್ವರಕ್ಕೆ ಔಷಧ. ಹಸಿ ಎಲೆಗಳು ಹೊಟ್ಟೆಯ ಅಕ್ರಮಕ್ಕೆ ಒಳ್ಳೇದು. ಎಣ್ಣೆಯಲ್ಲಿ ಹುರಿದ ಬೇರು ಮತ್ತು ಕಾಯಿ ಅರದು ಸಂದು

ವಾತಕ್ಕೆ ಲೇಪ ಮಾಡುವರು. ಹಲ್ಲುನೋವಿಗೆ ಉಪ್ಪು ಸೇರಿಸಿದ ಕಾಯಿಗಳ ಕಷಾಯ ದಿಂದ ಮುಕ್ಕುಳಿಸುತ್ತಾರೆ; ಉದರವಾಯುವಿಗೂ ಆಗುತ್ತದೆ. ಗಿಡಕ್ಕೆ ಬಲಕರ ಗುಣ; ಜ್ವರದಿಂದಾಗಲಿ ಇತರ ರೋಗಗಳಿಂದಾಗಲಿ ಬಲಹೀನರಾದವರಿಗೆ ಉಪಯೋಗ. ಸಾಧಾ: ಕಾಯಿಯಿಂದ ಒಳ್ಳೇ ಉಪ್ಪಿನಕಾಯಿ ಮಾಡುವರು.

**Toddalia aculeata,** *Pers.*—T. asiatica, *Lam.* β.—T. nitida, *Lam.*—Paullinia asiatica, *Lin.*—(Order Rutaceæ.)

*Tam.* Miḷakaraṇai. *Tel.* Varagōki, koṇḍakasinda, mirapakāṇḍra. *Can.* Kāḍahākukāre, kāḍumeṇasu-giḍa. *Tu.* Kāḍakāre-dai. *Mal.* Kāra. *Kon.* Gāḷāyi.

## 122. ಕಾಡಹೆಸರು ಬಳ್ಳಿ.

ತ. ಕಾಟ್ಟುಪಯರು. ತೆ. ಅಡವಿಪೆಸಲು. ತು. ಕಾಟ್‌ಪದೆಂಗಿ. ಮ. ಕಾಟ್ಟುಪಯರು. ಕೊಂ. ಕಾಡುಮೂಗು. ಸಂ. ಅರಣ್ಯಮುದ್ಗ, ಅಣುಫಲ, ಮಂಗುಷ್ಠ.

**ಹುಟ್ಟು:** ಇಡೀ ಹಿಂದುಸ್ಥಾನದಲ್ಲಿ. **ಪುಷ್ಪ:** ಮಾರ್ಗಶಿರ, ಪುಷ್ಯ.

**ಉಪಯೋಗ:** ಔಷ: ಕಷಾಯ ವಾಯುವಿಗೂ ತಡಕೊಳ್ಳಲಿಕ್ಕಾಗದ ಮೂತ್ರ ಕ್ಕೂ ಆಗುತ್ತದೆ. ಬೇರನ್ನು ಸಕ್ಕರೆ, ಗಂಧದ ಪುಡಿ ಮತ್ತು ಬೆಣ್ಣೆ ಸಹಿತ ಅರದು ಉರಿ ಗಣ್ಣಿಗೆ ಲೇಪ ಮಾಡುವರು. ಸಾಧಾ: ಬೇರು ತಿನ್ನುತ್ತಾರೆ.

**Phaseolus adenanthus,** *G. F. Meyer.*—Ph. rostratus, *Wall.*—Ph. alatus, *Roxb.*—Ph. amarus, *Roxb.*—(Order Leguminosæ.)

*Tam.* Kāṭṭupayaru. *Tel.* Aḍavipesalu. *Can.* Kāḍahesaru-baḷḷi. *Tu.* Kāṭu-padeṅgi. *Mal.* Kāṭṭupayaru. *Kon.* Kāḍumūgu. *San.* Araṇyamudga, aṇuphala, maṅgushṭha.

## 123. ಕಾಡಹೊಗೆಸೊಪ್ಪು ಗಿಡ.

ತ. ಕಾಟ್ಟುಪುಗೈಯಿಲೈ. ತೆ. ಅಡವಿಪೊಗಾಕು. ತು. ಕಾಟ್‌ಪುಗೆರೆ. ಮ. ಕಾಟ್ಟ್‌ಪುಗಯಿಲ. ಕೊಂ. ಕಾಡಧುರಾಪಾನ.

**ಹುಟ್ಟು:** ಕೊಡಗು, ನೀಲಗಿರಿಗಳು, ದಕ್ಷಿಣ ಹಿಂದುಸ್ಥಾನ.

**ಉಪಯೋಗ:** ಜೇನುಹುಳ ಇದರ ಹೂವಿನಿಂದ ಸಹ ಜೇನು ಸಂಗ್ರಹಿಸುತ್ತದೆ; ಅದನ್ನು ತಿಂದರೆ, ತಲೆನೋವಾಗುವದು.

**Lobelia nicotianæfolia,** *Heyne.*—Rapuntium nicotianæfolium, *Presl.*—(Order Campanulaceæ.)

*Tam.* Kāṭṭupugaiyilai. *Tel.* Aḍavipogāku. *Can.* Kāḍahogesoppu-giḍa. *Tu.* Kāṭupugere. *Mal.* Kāṭṭupugayila. *Kon.* Kāḍadhurāpāna.

## 124. ಕಾಡುಕಡ್ಲೆ, ರೊಟ್ಟೀ, ಕಪ್ಪೆರೊಟ್ಟೀ ಗಿಡ.

ತ. ಕಾಟ್ಟುಕಡಲೈ. ತು. ಕಾಟ್‌ಕಡಲೆ. ಮ. ಕಾಟ್ಟ್‌ಕಡಲಕ್ಕ. ಕೊಂ. ಕಾಡುಚಣೊ.

**ಹುಟ್ಟು:** ದಖ್ಖಣ, ಮೈಸೂರು. **ಪುಷ್ಪ:** ಮಾಘ, ಫಾಲ್ಗುಣ.

ಉಪಯೋಗ: ಔಷ: ಎಲೆಗಳಿಂದ ಒತ್ತಡ ಮಾಡುತ್ತಾರೆ. ಸಂಚಿಗೆ ಒಳ್ಳೇದು. ವಿದ್ರಧಿ ಎಂಬ ಕುರುಗಳಿಗೂ ಮೂಲವ್ಯಾಧಿಗೂ ಮೂತ್ರಕೋಶದ ವ್ರಣಗಳಿಗೂ ಪಥ್ಯಕರ.

**Malva rotundifolia,** *Lin.*—M. vulgaris, *Fries.*—(Order Malvaceæ.)

*Tam.* Kāṭṭukaḍalai. *Can.* Kāḍukaḍle, roṭṭī, kapperoṭṭī-giḍa. *Tu.* Kāṭu-kaḍale. *Mal.* Kāṭṭukaḍalekka. *Kon.* Kāḍučaṇo.

## 125. ಕಾಡುಕಸ್ತೂರಿ, ಕಲೀಕಸ್ತೂರಿ, ಕಾಡುಕಸ್ರುರಿ, ಕಾಡುಬೆಂಡೆಕಾಯಿ ಗಿಡ (Musk Mallow).

ತ. ವೆತ್ತಿಲೈಕಸ್ತೂರಿ, ಕಾಟ್ಟುಪರುತ್ತಿ, ಪೊಟ್ಟಕತುತ್ತಿ, ಇರಟ್ಟಗತುತ್ತಿ. ತೆ. ಕಸ್ತೂರಿಬೆಂಡ. ಮ. ಕಾಟ್ಟ್ಕಸ್ತೂರಿ, ಕಾಟ್ಟ್ಪರುತ್ತಿ. ಹಿಂ. ಮಕ್‌ಸ್ತಾನ್.

ಹುಟ್ಟು: ಪಶ್ಚಿಮ ಪೂರ್ವ ತೀರಗಳು. ಪುಷ್ಪ: ಆಷಾಢದಿಂದ ಭಾದ್ರಪದದ ವರೆಗೆ.

ಉಪಯೋಗ: ಔಷ: ಬೀಜವು ಎಳವುರೋಗಕ್ಕೂ ಅನ್ನಕೋಶದ ಅಕ್ರಮಕ್ಕೂ ಜಂತುಗಳ ವಿಷಕ್ಕೂ, ಸಾರಾಯಿಯಲ್ಲಿ ತಕ್ಕೊಂಡರೆ ಸರ್ಪದಂಶಕ್ಕೂ ಉಪಯೋಗ. ಸಾಧಾ: ಬೀಜಕ್ಕೆ ಪರಿಮಳ. ಗಿಡದ ನಾರು ಬಹು ಒಳ್ಳೇದು.

**Hibiscus Abelmoschus,** *Lin.*—H. flavescens, *Cav.*—Abelmoschus moschatus, *Mid. Mœnch.*—(Order Malvaceæ.)

*Tam.* Vettilaikastūri, kāṭṭuparutti, poṭṭakatutti, iraṭṭagatutti. *Tel.* Kastūri-beṇḍa. *Can.* Kāḍukastūri, kalīkastūri, kāḍukasruri, kāḍubeṇḍekāyi-giḍa. *Mal.* Kāṭṭukastūri, kāṭṭuparutti. *Hin.* Makstān.

## 126. ಕಾಡುಜಾಜಿ (ಜಾಯಿ) ಮರ (Wild Nutmeg).

ತ. ಕಾಟ್ಟುಜಾಜಿಕ್ಕಾ. ತು. ಕಾಟ್‌ಜಾಕಾಯಿ. ಕೊಂ. ಕಾಡಜಾಯಿಫಲ. ಹಿಂ. ಜಂಗ್ಲೀ ಜಾಫಳ್ಝಾಡ್. ಸಂ. ಕಾಮುಕಃ, ಮಾಲತಿ, ಜಾತಿಫಲ.

ಉಪಯೋಗ: ಔಷ: ಪತ್ರೆ ಜೇನಿನ ಸಂಗಡ ಕೆಮ್ಮಿಗೂ ಕಫದೋಷಕ್ಕೂ ಕೊಡುವರು. ಅದರ ಕಷಾಯ ಎಣ್ಣೆಯಲ್ಲಿ ಕಾಸಿ ವಾತಕ್ಕೆ ಲೇಪಿಸುವರು. ಪತ್ರೆಹುಡಿಯಿಂದ ಹಲ್ಲು ತಿಕ್ಕುತ್ತಾರೆ. ಹಸಿ ಕಾಯಿ ಎಣ್ಣೆಯಲ್ಲಿ ಕಾಸಿ ಕಿವಿನೋವಿಗೆ ಬಳಿಸುವದುಂಟು.

**Myristica Horsfieldii,** *Blum. Spr.*—Horsfieldia odorata, *Willd.*—(Order Myristiceæ.)

*Tam.* Kāṭṭujājikkā. *Can.* Kāḍujāji (jāyi)-mara. *Tu.* Kāṭujākāyi. *Kon.* Kāḍajāyiphala. *Hin.* Janglī-jāphaljhāḍ. *San.* Kāmuka*ḥ*, mālati, jātiphala.

## 127. ಕಾಡುತೊಗರಿ, ಕಾಡುಕಡಲೆ ಗಿಡ.

ತ. ಕಾಟ್ಟುತ್ತೋವರೈ. ತು. ಕಾಟ್‌ತೊಗರಿ. ಕೊಂ. ಕಾಡತೋರಿ.

ಉಪಯೋಗ: ಸಾಧಾ: ಬೀಜ ತಿನ್ನಬಹುದು. ಎಲೆಗಳು ದನಕ್ಕೆ ಆಹಾರ.

**Atylosia Candollei,** *W. and A.*—(Order Leguminosæ.)

*Tam.* Kāṭṭuttövarai. *Can.* Kāḍutogari, kāḍukaḍale-giḍa. *Tu.* Kāṭu-togari. *Kon.* Kāḍatōri.

### 128. ಕಾಡುದಾಲ್ಚಿನಿ (ದಾಲಚೀನಿ) ಮರ (Wild Cinnamon).

ತ. ಇಲವಂಗಮ್, ಕಾಟ್ಟುಕರುವಾಮರಂ. ತು. ಇಜಿನ್ದ ಮರ. ಮ. ಇಲವಂಗಮ್. ಕೊಂ. ಟಿಕ್ಕೆ. ಸಂ. ತಿಲಕ.

**ಹುಟ್ಟು:** ಮಲಬಾರ, ಕೊಂಕಣತೀರಗಳು. **ಪುಷ್ಪ:** ಪುಷ್ಯದಿಂದ ಫಾಲ್ಗುಣದ ವರೆಗೆ.

**ಉಪಯೋಗ:** ಔಷ: ಪುಡಿ ಮಾಡಿದ ಬೀಜ ಜೇನಿನೊಡನೆ ಮಕ್ಕಳ ಅತಿಸಾರಕ್ಕೂ ಕೆಮ್ಮಿಗೂ ಜ್ವರಕ್ಕೂ ಆಗುತ್ತದೆ. ಒಣಗಿದ ಮೊಗ್ಗೆಗಳು ಅತಿಸಾರ, ರಕ್ತಾತಿಸಾರ, ಕೆಮ್ಮು, ಉದರವಾಯು, ಇವುಗಳಲ್ಲಿ ಉಪಯೋಗ. ಈ ದಾಲ್ಚಿನಿಯ ಬಲವು ತಾಜಾ ದಾಲ್ಚಿನಿಗಿಂತ ಕಡಿಮೆ. ಸಾಧಾ: ಚೆಕ್ಕೆ ಸಂಬಾರಜೀನಸು; ಅದು ಪದಾರ್ಥಕ್ಕೆ ಸೇರುತ್ತದೆ.

**Cinnamomum iners,** *Reinw.*—C. malabathrum, *Batka.*—Laurus malabathrum, *Wall.*—(Order Laurineæ.)

*Tam.* Ilavangam, kāṭṭukaruvāmaram. *Can.* Kāḍudālčini (dālačīni)-mara. *Tu.* Ijinụda-mara. *Mal.* Ilavangam. *Kon.* Ṭikke. *San.* Tilaka.

### 129. ಕಾಡುಬಾಳೆ ಗಿಡ (Wild Plantain).

ತ. ಕಾಟ್ಟುವಾಳೈ. ತೆ. ಅಡವಿಯರಟಿಚೆಟ್ಟು. ತು. ಕಲ್ಲ್‌ಬಾರೆ. ಮ. ಕಲ್ಲುವಾಬ, ಕಾಟ್ಟುವಾಬ. ಕೊಂ. ರಾನಕೇಳಿ.

**ಉಪಯೋಗ:** ಸಾಧಾ: ಇದು ಘಟ್ಟದ ಅಡವಿಗಳಲ್ಲಿ ಸಿಕ್ಕುವಂಥ ಸುಂದರವಾದ ಗಿಡ. ೩-೪ ವರುಷ ಬದುಕಿ, ಕಡೆಗೆ ಹೂ ಕಾಯಿ ಬಿಟ್ಟು ಸಾಯುತ್ತದೆ. ಅದಕ್ಕೆ ಒಳ್ಳೇ ನಾರು ಉಂಟು.

**Musa superba,** *Roxb.*—(Order Scitamineæ.)

*Tam.* Kāṭṭuvāḷai. *Tel.* Aḍaviyaraṭičeṭṭu. *Can.* Kāḍubāḷe-giḍa. *Tu.* Kallụbāre. *Mal.* Kalluvāḷa, kāṭṭuvāḷa. *Kon.* Rānakēḷi.

### 130. ಕಾಡುಬೆಳ್ಳುಳ್ಳಿ, ಕಾಡಿರುಳ್ಳಿ, ನಾಯಿಉಳ್ಳಿ ಗಿಡ (Indian Squill).

ತ. ಕಾಟ್ಟುವೆಳ್ವಂಗಾಯಮ್. ತೆ. ಅಡವಿತೆಲ್ಲಗಡ್ಡ. ತು. ಬೊಗ್ಗುಳ್ಳಿ. ಮ. ಕಾಂತೇಂಬ. ಕೊಂ. ಕೊಳಕಾಂದೊ. ಹಿಂ. ಜಂಗ್ಲಿಪ್ಯಾಸ್.

**ಹುಟ್ಟು:** ದಕ್ಷಿಣ ಹಿಂದುಸ್ಥಾನತೀರಗಳು. **ಪುಷ್ಪ:** ಫಾಲ್ಗುಣ, ಚೈತ್ರ.

ಉಪಯೋಗ: ಔಷ: ಕುದುರೆಗಳ ಮೂತ್ರರೋಗಕ್ಕೂ ಹೊಟ್ಟೆನೋವಿಗೂ ಕೊಡುತ್ತಾರೆ. ಗಡ್ಡೆ ಸುಟ್ಟು ಅರದು ಅಂಗಾಲಿಗೆ ಹಚ್ಚಿದರೆ, ಉರಿ ಗುಣ.

**Urginea indica,** *Kunth.*—Scilla indica, *Roxb.*—(Order Liliaceæ.)

*Tam.* Kāṭṭuveḷvangāyam. *Tel.* Aḍavitellagaḍḍa. *Can.* Kāḍu-beḷḷuḷḷi, kāḍiruḷḷi, nāyiuḷḷi-giḍa. *Tu.* Bogguḷḷi. *Mal.* Kāntēna. *Kon.* Koḷakāndo. *Hin.* Janglipyās.

## 131. ಕಾಡುಮಲ್ಲಿಗೆ ಗಿಡ (Jasmine).

ತ. ಕಾಟು (ವನ) ಮಲ್ಲಿಗೈ, ಶಿರುಮಲ್ಲಿ. ತೆ. ಅಡವಿಮಲ್ಲೆ. ತು. ಎದ್ರೊಳಿ. ಮ. ಕಾಟ್ಟುಪಿಚ್ಚಕಂ, ಕಾಟ್ಟುಮಲ್ಲಿಕ. ಕೊಂ. ಕುಸರಿ. ಸಂ. ಪ್ರಿಯಾ, ಸುಪೂಜಾ.

ಹುಟ್ಟು: ತೀರಗಳ ಅಡವಿಗಳು. ಪುಷ್ಪ: ಫಾಲ್ಗುಣದಿಂದ ವೈಶಾಖದ ವರೆಗೆ.

ಉಪಯೋಗ: ಔಷ: ಬೇರನ್ನು ಬಜೇ ಬೇರಿನ ಸಂಗಡ ಲಿಂಬೇ ರಸದಲ್ಲಿ ಅರದು ಪದ್ದು ಎಂಬ ಸಂಜೆಗೆ ಲೇಪಿಸುವದು ಒಳ್ಳೇದು. ಎಲೆಗಳ ರಸ ವಾಂತಿ ಮಾಡಿಸಿ ವಿಷ ತೆಗೆಯುತ್ತದೆ. ಗಂಜಿಯಲ್ಲಿ ತಕ್ಕೊಂಡರೆ, ಅಪಸ್ಮಾರಕ್ಕೆ ಆಗುತ್ತದೆ.

**Jasminum angustifolium,** *Vahl.*—J. vimineum, *Willd.*—J. triflorum, *Pers.*—Nyctanthes angustifolia, *Lin.*—N. viminea, *Retz.*—N. triflora, *Burm.*—Mogorium vimineum, *Lamk.*——(Order Oleaceæ.)

*Tam.* Kāṭu (vana)-malligai, širumalli. *Tel.* Aḍavimalle. *Can.* Kāḍumallige-giḍa. *Tu.* Edroḷi. *Mal.* Kāṭṭupiččakam, kāṭṭumallika. *Kon.* Kusari. *San.* Priyā, supūjā.

## 132. ಕಾಡುಲಿಂಬೆ, ಕಾಡುನಿಂಬೆ, ದೊಡ್ಲಿಹುಳಿ ಗಿಡ.

ತ. ಕಾಟ್ಟೆಲುಮಿಚ್ಚೈ, ಕಾಟ್ಟುಕ್ಕುರುಂದು. ತೆ. ಅಡವಿನಿಮ್ಮ. ತು. ಕೈಪೇರಿಪುಳಿ. ಮ. ಕಾಟ್ಟು ಕುರುನ್ನು, ಮಲೆನಾರಕಂ, ಕಾಟ್ಟುನಾರಕಂ. ಕೊಂ. ಚೋರ್ನಿಂಬುವೊ, ಈಡ.

ಹುಟ್ಟು: ಮಲಬಾರ ಚೋಳಮಂಡಲ ತೀರಗಳು. ಪುಷ್ಪ: ಆಶ್ವೀಜ, ಕಾರ್ತೀಕ.

ಉಪಯೋಗ: ಔಷ: ಶಳವು ನಿವಾರಕ ಗುಣ. ಸಾಧಾ: ಕಾಯಿಯಿಂದ ಒಳ್ಳೇ ಉಪ್ಪಿನಕಾಯಿ ಮಾಡುತ್ತಾರೆ. ರಸವು ಬಣ್ಣಕ್ಕೆ ಆಗುತ್ತದೆ.

**Atalantia monophylla,** *Correa.*—Limonia mon., *Lin.*, *Roxb.*—Turræa virens, *Hellen.*—(Order Rutaceæ.)

*Tam.* Kāṭṭelumiččai, kāṭṭukkurundu. *Tel.* Aḍavinimma. *Can.* Kāḍulimbe, kāḍunimbe, dodlihuḷi-giḍa. *Tu.* Kaipēripuḷi. *Mal.* Kāṭṭukurunnu, malenārakam, kāṭṭunārakam. *Kon.* Čōrnimbuvo, īḍa.

## 133. ಕಾಡುಸಂಪಿಗೆ, ದೇವಗಣಿಗಲು, ಮೊಗಗಣಿಗಲು ಮರ (Pagoda Tree).

ತ. ಈಳತ್ತಲರಿ, ಪೆರುಂಗಳ್ಳಿ, ಕಳ್ಳಿಮಂದಾರೈ. ತೆ. ಅಡವಿಗನ್ನೇರು. ತು. ಗೋಸಂಪಿಗೆ. ಮ. ವೆಳುತ್ತರಳಿ, ಚಂಪಕಂ. ಕೊಂ. ಕಾಡಚಾಂಪೆ. ಹಿಂ. ಗೂಲಚಿನ್.

ಹುಟ್ಟು: ತೀರಪ್ರದೇಶಗಳಲ್ಲಿ. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ಚೆಕ್ಕೆ ಬೇರು ಜುಲಾಬು ಮಾಡಿಸುತ್ತವೆ. ಸಾಧಾ: ಹೂ ತೀವ್ರ ಪರಿಮಳವುಳ್ಳದ್ದು. ಗೆಲ್ಲುಗಳಿಂದ ಬೇಲಿ ಮಾಡುತ್ತಾರೆ; ಮರಕ್ಕೆ ಗೆದಲು ಹತ್ತುವದಿಲ್ಲ; ಹೂವಿನ ಅಲಂಕಾರಕ್ಕಾಗಿ ಮರವನ್ನು ತೋಟಗಳಲ್ಲಿ ಬೆಳಿಸುವರು.

**Plumieria acutifolia,** *Poiret.*—P. acuminata, *Roxb.*—P. obtusifolia, *Lour.*—(Order Apocynaceæ.)

*Tam.* Īḷattalari, peruṅgaḷḷi, kaḷḷimandārai. *Tel.* Aḍaviganneru. *Can.* Kāḍu-sampige, dēvagaṇigalu, mogagaṇigalu-mara. *Tu.* Gōsampige. *Mal.* Veḷuttaraḷi, čampakam. *Kon.* Kāḍačāmpe. *Hin.* Gūlačin.

## 134. ಕಾಡುಸಾಸಿವೆ, ನಾಯಿಬೆಳೆ ಗಿಡ, ಗಂಡುನಾಬಳ್ಳಿ.

ತ. ನಾಯ್ವೇಳೈ, ನಾಯ್ಕಡುಗು. ತೆ. ಕುಕ್ಕವಾಮಿಂಟ, ನೇಲವಾಮಿಂಟ. ತು. ಸಂತೆಮಿ. ಮ. ಆರ್ಯವಾಳ್. ಕೊಂ. ಶಿರಿಕಾಳ.

ಹುಟ್ಟು: ದಕ್ಷಿಣ ಹಿಂದುಸ್ಥಾನ, ಬಂಗಾಳ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಬೀಜ ಜ್ವರಕ್ಕೂ ಅತಿಸಾರಕ್ಕೂ ಉದರವಾಯುವಿಗೂ, ಬೇರು ಕ್ರಿಮಿರೋಗಕ್ಕೂ ಉಪಯೋಗ. ಎಲೆಗಳ ರಸ ವ್ರಣಗಳಿಗೆ ಆಗುತ್ತದೆ. ಎಲೆಗಳನ್ನು ತುಪ್ಪದಲ್ಲಿ ಬೇಯಿಸಿ, ಗಾಯಗಳಿಗೆ ಕಟ್ಟುತ್ತಾರೆ. ಎಲೆಗೆ ಉತ್ತೇಜಕ ಗುಣ ಉಂಟು. ಸಾಧಾ: ಎಲೆಗಳಿಂದ ಪಲ್ಯ, ಬೀಜಗಳನ್ನು ಅರದು ಕಡಿ ಮಾಡುತ್ತಾರೆ.

**Cleome viscosa,** *Lin.*—C. icosandra. *Lin.*—Polanisia icosandra, *W. and A.*—P. viscosa β. *Dec.*—(Order Capparideæ.)

*Tam.* Nāyvēḷai, nāykaḍugu. *Tel.* Kukkavāmiṇṭa, nēlavāmiṇṭa. *Can.* Kāḍu-sāsive, nāyibeḷe-giḍa, ganḍunā-baḷḷi. *Tu.* Santemi. *Mal.* Āryavāḷ. *Kon.* Širikāḷa.

## 135. ಕಾಡುನುಗ್ಗೆ ಗಿಡ.

ತ. ಕಾಟ್ಟುಮುರುಂಗೈ. ತೆ. ಅಡವಿಮುನಗ. ಮ. ಕಾಟ್ಟುಮುರಿಞ, ಪುನಮುರಿಞ.

ಹುಟ್ಟು: ದಕ್ಷಿಣ ಹಿಂದುಸ್ಥಾನ. ಪುಷ್ಪ: ಶ್ರಾವಣದಿಂದ ಕಾರ್ತಿಕದ ವರೆಗೆ.

ಉಪಯೋಗ: ಔಷ: ಚುರುಕು ಕೊಟ್ಟು ಶರೀರ ಘಟ್ಟಿ ಮಾಡುವ ಗುಣ. ಜ್ವರವಿದ್ದವರಿಗೆ ಕಷಾಯ ಕುಡಿಸುತ್ತಾರೆ; ಬೇರಿನ ಚೆಕ್ಕೆ ಜಜ್ಜಿ ಎಳ್ಳೆಣ್ಣೆಯ ಸಂಗಡ ಪಕ್ಷವಾತವಾದವರಿಗೆ ಲೇಪಿಸುತ್ತಾರೆ.

**Ormocarpum sennoides,** *Dec.*—Hedysarum sennoides, *Willd.*—(Order Leguminosæ.)

*Tam.* Kāṭṭumuruṅgai. *Tel.* Aḍavimunaga. *Can.* Kāḍunugge-giḍa. *Mal.* Kāṭṭumuriña, punamuriña.

### 136. ಕಾಡೆಳ್ಳು, ಹುಚ್ಚೆಳ್ಳು, ಗುರಿಯೆಳ್ಳು ಗಿಡ (Foolish Oilplant or Ramtil).

ತ. ಕಾಟ್ಟೆಳ್ಳು. ತೆ. ಅಡವಿನುವ್ವುಲು, ವಾಲಿಸೆಚೆಟ್ಟು. ದಖ್ಖ. ರಾಮ್ತಿಲ್.

ಸಾಧಾ: ಬೀಜದಿಂದ ಎಣ್ಣೆ ಮಾಡುತ್ತಾರೆ.

**Guizotia abyssinica,** *Cass.*—Heliopis platyglossa, *Cass.*—Bidens Ramtilla, *Wall.*—Helianthus oleifera, *Wall.*—Polymnia abyssin., *Lin.*—Ramtilla oleifera, *Dec.*—Verbesina sativa, *Roxb.*—(Order Compositæ.)

*Tam.* Kāṭṭeḷḷu. *Tel.* Aḍavinuvvulu, vālisečeṭṭu. *Can.* Kāḍeḷḷu, huččeḷḷu, guriyeḷḷu-giḍa. *Dakh.* Rāmtil.

### 137. ಕಾನಗಿನ ಮರ (Cabinet Rosewood).

ತ. ಪುಂಗಮರಮ್, ಪುಂಗು, ನಗುತ್ತಮ್, ಆಗಿರುನ್ನಂದಂ. ತೆ. ಕಾನುಗಚೆಟ್ಟು.

ಹುಟ್ಟು: ಪಶ್ಚಿಮ ತೀರ. ಪುಷ್ಪ: ವೈಶಾಖ, ಜ್ಯೇಷ್ಠ.

ಉಪಯೋಗ: ಔಷ: ಚೆಕ್ಕೆಯ ಕಷಾಯ ಜೀರ್ಣಬಲ ಹೆಚ್ಚಿಸುತ್ತದೆ. ಎಲೆಗಳನ್ನು ಕುಷ್ಠ ಸಂಬುಗಳಿಗೆ ತಿಕ್ಕುತ್ತಾರೆ. ಬೀಜದ ಎಣ್ಣೆ ವಾತಕ್ಕೆ, ಬೇರುಗಳ ಸೊನೆ ವ್ರಣಗಳಿಗೆ ಉಪಯೋಗ.

**Dalbergia lanceolaria,** *Lin.*—D. arborea, *Hayne.*—(Order Leguminosæ.)

*Tam.* Puṅgamaram, puṅgu, naguttam, āgirunnandam. *Tel.* Kānugačeṭṭu. *Can.* Kānagina-mara.

### 138. ಕಾಫಿ, ಬುನ್ನು ಗಿಡ (Coffee).

ತ. ಕಾಪಿಕೊಟ್ಟೈ. ತೆ. ಕಾಪಿವಿತ್ತುಲು. ತು. ಕಾಪಿ. ಮ. ಕಪ್ಪಿ, ಬುನ್ನು.

ಹುಟ್ಟು: ಘಟ್ಟಸೀಮೆಗಳು, ನೀಲಗಿರಿ, ಲಂಕಾ ದ್ವೀಪ.

ಉಪಯೋಗ: ಔಷ: ಬೀಜದ ದ್ರಾವಕ ಅಜೀರ್ಣರೋಗಕ್ಕೆ ಬಹಳ ಒಳ್ಳೇದು. ದಪ್ಪ ಕಷಾಯ ಅತಿಸಾರಕ್ಕೂ ಅಫೀನಿಯ ವಿಷಕ್ಕೂ ಆಗುತ್ತದೆ.

**Coffea arabica,** *Lin.*—C. laurifolia, *Salisb.*—C. vulgaris, *Mœnch.*—(Order Rubiaceæ.)

*Tam.* Kāpikoṭṭai. *Tel.* Kāpivittulu. *Can.* Kāphi, bunnu-giḍa. *Tu.* Kāpi. *Mal.* Kappi, bunnu.

### 139. ಕಾಮಂಚ, ಕಾವಂಚೆ, ಕಾಚಿ, ಮಜ್ಜಿಗೆ, ವಾಸನೆ, ನೆಸೆ, ಲಾವಂಚಿ ಹುಲ್ಲು (Lemon Grass).

ತ. ಕಾವಟ್ಟಂಪುಲ್, ಕರ್ಪೂರಪುಲ್, ಕುಲಾಂಗುಲಿ, ಮೂಂದಪುಲ್. ತೆ. ನಿಮ್ಮಗಡ್ಡಿ, ಚಿಪ್ಪಗಡ್ಡಿ, ಕಾಮಂಚಿ ಗಡ್ಡಿ. ತು. ಚಾತಪ್ಪು. ಮ. ಸಂಭಾರಪುಲ್ಲ್, ಚಾಯಪುಲ್ಲ್. ಕೋ. ತಾಕ್ಕಾತಣ. ಸಂ. ಮಾಲಾತೃಣ, ತಕ್ರತೃಣ.

ಹುಟ್ಟು: ಪಶ್ಚಿಮತೀರ, ಬಂಗಾಳ, ಸಿಂಹಳ.

ಉಪಯೋಗ: ಔಷ: ಇದರ ಎಣ್ಣೆಯನ್ನು ವಾತಕ್ಕೂ ಉಳುಕಿಗೂ ತಲೆನೋವಿಗೂ ಲೇಪಿಸುವದು ಶಮನಕರ. ೬-೭ ಬಿಂದು ಸಕ್ಕರೆಯಲ್ಲಿ ತಕ್ಕೊಂಡರೆ, ಉದರವಾಯುವಿಗೂ ಅದರ ದೆಸೆಯಿಂದಾಗುವ ಶೂಲೆಗೂ ಗುಣಕರ. ಇದರಿಂದ ವಾಂತಿ ಸಹ ನಿಲ್ಲುತ್ತದೆ. ಸನ್ನಿರೋಗದಲ್ಲಿ ತಾಸು ತಾಸಿಗೆ ೫-೬ ಬಿಂದು ತಕ್ಕೊಳ್ಳುವದು ಒಳ್ಳೇದು; ರೋಗ ಕಠಿಣವಾದರೆ, ಅರ್ಧ ತಾಸಿಗೊಮ್ಮೆ ತಕ್ಕೊಳ್ಳಬೇಕು. ಎಲೆಗಳನ್ನು ಮಜ್ಜಿಗೆಯಲ್ಲಿ ಅರದು ದದ್ದಿಗೆ ಹಚ್ಚುವರು. ಅವುಗಳ ಕಲ್ಕನೀರು ಬೆವರು ಬರುವ ಹಾಗೆ ಮಾಡುತ್ತದೆ; ಅದರಿಂದ ಬಾಯಾರಿಕೆ ಹರ.

**Andropogon Schœnanthus,** *Lin.*—A. aromaticus, *Sieb.*—A. bicornis, *Forsk.*—A. citratum, *Dec.*—A. citriodorus, *Link.*—A. pruinosus, *Nees.*—A. Nardus, *Trin.*—Cymbopogon citriodorus, *Link.*—C. Schœnanthus, *Spr.*—Lagurus Sch., *Lin.*—Trachypogon Sch., *Nees.*—(Order Gramineæ.)

*Tam.* Kāvaṭṭampul, karpūrapul, kulānguli, māndapul. *Tel.* Nimmagaḍḍi, čippagaḍḍi, kāmańčigaḍḍi. *Can.* Kāmańča, kāvańče, kāči, majjige, vāsane, nese, lāvańči-hullu. *Tu.* Čātappu. *Mal.* Sambhārapullu, čāyapullu. *Kon.* Tākkātaṇa. *San.* Mālātriṇi, takratriṇi.

### 140. ಕಾಮಕಸ್ತೂರಿ, ನೀರುತುಳಸಿ, ಕಮ್ಮಗಗ್ಗರೆ, ಕರ್ವಗಗ್ರಿ ಗಿಡ (Sweet Basil).

ತ. ತಿರುನೀರುಪಚ್ಚೈ, ಕರನ್ದೈ, ಉರುತ್ತಿರಜಡೈ. ತೆ. ವಿಬೂದಿಪತ್ರಿ, ತುಳಸಿಕೃತ್ತಾವು. ತು. ಕಾಮಕಸ್ತುರಿ. ಮ. ರಾಮತುಳಸಿ. ಕೊಂ. ಕಾಮಕಸ್ತೂರಿ. ಹಿಂ. ಸಬ್ಜ.

ಹುಟ್ಟು: ಸಾಧಾರಣ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಬೀಜಕ್ಕೆ ತಂಪು ಗುಣ. ಅದರ ಕಷಾಯ ಕೋವೆರೋಗಕ್ಕೂ ಅಜೀರ್ಣಕ್ಕೂ ದೀರ್ಘಕಾಲದ ಅತಿಸಾರಕ್ಕೂ ಬಾಳಂತಿಗೂ ಒಳ್ಳೇದು. ಎಲೆಗಳ ರಸ ಕಿವಿನೋವಿಗಾಗುತ್ತದೆ; ಮೈನೋವಿಗೂ ಉಳುಕಿಗೂ ಸಹ ಹಚ್ಚುತ್ತಾರೆ. ಸಾಧಾ: ಪರಿಮಳ. ಬೀಜ ಪುಷ್ಟಿ ಕೊಡುತ್ತದೆ.

**Ocimum Basilicum,** *Lin.*—O. pilosum, *Willd.* β.—(Order Labiatæ.)

*Tam.* Tirunīrupaččai, karandai, uruttirajaḍai. *Tel.* Vibūdipatri, tuḷasi-krittāvu. *Can.* Kāmakastūri, nīrutuḷasi, kammagaggare, karvagagri-giḍa. *Tu.* Kāmakasturi. *Mal.* Rāmatuḷasi. *Kon.* Kāmakastūri. *Hin.* Sabja.

### 141. ಕಾಮಲತೆ (Red Jasmine or Indian Forget-me-not).

ಹುಟ್ಟು: ಸಾಧಾರಣ.

ಉಪಯೋಗ: ಬಳ್ಳಿಯ ಹೂ, ಅಲಂಕಾರ.

**Ipomœa Quamoclit,** *Lin.*—(Order Convolvulaceæ.)

*Can.* Kāmalate.

## 142. ಕಾವಾಕುಳ ಗಿಡ.

ತ. ನೀರ್ಕಿರಾಂಬು. ಮ. ಕಾಟುಕರಯಾಂಪು, ಕಾಟುಕರುಪ್ಪು.

ಹುಟ್ಟು: ದಕ್ಷಿಣ ಹಿಂದುಸ್ಥಾನ, ಬಂಗಾಳ. ಪುಷ್ಪ: ಆಶ್ವೀಜ, ಕಾರ್ತಿಕ.

ಉಪಯೋಗ: ಔಷ: ಬೇರೆ ಔಷಧಗಳ ಸಂಗಡ ಜ್ವರಕ್ಕೆ ಉಪಯುಕ್ತ. ಸಮೂಲವನ್ನರದು ಮಜ್ಜಿಗೆಯಲ್ಲಿ ತಕ್ಕೊಂಡರೆ, ಅತಿಭೇದಿಗೂ, ಅದರ ಕಷಾಯ ಕ್ರಿಮಿಗೂ ಆಗುತ್ತದೆ.

**Jussieua suffruticosa,** *Lin.*—J. villosa, *Lam.*—Epilobium fruticosum, *Lour.*—(Order Onagraceæ.)

*Tam.* Nīrkirāmbu. *Can.* Kāvākuḷa-giḍa. *Mal.* Kāṭukarayāmpu, kāṭukaruppu.

## 143. ಕಾಶ್ಮೀರಿ, ಕೂಲಿ ಮರ.

ತ. ಪೆರುಂಗುಮಿಳ್, ಕಾಟ್ಟಣಮ್. ತೆ. ಗುಮುಡುಚೆಟ್ಟು, ಕಾಶ್ಮರ್ಯಮು. ಮ. ಕುಮಿಳ್. ಸಂ. ಗಂಧಾರಿ, ಗಾಂಧಾರ್ಯಾ.

ಹುಟ್ಟು: ಪಶ್ಚಿಮ ಪೂರ್ವ ತೀರಗಳೂ ನೀಲಗಿರಿಗಳೂ. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ಬೇರಿನ ಪುಡಿ ವಾತಕ್ಕೂ, ಅದರ ಕಷಾಯ ವಾತ ಜ್ವರಕ್ಕೂ ಉಪಯೋಗ. ಸಾಧಾ: ಮರ ಕೆಲಸಕ್ಕೆ ಬರುತ್ತದೆ.

**Gmelina arborea,** *Roxb.*—(Order Verbenaceæ.)

*Tam.* Perungumiḷ, kāṭṭaṇam. *Tel.* Gumuḍucettu, kāšmaryamu. *Can.* Kā-šmīri, kūli-mara. *Mal.* Kumaḷu. *San.* Gandhāri, gāndhāryā.

## 144. ಕಾಸಮರ್ದವು ಗಿಡ.

ತೆ. ಪೈಡಿತಂಗೇಡು, ನೂತಿಕಶಿಂದ, ಕಾಸಮರ್ದಕಮು. ಮ. ಪೊನ್ನಾಂತಕರ.

ಹುಟ್ಟು: ದಕ್ಷಿಣ ಹಿಂದುಸ್ಥಾನ, ಬಂಗಾಳ. ಪುಷ್ಪ: ಕಾರ್ತಿಕದಿಂದ ಮಾಘದ ವರೆಗೆ.

ಉಪಯೋಗ: ಔಷ: ಚೆಕ್ಕೆಯ ಕಷಾಯವೂ, ಜೇನು ಕೂಡಿಸಿದ ಬೀಜದ ಪುಡಿಯೂ ಬಹುಮೂತ್ರ ನಿಲ್ಲಿಸುವದು. ಎಲೆ ಮತ್ತು ಬೇರಿನ ಚೆಕ್ಕೆ ಜೇನಿನ ಸಂಗಡ ದದ್ದಿಗೂ ಹುಣ್ಣುಗಳಿಗೂ ಹಚ್ಚುವರು. ಎಲೆಗಳ ಕಷಾಯ ಜ್ವರಕ್ಕೂ ವಾತಕ್ಕೂ ಗುಣಕರ. ಎಲೆಗಳನ್ನು ನೀರಲ್ಲಿ ಅರದು ಸಕ್ಕರೇ ಹಾಕಿ ತಕ್ಕೊಂಡರೆ, ಅರಸಿನಮುಂಡಿಗೆ ಹರ. ಸಾಧಾ: ಹಸಿ ಎಲೆಯನ್ನು ತಿನ್ನುತ್ತಾರೆ.

**Cassia Sophera,** *Lin.*—C. chinensis, *Jacq.*—C. coromandelana, *Jacq.*—C. esculenta, *Roxb.*—Senna esculenta, *Roxb.*—S. purpurea, *Roxb.*—S. Sophera, *Roxb.*—(Order Leguminosæ.)

*Tel.* Paiḍitangēḍu, nūtikašinda, kāsamardakamu. *Can.* Kāsamardavu-giḍa. *Mal.* Ponnāntakara.

### 145. ಕಾಸರ್ಕ, ಕಾಸರಕಾಯಿ, ಹೆಮ್ಮುಷ್ಟಿ, ನಂಜಿನ ಕೊರಡಿನ ಮರ (Vomit-nut, Strychnine Tree, Nux-vomica).

ತ. ಎಟ್ಟಿಮರಮ್, ವಿಷಮುಟ್ಟಿ, ಕಾಕೊಡಿ. ತೆ. ಮುಸಿಡಿ, ಮುಷ್ಟಿಚೆಟ್ಟು. ತು. ಕಾಯೆರ್ ಮರ. ಮ. ಕಾಞ್ಞಿರಮ್. ಕೊಂ. ಕಾರ್ಯಾರೂಕು. ಸಂ. ಕಾರಸ್ಕರಃ.

ಹುಟ್ಟು: ಪಶ್ಚಿಮ ಪೂರ್ವ ತೀರಗಳ ಅಡವಿಗಳು. ಪುಷ್ಪ: ಮಾರ್ಗಶಿರ, ಪುಷ್ಯ.

ಉಪಯೋಗ: ಔಷ: ಎಲೆಗಳ ಕಷಾಯ ತಲೆನೋವಿಗೂ ಕೋವೆರೋಗಕ್ಕೂ ವಾತಕ್ಕೂ ಸಂದುವಾತದ ಬಾವಿಗೂ ಗುಣಕರ ಲೇಪನ. ಈ ಕಷಾಯವನ್ನು ತುಟಿಗೆ ತಾಗಿಸಿ ಕುಡಿಯಬಾರದು. ಚೆಕ್ಕೆ ಗಂಜಿನೀರಲ್ಲಿ ತೆಗೆದರೆ, ಪಿತ್ತಹರ. ಬೇರು ಜ್ವರಕ್ಕೂ ಜಂತುಗಳ ವಿಷಕ್ಕೂ ಪಿತ್ತದೋಷಕ್ಕೂ, ಬೀಜ ಪಕ್ಷವಾತಕ್ಕೂ ಕುಷ್ಠಕ್ಕೂ ಉಪಯೋಗ. ಈ ಔಷಧ ಮಾಡುವಲ್ಲಿ ಎಲೆಯನ್ನಾಗಲೀ ಬೀಜವನ್ನಾಗಲೀ ಹೊಟ್ಟೆಗೆ ಮಿತಗೆಟ್ಟು ತಕ್ಕೊಂಡರೆ, ವಿಷ. ಸಾಧಾ: ಮರ ಕೆಲಸಕ್ಕೆ ಬರುತ್ತದೆ. ಎಲೆಗಳು ತೆಂಗಿನ ಮರಗಳಿಗೆ ಒಳ್ಳೇ ಈಟು.

**Strychnos nux-vomica,** *Lin.* — (Order Loganiaceæ.)

*Tam.* Eṭṭie-maram, vishamuṭṭi, kākoḍi. *Tel.* Musiḍi, mushṭičeṭṭu. *Can.* Kāsarka, kāsarakāyi, hemmushṭi, nañjina-koraḍina-mara. *Tu.* Kāyeru-mara. *Mal.* Kāññiram. *Kon.* Kāryā-rūku. *San.* Kāraskaraḥ.

### 146. ಕಾಸರಕನ ಬಂದನಿಗೆ, ಕಾಸರ್ಕ ಬದನಿಕೆ, ಕಾಸ್ರಕ ಬಾಂದುರಿಕೆ (Indian Mistletoe).

ತ. ಉಚ್ಚಿಚೆಡಿ, ಪುಲ್ಲುರುವಿ, ಕಾಮರೀಚಂ. ಮ. ಕಾಞಿರತ್ತಿನ್ಮೇಲ್ಪುಲ್ಲುಣ್ಣಿ, ಇತ್ತಿ. ಕೊಂ. ಕಾರ್ಯಾವೆಲಿಬೆಂದರ್ಲಿ.

ಹುಟ್ಟು: ಹೆಚ್ಚಾಗಿ ಕಾಸ್ತರಕನ ಮರಗಳಲ್ಲಿ.

ಉಪಯೋಗ: ಔಷ: ಹಳೇ ಹುಣ್ಣುಗಳಿಗೆ ಒಳ್ಳೇದು. ಮೈಲಿರೋಗದಲ್ಲಿ ಸಹ ಉಪಯೋಗ.

**Loranthus loniceroides,** *Lin.* — Viscum monoicum, *Roxb.* — L. longiflorus, *Desrouss.* — (Order Loranthaceæ.)

*Tam.* Uččičeḍi, pulluruvi, kāmaričam. *Can.* Kāsarakana-bandanige, kāsarka-badanike, kāsraka-bāndurike. *Mal.* Kāñirattinmēlpulluṇṇi, itti. *Kon.* Kāryā-veli-bendarli.

### 147. ಕಿತ್ತಳೇ ಮರ (Sweet Orange).

ತ. ನಾರಂಗಮ್, ನಾರತ್ತೈ, ಕೊಳಿಂಜಿ. ತೆ. ನಾರಂಗಮು, ನಾರಂಜ. ತು. ಕಿತ್ತುಲಿ. ಮ. ಮಧುರನಾರಕಮ್, ನಾರಙ. ಕೊಂ. ಸೊನ್ನಾರಿಂಗ. ಸಂ. ನಾರಂಗಮ್.

ಹುಟ್ಟು: ಕೊಡಗೂ, ನೀಲಗಿರಿಗಳೂ. ಪುಷ್ಪ: ಮಾಘ.

ಉಪಯೋಗ: ಔಷ: ದಂತದುರ್ಬಲತೆಗೆ ವಿಶೇಷ ಗುಣಕರ. ಹಣ್ಣಿನ ಸಿಪ್ಪೆ ಸುರಿದರೆ ಕೆಟ್ಟ ಹುಣ್ಣುಗಳಿಗೆ, ಅದರ ಪುಡಿ ಕಾಮಿಲೆಗೆ ಆಗುತ್ತದೆ. ಕಷಾಯ ಅಜೀರ್ಣಹರ, ಬಲಕರ; ಅದು ಕ್ರಿಮಿಗಳ ಉಪದ್ರವಕ್ಕೂ ಆಗುವದು. ಸಾಧಾ: ಫಲ ತಿನ್ನಲಿಕ್ಕೆ ರುಚಿಕರ.

**Citrus aurantium,** *Lin.*—(Order Rutaceæ.)

*Tam.* Nārangam, nārattai, koḷiñči. *Tel.* Nārangamu, nārañji. *Can.* Kittaḷe-mara. *Tu.* Kittuli. *Mal.* Madhura-nārakam, nārana. *Kon.* Sonnāringa. *San.* Nārangam.

## 148. ಕೀರಕಸಾಲೆ, ಗೀರಕಸಾಲೆ, ಹಂದಿಕೀರೆ, ಚಿಲ್ಕರಿವೆ ಸೊಪ್ಪು (Amaranth).

ತ. ಶಿರುಕೀರೈ, ಕಂಮೈ. ತೆ. ಚಿರಿಕೂರ. ಮ. ಚೆರುಚೀರ. ಸಂ. ಗಂಡೀರ, ಘನರವ, ಬದರಕ, ಅಲ್ಪಮಾರಿಷಃ.

ಹುಟ್ಟು: ಮಲಬಾರತೀರ, ಬಂಗಾಳ. ಪುಷ್ಪ: ವೈಶಾಖ, ಜ್ಯೇಷ್ಠ.

ಉಪಯೋಗ: ಔಷ: ಬೇರು ಮೂತ್ರಸಿಕ್ಕಿಗೂ, ಕಷಾಯ ಮೂಲವ್ಯಾಧಿಗೂ ಮಕ್ಕಳ ಗ್ರಹಣಿಗೂ ಉಪಯೋಗ. ಸಾಧಾ: ಎಲೆಗಳಿಂದ ಪಲ್ಯ ಮಾಡುತ್ತಾರೆ.

**Amarantus mangostanus,** *Lin.*—A. campestris, *Willd.*—(Order Amarantaceæ.)

*Tam.* Širukīrai, kammai. *Tel.* Čirikūra. *Can.* Kīrakasāle, gīrakasāle, handikīre, čilkarive-soppu. *Mal.* Čeručīra. *San.* Gaṇḍīra, ghanarava, badaraka, alpamārisha*ḥ*.

## 149. ಕಿರಿಗುಳ್ಳ, ಕೆಂಪುಗುಳ್ಳ, ಹಬ್ಬುಗುಳ್ಳ ಗಿಡ (Indian Nightshade).

ತ. ಮುಳ್ಳಿಚಡಿ, ಕರಿಮುಳ್ಳಿ, ಶಿರುವಳುದಲೈ. ತೆ. ತೆಲ್ಲಮುಲಕ, ಕಾಕಮಾಚಿ, ವರ್ತಾಕಿ. ತು. ಕಲ್ಲಂಟೆ. ಮ. ಚೆರುಚುಂಡ, ಚೆರುವಳುತಿನ, ನಿಲವಳುತಿನ. ಕೊಂ. ಕಲ್ಲಾಂಟ. ಸಂ. ಬೃಹತೀ, ಅಲ್ಪಫಲ.

ಹುಟ್ಟು: ಸಾಧಾರಣ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಬೇರಿನ ಕಷಾಯ ಮೂತ್ರಸಿಕ್ಕಿಗೂ ಮೂತ್ರಗುಡ್ಡಿನ ವೇದನೆಗೂ ಉಪಯೋಗ; ಹಲ್ಲುನೋವಿಗೂ ಕೆಮ್ಮಿಗೂ ವಾಂತಿ ನಿಲ್ಲಿಸುವದಕ್ಕೂ ಕೊಡುವರು. ಸಾಧಾ: ಕಾಯಿ ಪಲ್ಯ; ಹಣ್ಣು ವಿಷಕರ.

**Solanum indicum,** *Lin.*—S. canescens, *Blum.* β.—S. violaceum, *Jacq.*—(Order Solanaceæ.)

*Tam.* Muḷḷičaḍi, karimuḷḷi, širuvaḷudalai. *Tel.* Tellamulaka, kākamāči, vartāki. *Can.* Kiriguḷḷa, kempuguḷḷa, habbuguḷḷa-giḍa. *Tu.* Kallaṇṭe. *Mal.* Čeručuṇḍa, čeruvaḷutina, nilavaḷutina. *Kon.* Kallāṇṭa. *San.* Bṛihatī, alpaphala.

**150. ಕಿರಿಜಾಲಿ, ಕರಿಕಸ್ತೂರಿ, ಪೀಕ್‌ಜಾಲಿ, ಸಣ್ಣ ಜಾಲಿ (Fragrant Acacia).**

ತ. ಪೀಕ್ಕರುವೇಲ್. ತೆ. ಕಸ್ತೂರಿ. ಮ. ಕರಿವೇಲಂ, ಪೌವೇಲಂ. ಕೊಂ. ಕುಸ್ರಿಝಾಡ. ಸಂ. ಅರಿಮೇದಃ.

ಹುಟ್ಟು: ಸಾಧಾರಣ. ಪುಷ್ಪ: ಮಾರ್ಗಶಿರ, ಪುಷ್ಯ.

ಉಪಯೋಗ: ಸಾಧಾ: ಹೂ ಪರಿಮಳ; ಮರ ಘಟ್ಟಿಯಾಗಿದೆ; ಅಂಟು ಉಂಟು. ಕಾಯಿಯ ರಸವು ಒಳ್ಳೇ ಬೆಸುಗೆ. ಬೇರಿನ ಸಿಪ್ಪೆ ಚರ್ಮ ಹದ ಮಾಡುವದಕ್ಕೂ ಕಪ್ಪು ಬಣ್ಣಕ್ಕೂ ಉಪಯೋಗ. ಜ್ವರವಿರುವವರು ಅದರ ಕಷಾಯದಲ್ಲಿ ಕೆಲವು ಕಡೆಯಲ್ಲಿ ಮಿಾಯುತ್ತಾರೆ.

**Acacia Farnesiana,** *Willd.*—Mimosa Farnesiana, *Lin.*—Vachellia Farnesiana, *W. and A.*—(Order Leguminosæ.)

*Tam.* Pīkkaruvēl. *Tel.* Kastūri. *Can.* Kirijāli, karikastūri, pīkjāli, saṇṇa-jāli. *Mal.* Karivēlam, pauvēlam. *Kon.* Kusri-jhāḍa. *San.* Arimēdaḥ.

**151. ಕಿರಿಹೊನ್ನೆ, ಬೊಬ್ಬಿ ಮರ (Poon Tree).**

ತು. ಶಿರಿಪೊನ್ನೆ. ಮ. ಚೆರುಪುನ್ನ. ಮಹಾ. ಇರೈ.

ಉಪಯೋಗ: ಔಷ: ಇದರ ಎಣ್ಣೆ ಕುಷ್ಠಕ್ಕೂ ಸಂಜೆಗೂ ವಾತಕ್ಕೂ ಉಪಯೋಗ. ಸಾಧಾ: ಎಣ್ಣೆ ದೀಪಕ್ಕೆ ಆಗುತ್ತದೆ. ಬೀಜ ತಿನ್ನುತ್ತಾರೆ.

**Calophyllum Wightianum,** *Wall.*—C. spurium, *Chois.*—(Order Guttiferæ).
*Can.* Kirihonne, bobbi-mara. *Tu.* Širiponne. *Mal.* Čerupunna. *Mah.* Irai.

**152. ಕಿರುಗೋಳಿ ಮರ.**

ತು. ಶಿಡಿಗೋಳಿ. ಸಂ. ಕ್ಷುದ್ರ.

ಉಪಯೋಗ: ಔಷ: ತಾಮರೆ ಮತ್ತು ತಲೆಕಜ್ಜಿಗೆ ಉಪಯೋಗ. ಚೆಕ್ಕೆ ಕಷಾಯ ಎಣ್ಣೆಯಲ್ಲಿ ಕಾಸಿದರೆ, ವಾತಕ್ಕೆ ಆಗುತ್ತದೆ.

**Ficus retusa,** *Lin.*—Urostigma pisiferum, *Miq.*—(Order Urticaceæ.)
*Can.* Kirugōḷi-mara. *Tu.* Šidigōḷi. *San.* Kshudra.

**153. ಕಿರುನೆಲ್ಲಿ ಗಿಡ.**

ತ. ಕೀಳ್ಕಾಯ್ನೆಲ್ಲಿ, ಕೀಳಾನೆಲ್ಲಿ, ಚಿಮುಟ್ಟಿ. ತು. ನೆಲನೆಲ್ಲಿ. ಮ. ಕೀ಴ಾನೆಲ್ಲಿ, ಕಿರುತಾನೆಲ್ಲಿ. ಕೊಂ. ಭೂಂಯಾಆವಳಿ. ಸಂ. ಭೂತಧಾತ್ರಿ, ಪುತ್ರಶ್ರೇಣಿ, ಪಿತಾ, ಬಹುಫಲ.

ಹುಟ್ಟು: ದಕ್ಷಿಣ ಹಿಂದುಸ್ಥಾನ, ಬಂಗಾಳ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ:** ಔಷ: ಹಸಿ ಬೇರನ್ನು ಗುದ್ದಿ ಬೆಳಿಗ್ಯೆ ಸಂಜೆ ಹಾಲಿನಲ್ಲಿ ತಕ್ಕೊಂಡರೆ, ಅರಸಿನಮುಂಡಿಗೆ ಗುಣ. ದಂಟಿನ ರಸ ಎಣ್ಣೆಯೊಡನೆ ಕಣ್ಣುನೋವಿಗೂ, ಬೇರೂ ಎಲೆಗಳೂ ಬಾಯಿಯ ಅಗ್ರಕ್ಕೂ ಬೇರೆ ಹುಣ್ಣುಗಳಿಗೂ ಉಪಯೋಗ. ಮೊಗ್ಗೆಗಳ ಕಷಾಯ ರಕ್ತಾತಿಸಾರಕ್ಕೆ ಆಗುತ್ತದೆ. ಬೇರು ಎಲೆ ಮೊಗ್ಗೆಗಳು ಮೂತ್ರಭೇದಿ.

**Phyllanthus Niruri,** *Lin.*—Nymphanthus Niruri, *Lour.*—Urinaria erecta, *Medic.*—(Order Euphorbiaceæ.)

*Tam.* Kīḷkāynelli, kīḷānelli, čimuṭṭi. *Can.* Kirunelli-giḍa. *Tu* Nelanelli. *Mal.* Kīḷānelli, kirutānelli. *Kon.* Bhūnyāvāḷi. *San.* Bhūtadhātri, putrašrēṇi, pitā, bahuphala.

## 154. ಕಿರುಮಂಜಿ ಬಳ್ಳಿ, ನೇಪಾಳದ ಬೇರು, ಆಡುಮುಟ್ಟದ ಗಿಡ (Country Ipecacuanha).

ತ. ನಾಯ್ಪಾಲೈ, ಕುರಿಂಜಾ, ಸಾರಂಗಮ್. ತೆ. ಕುರಿಂಜ, ಪೊಡಪತ್ರಮು, ಕುಕ್ಕವಾಲ. ಮ. ವಳ್ಳಿಪ್ಪಾಲ. ಹಿಂ. ಅಂತಮೂಲ್, ಜಂಗ್ಲಿಪಿಕ್ವಾನ್. ಸಂ. ಮೂಲಿನೀ.

**ಹುಟ್ಟು:** ದಕ್ಷಿಣ ಹಿಂದುಸ್ಥಾನ, ಬಂಗಾಳ. **ಪುಷ್ಪ:** ಇಡೀ ವರುಷ.

**ಉಪಯೋಗ:** ಔಷ: ಈ ಬಳ್ಳಿಯ ಎಲೆಯಾಗಲೀ ಬೇರು ಆಗಲೀ ಒಳ್ಳೇ ವಾಂತಿಕರ ಔಷಧವೆಂದು ಪ್ರಶಸ್ತವಿದೆ. ಇದರ ಒಣಗಿದ ಎಲೆಗಳ ಚೂರ್ಣ ವಿಲಾಯಿತೀ ವಾಂತ್ಯೌಷಧದ ಗುಣವೂ ಫಲವೂ ಉಳ್ಳದ್ದೇ. ಅದರಿಂದ ಒಳಗಿನ ಕಫ ಹೊರಗೆ ಹಾಕುವ ಹಾಗೆಯೂ ಹೆಚ್ಚು ಬೆವರು ಬರುವ ಹಾಗೆಯೂ ಮಾಡುತ್ತದೆ. ಸ್ವಲ್ಪ ತಕ್ಕೊಂಡರೆ, ಉದರವಾಯುವಿಗೆ ಒಳ್ಳೇದು. ಅತಿಸಾರದ ಮತ್ತು ರಕ್ತಾತಿಸಾರದ ಸುರುವಿನಲ್ಲಿ (ಮೈಕಾಯುವದಿದ್ದರೂ) ಎಲೆಯ ಚೂರ್ಣವನ್ನು ಗೋಂದಿನ ಮತ್ತು ಸ್ವಲ್ಪ ಅಫೀಸಿಯ ಸಂಗಡ ಕೊಡುವದುಂಟು. ಬೇರು ಅರದು ಸ್ವಲ್ಪ ತಕ್ಕೊಂಡರೆ, ಮಲ ಶೋಧನೆ ಮಾಡುತ್ತದೆ. ವರಿಸೇಜ್ವರದ ಅಥವಾ ಮಲೇಜ್ವರದ ಸಮ್ಮಂಧವಾಗಿ ರಕ್ತಾತಿಸಾರ ಉಂಟಾದರೆ, ಎಲೆಗಳ ಚೂರ್ಣವನ್ನು ಕ್ವಿನೀನ್ ಎಂಬ ಬಾರ್ಕಿನ ಪುಡಿಯ ಸಂಗಡ ಕೊಡುವದು ಒಳ್ಳೇದು.

**Tylophora asthmatica,** *W. et A.*—Asclepias asthmatica, *Willd.*—Cynanchum Ipecacuanha, *Willd.* β.—C. vomitorium, *Lam.*—(Order Asclepiadeæ.)

*Tam.* Nāypālai, kuriṅjā, sāraṅgam. *Tel.* Kuriṅja, poḍapatramu, kukkavāla. *Can.* Kirumaṅji-baḷḷi, nēpāḷada-beru, āḍumuṭṭada-giḍa. *Mal.* Vaḷḷippāla. *Hin.* Antamūl, jaṅglipikvān. *San.* Mūlinī.

## 155. ಕಿರುಹಾಲೆ, ಕಾಡಬಜ, ಗೋಕರ್ಲ್ಣ ಮರ (Indian Nettle Tree or Charcoal Tree).

ತ. ಪೇಯಿಮುಂನೈ. ತೆ. ಮೊರಲಿ, ಪ್ರಿಯಾಳುವೃಕ್ಷಮು. ಮ. ಮಲ್ಲಂತೊದ್ದಲಿ. ಸಂ. ಜೀವಂತಿ.

**ಹುಟ್ಟು:** ಪಶ್ಚಿಮ ಪೂರ್ವ ತೀರಗಳು, ಬಂಗಾಳ. **ಪುಷ್ಪ:** ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಬೇರು ಚೆಕ್ಕೆ ಎಲೆಗಳನ್ನು ಅಪಸ್ಮಾರಕ್ಕೆ ಪ್ರಯೋಗಿಸುತ್ತಾರೆ. ಸಾಧಾ: ಚೆಕ್ಕೆಯಲ್ಲಿ ನಾರು ಉಂಟು. ಎಲೆಗಳು ನಯ ಮಾಡಲಿಕ್ಕಾಗುತ್ತವೆ.

**Trema orientalis,** *Blume.*—Sponia orientalis, *Planch.*—Celtis orient., *Lin.*—(Order Urticaceæ.)

*Tam.* Pēyimunnai. *Tel.* Morali, priyāḷuvṛikshamu. *Can.* Kiruhāle, kāḍabaja, gōrklu-mara. *Mal.* Mallantoddali. *San.* Jīvanti.

### 156. ಕಿಸಂಗಿ, ಹೆತುತ್ತಿ, ತುತ್ತೀ, ತುರುಬೀ ಗಿಡ (Country Mallow).

ತ. ಪಣಿಯಾರತುತ್ತಿ. ತೆ. ತುತ್ತುರುಬೆಂಡ, ನೂಗುಬೆಂಡ, ಮುತ್ತವಚಿರಿಬೆಂಡ. ತು. ಉರ್ಕಿ. ಮ. ಕಾಟೂರಂ, ವೆಳ್ಳೂರಂ.

**ಹುಟ್ಟು:** ಸಾಧಾರಣ. ಪುಷ್ಪ: ಆಷಾಢ.

**ಉಪಯೋಗ:** ಔಷ: ಬೇರು ಕುಷ್ಠಕ್ಕೂ ಬೀಗಿಗೂ, ಬೀಜ ಮಲಶೋಧನೆ ಮಾಡುವದಕ್ಕೂ ಉಪಯೋಗ. ಬೇರಿನ ಕಷಾಯ ಜ್ವರದವರಿಗೆ ತಂಪಾದ ಪಾನ. ಸಾಧಾ: ಒಳ್ಳೇ ನಾರು ಉಂಟು.

**Abutilon indicum,** *G. Don.*—Sida indica, *Lin.*—(Order Malvaceæ.)

*Tam.* Paṇiyāratutti. *Tel.* Tutturubeṇḍa, nūgubeṇda, muttavačiribeṇḍa. *Can.* Kisangi, hetutti, tuttī, turubī-giḍa. *Tu.* Urki. *Mal.* Kātūram, veḷḷūram.

### 157. ಕೀಳುಹರುವೆ, ಕಿರೆಸೊಪ್ಪು ಗಿಡ.

ತ. ಚಾನಿನಿ.

**ಹುಟ್ಟು:** ಮೈದಾನ ಕಾಡುಗಳು; ಕೊಯಂಬತ್ತೂರಿನಲ್ಲಿ ಬೆಳಿಸುತ್ತಾರೆ.

**ಉಪಯೋಗ:** ಸಾಧಾ: ಪಲ್ಯ. ಬೀಜಗಳಿಂದ ಹಿಟ್ಟು ಮಾಡಬಹುದು.

**Amarantus paniculatus,** *Lin.*—Amarantus frumentaceus, *Roxb.*—(Order Amarantaceæ.)

*Tam.* Čānini. *Can.* Kīḷuharuve, kiresoppu-giḍa.

### 158. ಕುಂಕುಮ (Saffron).

ತ. ಕುಂಕುಮಂ. ತೆ. ಕುಂಕುಮಮು. ಮ. ಕುಂಕುಮಂ. ಕೊಂ. ಕುಂಕುಮಕೇಸರಿ. ಸಂ. ಭವರಕ್ತ, ಅಗ್ನಿಶಿಖಾ.

**ಉಪಯೋಗ:** ಔಷ: ಸೂತಿಕ ಕ್ರಮಪಡಿಸುವದಕ್ಕೂ ವಾಂತಿ ನಿಲ್ಲಿಸುವದಕ್ಕೂ ಶ್ವಾಸಕಟ್ಟಿಗೂ ಮೊಲ್ಲೋಗರಕ್ಕೂ ಶಳವುವಾತಕ್ಕೂ ಕೆಮ್ಮಿಗೂ ಜೀರ್ಣಮಂದತ್ವಕ್ಕೂ ಉಪಯೋಗ. ಉತ್ತೇಜಕ ಗುಣವುಳ್ಳದ್ದು; ಆದರೆ ಮಿತಿ ವಿಾರಿ ತಕ್ಕೊಂಡರೆ, ನರಗಳಿಗೆ ಬಾಧಕವಾದೀತು. ಸಾಧಾ: ಸಂಬಾರಜೀನಸು. ಹೂ ಬಣ್ಣಕ್ಕೆ ಆಗುತ್ತದೆ.

**Crocus sativus**, *Lin.*—C. hibernus, *Frivald.*—C. autumnalis, *Smith.*—C. officinalis, *Pers.*—(Order Irideæ.)

*Tam.* Kuṅkumam. *Tel.* Kuṅkumamu. *Can.* Kuṅkuma. *Mal.* Kuṅkumam. *Kon.* Kuṅkumakēsari. *San.* Bhavarakta, agniśikhā.

## 159. ಕುಂಬಳಕಾಯಿ, ಸಕ್ಕರೆಕುಂಬಳ, ಚೀನಿಕಾಯಿ ಬಳ್ಳಿ (Squash Gourd or Common Gourd).

ತ. ಪೂಶಣಿ, ಅಣಿಮುಲೈ, ಕುಂಬಳಮ್. ತೆ. ಕರ್ಬೂಜದೋಸ, ಗುಮ್ಮಡಿಕಾಯಿ. ತು. ಶೀಪೆ ಕುಂಬುಡ. ಮ. ಚಕ್ಕರಕುಂಪಳಞ. ಕೊಂ. ದುದ್ದಿ. ಸಂ. ಪುಣ್ಯಲತಾ, ದಧಿಫಲ.

ಹುಟ್ಟು: ತೋಟಗಳು. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಫಲದ ತೊಟ್ಟು ತೇದು ಚೇಳು ಕಚ್ಚಿದ ಗಾಯಕ್ಕೆ ಹಚ್ಚುವದುಂಟು. ಸಾಧಾ: ಒಳ್ಳೇ ಪಲ್ಯ. ಬೀಜ ತಿನ್ನಬಹುದು.

**Cucurbita maxima**, *Duches.*—(Order Cucurbitaceæ.)

*Tam.* Pūšaṇi, aṇimulai, kumbaḷam. *Tel.* Karbūjadōsa, gummaḍikāyi. *Can.* Kumbaḷakāyi, sakkare-kumbaḷa, čīnikāyi-baḷḷi. *Tu.* Šīpe-kumbuḍa. *Mal.* Čakkara-kumpaḷaṅa. *Kon.* Duddi. *San.* Puṇyalatā, dadhiphala.

## 160. ಕುಪ್ಪಿ ಗಿಡ (Indian Acalypha).

ತ. ಕುಪ್ಪೈಮೇನಿ, ಕುಪ್ಪಿವೇಣಿ, ತಿರುವೇನಿ, ಕಡುಕನ್. ತೆ. ಕುಪ್ಪಿಚೆಟ್ಟು, ಕುಪ್ಪಂಟಿಚೆಟ್ಟು, ಮುರುಕೊಂಡಚೆಟ್ಟು, ಹರಿತಮಂಜರೀ. ತು. ಬಂಗಾರಕಾಯಿ. ಮ. ಕುಪ್ಪಮೇನಿ. ಕೊಂ. ಕುಂಕ್ಮಿಫಲ.

ಹುಟ್ಟು: ದಕ್ಷಿಣ ಹಿಂದುಸ್ಥಾನ, ಬಂಗಾಳ. ಪುಷ್ಪ: ಚೈತ್ರದಿಂದ ಜ್ಯೇಷ್ಠದ ವರೆಗೆ.

ಉಪಯೋಗ: ಔಷ: ಬಿಸಿ ನೀರಲ್ಲಿ ತೇದ ಬೇರೂ ಎಲೆಗಳ ಕಷಾಯವೂ ವಿರೇಚನ ಮಾಡುತ್ತವೆ. ಎಲೆಗಳಿಗೆ ಉಪ್ಪು ಇಲ್ಲವೆ ಸುಣ್ಣ ಸೇರಿಸಿ ಉಜ್ಜಿದರೆ, ತುರಿಕಜ್ಜಿ ಮತ್ತು ನಂಜು ಗುಣ. ಕಷಾಯಕ್ಕೆ ಎಣ್ಣೆ ಕೂಡಿಸಿ ಕುದಿಸಿದರೆ, ಸೆಳತಕ್ಕೂ ಶೋಣಿತ ವಾತಕ್ಕೂ ಆಗುತ್ತದೆ. ಎಲೆಗಳ ಕಷಾಯ ಕಿವಿನೋವಿಗೂ, ಬೆಳ್ಳುಳ್ಳಿಯ ರಸದ ಸಮೇತ ಮಕ್ಕಳ ಕ್ರಿಮಿರೋಗಕ್ಕೂ ಕೊಡುತ್ತಾರೆ. ತುರುಕರು ಇದರ ಸಮೂಲವನ್ನು ಕ್ಷಯರೋಗದಲ್ಲಿ ಉಪಯೋಗಿಸುತ್ತಾರೆ. ಎಲೆಗಳ ರಸವು ಮಕ್ಕಳಿಗೆ ವಾಂತಿ ಹುಟ್ಟಿಸಲಿಕ್ಕೆ ಒಳ್ಳೇದು; ಅದು ಶ್ಲೇಷ್ಮ ಹೊರಡಿಸುತ್ತದೆ. ವಿಷಜಂತುಗಳು ಕಚ್ಚಿದ್ದಕ್ಕೆ ಎಲೆಗಳ ಒತ್ತಡವನ್ನು ಕಟ್ಟಿದರೆ, ನೋವು ಶಮನ.

**Acalypha indica**, *Lin.*—A. spicata, *Forsk.*—(Order Euphorbiaceæ.)

*Tam.* Kupaimēni, kuppivēṇi, tiruvēni, kaḍukan. *Tel.* Kuppičeṭṭu, kuppaṇṭi-čeṭṭu, murukoṇḍačeṭṭu, haritamañjarī. *Can.* Kuppi-giḍa. *Tu.* Baṅgārakāyi. *Mal.* Kuppamēni. *Kon.* Kuṅkmiphala.

### 161. ಕುಶದರ್ಭ, ದರ್ಭ, ದರ್ಬೆ ಹುಲ್ಲು (Sacrificial Grass).

ತು. ದರ್ಭೆಪಂತಿ. ಮ. ಆಟ್ಟುದರ್ಭ. ಕೊಂ. ದರ್ಭ್ಯಾತಣ. ಸಂ. ಕುಶ, ಕುಥ, ಪವಿತ್ರ, ದರ್ಭಾ.

ಉಪಯೋಗ: ಔಷ: ಬೇರಿನ ಕಷಾಯ ನಳವಾಯುವಿಗೂ, ಹುರಿದ ಹುಲ್ಲನ್ನು ಎಣ್ಣೆಯಲ್ಲಿ ಕಜ್ಜಿಗೂ ಉಪಯೋಗಿಸುತ್ತಾರೆ. ಸಾಧಾ: ಮಾಡು ಹೊಚ್ಚುವದಕ್ಕೆ ಪ್ರಯೋಗಿಸಬಹುದು; ಚಾಪೆ ಮಾಡುತ್ತಾರೆ; ಬೆಳೆದ ಕಡ್ಡಿ ಬರಿಯಲಿಕ್ಕೆ ಉಪಯೋಗ. ಹುಲ್ಲು ಪಶುಗಳಿಗೆ ಆಹಾರ.

**Eragrostis cynosuroïdes,** *Beauv.*—Poa cynosuroïdes, *Lin.*—(Order Gramineæ.)

*Can.* Kušadarbha, darbha, darbe-hullu. *Tu.* Darbhepanti. *Mal.* Āṭṭu-darbha. *Kon.* Darbhyātaṇa. *San.* Kuša, kutha, pavitra, darbhā.

### 162. ಕುಸುಂಬೆ, ಕುಶಿಬಿ ಗಿಡ (Bastard Saffron or Safflower).

ತ. ಚೆಂದುರುಕ್ಕು, ಮತ್ತಿರುಕ್ಕಂಚೆಡಿ. ತೆ. ಕುಸುಂಬಾ. ಮ. ಕುಯುಂಪಪೂ, ಚೆಂದೂರಕಮ್. ಹಿಂ. ಕುಸುಮ್.

ಹುಟ್ಟು: ತೋಟಗಳು. ಪುಷ್ಪ: ಕಾರ್ತಿಕ, ಮಾರ್ಗಶಿರ.

ಉಪಯೋಗ: ಔಷ: ಒಣಗಿದ ಹೂ ಅರಸಿನಮುಂಡಕ್ಕಾಗುತ್ತದೆ. ಎಣ್ಣೆ ಶ್ರೋಣಿತವಾತ ಪಕ್ಷವಾತದ ರೋಗಿಗಳಿಗೆ ಒಳ್ಳೇದು. ಬೀಜ ಮಲಭೇದಿ; ಬೀಗಗೂ ಕೊಡುತ್ತಾರೆ. ಸಾಧಾ: ಬೀಜದಿಂದ ಎಣ್ಣೆ ತೆಗಿಯುತ್ತಾರೆ. ಎಲೆಗಳು ಪಲ್ಯ. ಹೂ ಬಣ್ಣಕ್ಕೆ ಬಹು ಒಳ್ಳೇದು.

**Carthamus tinctorius,** *Lin.*—(Order Compositæ.)

*Tam.* Čendurukku, maṯṯirukkańčeḍi. *Tel.* Kusumbā. *Can.* Kusumbe, kušibi-giḍa. *Mal.* Kuyumpapū, čendūrakam. *Hin.* Kusum.

### 163. ಕೂವೆ ಗಿಡ (East-Indian Arrowroot).

ತ. ಕೂಕೈ. ತು. ಕೂವೆ. ಮ. ಕೂವ. ಕೊಂ. ಕೂವ್ಯಾಝಾಡ.

ಹುಟ್ಟು: ನಟ್ಟು ಬೆಳಿಸುವದು. ಪುಷ್ಪ: ಜ್ಯೇಷ್ಠ.

ಉಪಯೋಗ: ಸಾಧಾ: ಗಡ್ಡೆಯಿಂದ ಹಿಟ್ಟು ಮಾಡುತ್ತಾರೆ. ಅದು ಒಳ್ಳೇ ಆಹಾರ; ವಿಶೇಷವಾಗಿ ರೋಗಿಗಳಿಗೆ ಪಥ್ಯಕರ.

**Curcuma angustifolia,** *Roxb.*—C. longa, *Wall.*—(Order Scitamineæ.)

*Tam.* Kūkai. *Can.* Kūve-giḍa. *Tu.* Kūve. *Mal.* Kūva. *Kon.* Kūvyā-jhāḍa.

## 164. ಕೆಂಪು ಕಣಗಿನ, ಗಣಿಗಿಲತೋರ, ಹೊಳೆಕಾವ ಮರ.

ತ. ರದಮಿ. ತೆ. ಕನಪುಚೆಟ್ಟು, ಕಣಿಗಿ. ಮ. ಚೆರಿಯಸಂಸ್ಕರವಡಿ. ಮಹಾ. ಮಾನ್‌ಕುಂಬ. ಹಿಂ. ಸಮಂದರ್‌ಫಲ್.

ಹುಟ್ಟು: ತಿರುಪಂಕೋಡು, ಬಂಗಾಳ. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ಚಿಕ್ಕೆಗೆ ಸುಮಾರು 'ಬಾರ್ಕಿನ' ಗುಣ ಉಂಟು; ಮಲ ಶೋಧನೆ ಸಹ ಮಾಡುತ್ತದೆ. ಕಂಪು ಗುಣ. ಬೀಜ ಉದರಶೂಲೆಗೂ ಬಾಣಂತಿಗೂ ಉಪಯೋಗ. ಸಾಧಾ: ಹಸಿ ಎಲೆಗಳು ಪಲ್ಯ. ಮರ ಕೆಲಸಕ್ಕೆ ಒಳ್ಳೇದು.

**Barringtonia acutangula,** *Gaertn.*—Stravadium rubrum, *Wall.*—St. acutangulum, *Miers.*—Eugenia acut., *Lin.*—(Order Myrtaceæ.)

*Tam.* Radami. *Tel.* Kanapuchettu, kaṇigi. *Can.* Kempu-kaṇagina, gaṇigilatōra, hoḷe-kauva-mara. *Mal.* Čariyasaṃskaravaḍi. *Mah.* Mānkumba. *Hin.* Samandarphal.

## 165. ಕೆಂಪು ಕುಂಟಾಲ ಗಿಡ.

ತು. ಕುಂಟಾಲಪರ್‌ಂಡ್. ಮ. ನೇರಲ್. ಕೊಂ. ಭೆಳ್ಸ.

ಉಪಯೋಗ: ಔಷ: ಬೇರು ಮತ್ತು ಎಲೆಗಳು ರಕ್ತಶುದ್ಧಿ ಮಾಡುತ್ತವೆ. ಎಲೆಗಳ ಕಷಾಯ ಎದೆಯುರಿಗೂ ವ್ರಣಗಳಿಗೂ, ಎಲೆ ಹೂ ಕಾಯಿಗಳ ಕಷಾಯ ವಸಡು ಘಟ್ಟಿ ಮಾಡುವದಕ್ಕೂ ಉಪಯೋಗ. ಬೇರು ಮತ್ತು ಚಿಕ್ಕೆ ಪುಡಿ ಮಾಡಿ ಎಣ್ಣೆಯಲ್ಲಿ ಸಂಜೆಗೆ ಲೇಪಿಸುತ್ತಾರೆ. ಬೇರು ಮತ್ತು ಜೀರಿಗೆ ಹಾಕಿ ಬೇಯಿಸಿದ ಹಾಲು ವಾಂತಿ ನಿಲ್ಲಿಸುತ್ತದಂತೆ. ಸಾಧಾ: ಮಳೆಗಾಲದಲ್ಲಿ ಇದಕ್ಕೆ ಆಗುವ ಹಣ್ಣುಗಳನ್ನು ಮಕ್ಕಳು ತಿನ್ನುವರು; ಹೆಚ್ಚು ತಿಂದರೆ, ಶೀತವುಂಟಾಗಿ ಜ್ವರ ಬರುವದು.

**Eugenia caryophyllæa,** *Wight.*—E. corymbosa, *Lam.*—Syzigium car., *Gaertn.*—(Order Myrtaceæ.)

*Can.* Kempu-kuṇṭāla-giḍa. *Tu.* Kuṇṭāla-paruṇḍu. *Mal.* Ṅēral. *Kon.* Bheḷsa.

## 166. ಕೆಂಪು ಕೂವೆ, ದೊಡ್ಡ ಕೂವೆ.

ಹುಟ್ಟು: ಹೆಚ್ಚಾಗಿ ಉತ್ತರ ದಿಕ್ಕಿನಲ್ಲಿ. ಪುಷ್ಪ: ಆಶ್ವೀಜದಿಂದ ಕಾರ್ತಿಕದ ವರೆಗೆ.

ಉಪಯೋಗ: ಸಾಧಾ: ಗಡ್ಡೆಯಿಂದ ಹಿಟ್ಟು ಮಾಡುವದುಂಟು.

**Curcuma leucorrhiza,** *Roxb.*—(Order Scitamineæ.)

*Can.* Kempu-kūve, doḍḍa-kūve.

## 167. ಕೆಂಪು ಗೊಂಡೆ, ಅಡಿಕೇಹೂ, ರುದ್ರಾಕ್ಷಿಹೂ (Globe Amaranth).

ಹುಟ್ಟು: ತೋಟಗಳಲ್ಲಿ ನಟ್ಟು ಬೆಳಸುತ್ತಾರೆ.

ಉಪಯೋಗ: ಅಲಂಕಾರದ ಹೂ.

**Gomphrena globosa,** *Lin.*—(Order Amarantaceæ.)

*Can.* Kempu-goṇḍe, aḍikē-hū, rudrākshi-hū.

## 168. ಕೆಂಪು ಜಂಬುನೇರಲು.

ತ. ಜಂಬುನಾವಲ್. ತು. ಜಂಬುನೇರೊಳು. ಮ. ನಾಟ್ಟುಜಾಂಬಲ್. ಕೊ. ಜಾಂಬ. ಸಂ. ಜಂಬು.

ಹುಟ್ಟು: ತೋಟಗಳು. ಪುಷ್ಪ: ಆಶ್ವೀಜ, ಕಾರ್ತಿಕ.

ಉಪಯೋಗ: ಸಾಧಾ: ಹಣ್ಣು ತಿನ್ನುತ್ತಾರೆ. ಚೆಕ್ಕೆಗೆ ಒಗರು ಗುಣ.

**Eugenia malaccensis,** *Lin.*—Eugenia macrophylla, *Lam.*—Jambosa mal., *Dec.*—J. domestica, *Dec.*—J. purpurascens, *Dec.*—Myrtus macrophylla, *Spr.*—M. malaccensis, *Spr.*—(Order Myrtaceæ.)

*Tam.* Jambunāval. *Can.* Kempu-jambunēralu. *Tu.* Jambunēroḷu. *Mal.* Nāṭṭujāmbaḷu. *Kon.* Jāmba. *San.* Jambu.

## 169. ಕೆಂಪು ನೆಲಗುಂಬಳ, ನೀರುಗಣಗಲು ಗಿಡ.

ಮ. ಮುತಲಕ್ಕಂಟ. ಕೊಂ. ಭುಂಯ್ಕುವಾಳೆ.

ಉಪಯೋಗ: ಔಷ: ಗಡ್ಡೆಯಿಂದ ಹಿಟ್ಟು ಮಾಡಬಹುದು. ಅದು ಮೂಲವ್ಯಾಧಿಗೂ ಅರಸಿನಮುಂಡಿಗೂ ಅಶಕ್ತಿಗೂ ಒಳ್ಳೇದು. ಕ್ಷಯರೋಗಿಗಳಿಗೆ ಈ ಗಡ್ಡೆ ಹಾಕಿ ಕಾಸಿದ ಹಾಲು ಒಳ್ಳೇ ಪಥ್ಯ.

**Polygonum glabrum,** *Willd.*—(Order Polygonaceæ.)

*Can.* Kempu-nelagumbaḷa, nīru-gaṇagalu-giḍa. *Mal.* Mutalakkaṇṭa. *Kon.* Bhuyṅkuvāḷe.

## 170. ಕೆಂಪು ಮಂದಾರ, ಶೆಯಾಡ್ಲ, ಕೆಂಪು ಕಂಚಿವಾಳದ ಮರ (Purple Bauhinia).

ತ. ಶೆಮ್ಮಂದಾರೈ, ಶೆವಪ್ಪುಮಂದಾರೈ. ತೆ. ದೇವಕಾಂಚನಮು. ಮ. ಚುವನ್ನಮಂದಾರಮ್, ಉಣ್ಣು, ಕೋವಿದಾರಮ್. ಕೊಂ. ತಾಂಬಡೆಮಂದಾರ. ಮಹಾ. ಕಂಚನ. ಸಂ. ಕುದ್ದಾಲ, ತಾಮ್ರಪುಷ್ಪಿ.

ಹುಟ್ಟು: ದಕ್ಷಿಣ ತೀರಗಳು. ಪುಷ್ಪ: ಮಾಘ, ಫಾಲ್ಗುಣ.

ಉಪಯೋಗ: ಔಷ: ಚೆಕ್ಕೆಗೆ ಒಗರು ಗುಣ. ಅದು ಜ್ವರದಿಂದ ಬಲಹೀನರಾದವರಿಗಾಗುತ್ತದೆ. ಬೇರಿನ ಕಷಾಯ ಕೊಬ್ಬಿದವರಿಗೆ ಒಳ್ಳೇದು. ಒಣಗಿದ ಮೊಗ್ಗೆಗಳು ಅತಿಸಾರಕ್ಕೂ ಕ್ರಿಮಿರೋಗಕ್ಕೂ ಉಪಯೋಗ.

**Bauhinia variegata,** *Lin.*—B. purpurea, *Wall.*—(Order Leguminosæ.)

*Tam.* Šemmandārai,ševappumandārai. *Tel.* Dēvakāṅčanamu. *Can.* Kempu-mandāra, seyāḍla, kempu-kaṅčivāḷada-mara. *Mal.* Čuvannamandāram, uṅṅu, kōvidāram. *Kon.* Tāmbaḍe-mandāra. *Mah.* Kaṅchana. *San.* Kuddāla, tāmra-pushpi.

## 171. ಕೆಂಪು ಹುಲೀ, ಸೂಲೀ ಗಿಡ.

ತ. ಪವಳಪ್ಪೂಲಾ. ಮ. ಪಾವಲಪೂಲ.

ಹುಟ್ಟು: ಹೆಚ್ಚಾಗಿ ಚೋಳಮಂಡಲತೀರ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಎಲೆಗಳಿಗೆ ಹರಳೆಣ್ಣೆ ಲೇಪಿಸಿ ಬಿಸಿ ಮಾಡಿ, ಕುರುಗಳಿಗೆ ಕಟ್ಟುತ್ತಾರೆ. ಗಂಟ್ಲಿನೊಳಗಣ ಬಾವಿಗೆ ಎಲೆಗಳನ್ನು ಒಣಗಿಸಿ ಸೇದುತ್ತಾರೆ. ಬೇರಿನ ಸಿಪ್ಪೆ, ಹಿಪ್ಪಲಿ, ಶುಂಠಿ ಇವುಗಳಿಂದ ಪಾನಕ ಮಾಡುತ್ತಾರೆ.

**Breynia rhamnoides,** *Muell.*—Phyllanthus rhamnoides, *Willd.*—Phyllanthus vitis idæa, *Roxb.*—Melanthesa rh., *Wight.*—(Order Euphorbiaceæ.)

*Tam.* Pavaḷappūlā. *Can.* Kempu-hulī, sūlī-giḍa. *Mal.* Pāvalapūla.

## 172. ಕೇದಗೆ, ಮುಂದಿಗೆ, ಕೇತಕಿ, ಕೇದಿಗೆ (Screw Pine).

ತ. ತಾಳಂಚೆಡಿ, ಕೇದಗೈ, ಮುಂಡಗಮ್, ಮುಶಲಿ. ತೆ. ಗಾಜಂಗಿ, ಕೇತಕಿ, ಮೊಗಿಲಿ. ತು. ಕೇದಯಿ, ಮುಂಡೇಯಿ. ಮ. ಕೈತ, ಕೇತಕಿ, ಪಳ್ಳಿಯಂಬು. ಕೊಂ. ಕೇದಗಿ, ಬೊಂಡಯಿ. ಸಂ. ಕೇತಕೀ.

ಹುಟ್ಟು: ಹಳ್ಳಗಳ ಬದಿ. ಪುಷ್ಪ: ಜ್ಯೇಷ್ಠದಿಂದ ಭಾದ್ರಪದದ ವರೆಗೆ.

ಉಪಯೋಗ: ಔಷ: ನರಹಿಡಿತಕ್ಕೂ ವಾತರೋಗಕ್ಕೂ ಅರಸಿನಮುಂಡಿಗೂ ಮೂತ್ರಸಿಕ್ಕಿಗೂ ಆಗುತ್ತದೆ. ಸಾಧಾ: ಕೇದಗೆ ಪರಿಮಳ; ಅದರಿಂದ ಎಣ್ಣೆ ಸಹ ಮಾಡುತ್ತಾರೆ. ಎಲೆಗಳಿಂದ ಚಾಪೆ ಮಾಡುವದಲ್ಲದೆ ನಾರು ತೆಗೆಯುತ್ತಾರೆ. ಸುಣ್ಣದ ಗಾರೆ ಮಾಡುವಾಗ್ಯೆ ಅದರಲ್ಲಿ ಬೇರಿನ ನೀರು ಸೇರಿಸಬಹುದು.

**Pandanus fascicularis,** *Lam.*—P. odoratissimus, *Lin. fil.*—(Order Pandaneæ.)

*Tam.* Tāḷañčeḍi, kēdagai, muṇḍagam, mušali. *Tel.* Gūjaṅgi, kētaki, mogili. *Can.* Kēdage, mundige, kētaki, kēdige. *Tu.* Kēdayi, muṇḍēyi. *Mal.* Kaita, kētaki, paḷḷiyambu. *Kon.* Kēdagi, bonḍayi. *San.* Kētakī.

## 173. ಕೆನ್ನೈದಿಲೆ, ಚೆನ್ನೈದಿಲು, ಕೋಳಿ, ಕೆಂದಾವರೆ
## (Red-flowered Water Lily or Egyptian Lotus).

ತ. ಶೆವ್ವಲ್ಲಿ, ಅರಕ್ಕಾಂಬಲ್. ತೆ. ಎರ್ರಕಲುವ, ಚೆಂಗಲುವ, ಚೆಂಡೊವ. ತು. ಕೆಂಪಲ್ಲಿ. ಮ. ರಕ್ತೋತ್ಪಲಮ್, ಅರಕಾಂಬಲ್. ಕೊಂ. ತಾಂಬಡೆಸಾಳಕ. ಹಿಂ. ರಕ್ತಚಂದನ್. ಸಂ. ರಕ್ತಾಸಿಲ, ವರೋತ್ಪಲ, ಕಂದೋಷ್ಪಮ್.

ಹುಟ್ಟು: ಕೆರೆಗಳು. ಪುಷ್ಪ: ಫಾಲ್ಗುಣದಿಂದ ಶ್ರಾವಣದ ವರೆಗೆ.

ಉಪಯೋಗ: ಔಷ: ಗಡ್ಡೆ ಬೇಯಿಸಿ ತಿಂದರೆ, ಮೂಲವ್ಯಾಧಿಗೆ ಒಳ್ಳೇದು. ಸಾಧಾ: ಬೀಜದಿಂದ ಹಿಟ್ಟು ಮಾಡಬಹುದು; ಗಡ್ಡೆ ಸಹ ತಿನ್ನುತ್ತಾರೆ.

**Nymphæa Lotus,** *Lin.*—N. rubra, *Roxb.*—N. devoniensis, *Hook.*—N. edulis, *Dec.*—(Order Nymphæaceæ.)

*Tam.* Ševvalli, arakkāmbal. *Tel.* Errakaluva, čeṅgaluva, čandova. *Can.* Kennaidile, čennaidilu, kōḷe, kendāvare. *Tu.* Kempalli. *Mal.* Raktōtpalam, arakāmbal. *Kon.* Tāmbaḍe-sāḷaka. *Hin.* Raktačandan. *San.* Raktānila, varōtpala, kandōshṭam.

## 174. ಕೆನ್ನೆಗ್ಗಿಲು (ಚೆನ್ನೆ) ಗಿಡ.

ತ. ಆದಂಬೇದಿ, ಶೆಪ್ಪುನೆರಿಜಿಲ್, ಶೆಪ್ಪುನೆರುಂಜಿ. ತೆ. ಚೆರಗಡ್ಡಮು. ಮ. ಚೆರುಪುಳ್ಳಟಿ. ಸಂ. ವಸುಕಾ, ಸುವರ್ಚ್ಚಲಾ, ಗೋಪಾಲ.

ಹುಟ್ಟು: ಮಲೆ ಸೀಮೆಗಳು. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ರಸಕ್ಕೆ ಬದಲಾವಣೆ ಗುಣ; ಅದು ಚುಂಡಿಗೆ ಉಪಯೋಗ. ಸಹಮೂಲದ ಕಲ್ಕ ಮೂತ್ರಭೇದಿ; ಜ್ವರಕ್ಕೂ ಕೆಮ್ಮಿಗೂ ಕೊಡುತ್ತಾರೆ.

**Indigofera enneaphylla,** *Lin.*—I. cæspitosa, *Wight.*—Hedysarum prostratum, *Burm.*—(Order Leguminosæ.)

*Tam.* Ādambēdi, šeppunerijil, šeppunerunji. *Tel.* Čeragaḍḍamu. *Can.* Kenneggilu (čenne)-giḍa. *Mal.* Čerupuḷḷaṭe. *San.* Vasukā, suvarččalā, gōpāla.

## 175. ಕೇಪಲ, ಕೆವಲ, ಕಿಸ್ಗಾರ, ಮಾಲೇಹೂ ಗಿಡ (Scarlet Ixora).

ತ. ಚೆತ್ತಿ, ವೆಡ್ಡಿ. ತು. ಕೇಪುಲದೈ. ಮ. ಚೆತ್ತಿ, ಚೆಕ್ಕಿ, ತೆಚ್ಚಿ. ಕೊಂ. ಪಟ್ಕಳಿ. ಸಂ. ಪಾತಲೀ.

ಹುಟ್ಟು: ಸಾಧಾರಣ. ಪುಷ್ಪ: ಇಡೀ ವರುಷ.

ಉಪಯೋಗ: ಔಷ: ಅದರ ಬೇರು ನೀರಿನ ಸಂಗಡ ನೆತ್ತರುಉಗುಳಿಗೂ, ಹಾಲಿನೊಡನೆ ಉರಿಳೀಕಾಯಿಗಳ (ಮೂತ್ರಗಡ್ಡೇ) ರೋಗಕ್ಕೂ ಕೊಡುತ್ತಾರೆ. ಬೇರನ್ನು ತೇದು ಸಂಜು ಬೊಕ್ಕೆಗಳನ್ನು ಒಣಗಿಸುವದಕ್ಕೆ ಲೇಪಿಸುವರು. ಸಾಧಾ: ಹಣ್ಣು ತಿನ್ನಬಹುದು.

**Ixora coccinea,** *Lin.*—I. grandiflora, *Dec.*—I. obovata, *Heyne.*—I. propinqua, *R. Br.*—(Order Rubiaceæ.)

*Tam.* Četti, veḍḍi. *Can.* Kēpala, kevala, kisgāra, mālē-hū-giḍa. *Tu.* Kēpuladai. *Mal.* Četti, čekki, tečči. *Kon.* Paṭkaḷi. *San.* Pātalī.

## 176. ಕೇಸವೆ, ಕೆಸು, ಸಾವೀಗಡ್ಡೆ (Taro).

ತ. ಶೇಪ್ಪೈಕಿಳಙ್ಗು. ತು. ತೇವು. ಮ. ಚೇಂಪ್. ಕೊಂ. ವೇಂಟಿ.

ಹುಟ್ಟು: ನಟ್ಟು ಬೆಳಿಸುತ್ತಾರೆ. ಪುಷ್ಪ: ಭಾದ್ರಪದದಿಂದ ಕಾರ್ತಿಕದ ವರೆಗೆ.

ಉಪಯೋಗ: ಔಷ: ಎಲೆದಂಟಿನ ರಸವು ಘಾಯಗಳ ರಕ್ತ ನಿಲ್ಲಿಸಲಿಕ್ಕೆ ಬಹು ಒಳ್ಳೇದು. ಸಾಧಾ: ಎಲೇಗಡ್ಡೆಗಳು ಪಲ್ಯ. ಗಡ್ಡೆ ಚನ್ನಾಗಿ ಬೇಯಿಸಿದರೆ, ತಿನ್ನ ಬಹುದು.

**Colocasia antiquorum,** *Schott.*—Arum colocasia, *Lin.*—Caladium esculentum.—Alocasia antiquorum, *Sch.*—(Order Aroideæ.)

*Tam.* Šīmaikiḷaṅgu. *Can.* Kēsave, kesu, sāvī-gaḍḍe. *Tu.* Tēvu. *Mal.* Čempụ. *Kon.* Vēṇti.

### 177. ಕೇಳಹೂ, ಹೂದಿಂಗಣ (Indian Shot).

ತ. ಪೂವಾಳೈ. ತೆ. ಕೃಷ್ಣತಾಮರ. ಮ. ಕಾಟುವಾರ. ಕೊಂ. ಕೇಳಾಫೂಲ.

ಹುಟ್ಟು: ತೋಟಗಳು. ಪುಷ್ಪ: ಇಡೀ ವರುಷ.

ಉಪಯೋಗ: ಔಷ: ಬೀಜಗಳ ರಸ ಬಿಸಿ ಮಾಡಿ ಕಿವಿನೋವಿಗೆ ಪ್ರಯೋಗಿಸುತ್ತಾರೆ. ವಿಷ ಮೆದ್ದ ದನಕ್ಕೆ ಗಡ್ಡೆಯನ್ನು ಗಂಜಿನೀರಲ್ಲಿ ಬೇಯಿಸಿ ಮೆಣಸು ಹಾಕಿ ಕೊಡುವರು. ಸಾಧಾ: ಗಡ್ಡೆ ತಿನ್ನಬಹುದು. ಬೀಜದಿಂದ ಕೆಂಪು ಬಣ್ಣವಾಗುತ್ತದೆ.

**Canna indica,** *Lin.*—(Order Scitamineæ.)

*Tam.* Pūvāḷai. *Tel.* Krishṇatāmara. *Can.* Kēḷahū, hūdiṅgaṇa. *Mal.* Kāṭuvāra. *Kon.* Kēḷāphūla.

### 178. ಕೊಟ್ಟೆ, ಕೊಡಚಿ, ಪಾರ್ಪುಲಿ ಗಿಡ.

ತ. ಕೊಟ್ಟೈಯಿಲಂದೈ, ಕೊಂಡೈ. ತು. ಕೊಟ್ಟೆಮುಳ್ಳು. ಮ. ಚೋಟ್ಟುಕೊಟ್ಟ. ಕೊಂ. ಗಾಳಾಯಿ (ಕಾಂಟ್ಯಾ) ಝಾಡ.

ಹುಟ್ಟು: ಸಾಧಾರಣ. ಪುಷ್ಪ: ಶ್ರಾವಣದಿಂದ ಆಶ್ವೀಜದ ವರೆಗೆ.

ಉಪಯೋಗ: ಸಾಧಾ: ಹಣ್ಣು ತಿನ್ನುತ್ತಾರೆ. ಅದರಿಂದ ಚರ್ಮಕ್ಕೆ ಕಪ್ಪು ಬಣ್ಣ ಕೊಡುವರು. ಮರ ಘಟ್ಟಿಯಾಗಿದ್ದು ಕೆಲಸಕ್ಕೆ ಬರುತ್ತದೆ.

**Zizyphus xylopyrus,** *Willd.*—Z. Caracutta, *Roxb.*—Z. elliptica, *Roxb.*—Z. orbicularis, *Schult.*—Z. rotundifolia, *Roth.*—Rhamnus xylopyrus, *Retz.*—(Order Rhamneæ.)

*Tam.* Koṭṭaiyilandai, koṇḍai. *Can.* Koṭṭa, koḍači, pārpuli-giḍa. *Tu.* Koṭṭemuḷḷu. *Mal.* Čoṭṭụkoṭṭa. *Kon.* Gāḷāyi (kāṇṭyā)-jhāḍa.

### 179. ಕೊಡಸಿಗ, ಬೊದದರಗ, ಕಾಡಗರ್ಗರಿ ಗಿಡ.

ತೆ. ಕಡಿಸಚೆಟ್ಟು. ಮ. ಕುಲಪ್ಪಾಲ. ಸಂ. ನಂದಿವೃಕ್ಷಮ್, ಇಂದ್ರಯವ, ಕೌಟಜಮ್.

ಹುಟ್ಟು: ಕೊಂಕಣ, ಓಡ್ರದೇಶ. ಪುಷ್ಪ: ಫಾಲ್ಗುಣದಿಂದ ವೈಶಾಖದ ವರೆಗೆ.

ಉಪಯೋಗ: ಔಷ: ಕ್ರಿಮಿರೋಗಕ್ಕೂ ಗ್ರಹಣಿಗೂ ಸನ್ನಿರೋಗಕ್ಕೂ ಹೊಟ್ಟೆ ನೋವಿಗೂ ಮೂಲವ್ಯಾಧಿಗೂ ಅತಿಸಾರಕ್ಕೂ ಆಗುತ್ತದೆ. ಅದರ ಚೆಕ್ಕೆ, ಬೇರು ಮತ್ತು ಕಾಯಿ ವಿಷವಾದ್ದರಿಂದ ಈ ಔಷಧವನ್ನು ಪ್ರಯೋಗಿಸುವಲ್ಲಿ ಬಹು ಜಾಗ್ರತೆ ಯಾಗಿರಬೇಕು.

**Cleistanthus collinus,** *Benth.*—Bridelia collina, *Hook.*—Cluytia collina, *Roxb.*—(Order Euphorbiaceæ.)

*Tel.* Kaḍisečeṭṭu. *Can.* Koḍasiga, bodadaraga, kāḍagargari-giḍa. *Mal.* Nīlappāla. *San.* Nandivṛiksham, indrayava, kauḍijam.

## 180. ಕೊಡಸಿಗೆ ಗಿಡ (Oval-leaved Rosebay).

ತ. ವೇಪ್ಪಾಲೈ. ತೆ. ಕೊಡಿಶಚೆಟ್ಟು, ಕುಟಜಮು, ಮನುಪಾಲ. ತು. ಕೊಡಂಜಿ. ಮ. ವೆಣ್ಪಾಲ, ಕೊಟಕಪ್ಪಾಲ. ಸಂ. ವನತಿಕ್ತಾ, ಗಿರಿಮಲ್ಲಿಕಾ.

ಹುಟ್ಟು: ಕೊಂಕಣ, ಮಲಬಾರ ಅಡವಿಗಳು. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ಅಜೀರ್ಣರೋಗಕ್ಕೂ ಕರುಳುಗಳ ಅಕ್ರಮಕ್ಕೂ ವಿಶೇಷ ಔಷಧ. ಹಾಲಿನಲ್ಲಿ ಬೇಯಿಸಿದ ಬೀಜ ರಕ್ತಾತಿಸಾರಕ್ಕೂ ಮೂಲವ್ಯಾಧಿಗೂ, ಅದರ ಕಷಾಯ ಜ್ವರಕ್ಕೂ ಶ್ರೋಣಿತವಾತಕ್ಕೂ ಆಗುತ್ತದೆ. ಅದರಿಂದ ಔಷಧೋಪಯೋಗಕ್ಕೆ ಬರುವಂಥಾ ಒಂದು ಎಣ್ಣೆ ಸಹ ಮಾಡುತ್ತಾರೆ. ಗಂಜಿನೀರಲ್ಲಿ ಅರದ ಬೇರು ಗಂಟ್ಲು ಹುಣ್ಣು, ವಾತ, ಹಲ್ಲುನೋವು, ಇವುಗಳಲ್ಲಿ ಹೊರಗಿನ ಪ್ರಯೋಗಕ್ಕೆ ಬರುತ್ತದೆ.

**Wrightia zeylanica,** *Br.*—W. antidysenterica, *R. Br.*—Nerium antidysentericum, *Lin.*—(Order Apocynaceæ.)

*Tam.* Veppālai. *Tel.* Koḍišačeṭṭu, kuṭajamu, manupāla. *Can.* Koḍasige-giḍa. *Tu.* Koḍañji. *Mal.* Veṇpāla, koṭakappāla. *San.* Vanatiktā, girimallikā.

## 181. ಕೊತ್ತುಂಬರಿ (ಕೊತ್ತಂಬರಿ) ಗಿಡ (Coriander).

ತ. ಉತ್ತಂಬರಿ, ತನಿಗಮ್, ಕೊತ್ತುಮಲ್ಲಿ. ತೆ. ಕೊತಿಮಿರಿ. ತು. ಕೊತ್ತಂಬರಿ. ಮ. ಕೊತ್ತಂಪಾಲರಿ. ಕೊಂ. ಕೊತಂಬರಿ. ಸಂ. ಕುಸ್ತುಂಬರಿ, ಗುಳಿಕಾ, ಹೃದ್ಯಗಂಧಾ, ಜಲಮ್.

ಉಪಯೋಗ: ಔಷ: ಸೊಪ್ಪು ರಾಜಕುರು ವ್ರಣಗಳಿಗೆ ಆಗುತ್ತದೆ. ಬೀಜ ಉದರವಾಯುವಿಗೂ ಶಿರೋಭ್ರಮಣಕ್ಕೂ ಒಳ್ಳೇದು. ಹೊಟ್ಟೆಗೆ ಹಿತವಾದ್ದು. ಸಾಧಾ: ಬೀಜ ಸಂಬಾರಜೀನಸು.

**Coriandrum sativum,** *Lin.*—(Order Umbelliferæ.)

*Tam.* Uttambari, tanigam, kottumalli. *Tel.* Kotimiri. *Can.* Kottumbari (kottambari)-giḍa. *Tu.* Kottambari. *Mal.* Kottampālari. *Kon.* Kotambari. *San.* Kustumbari, guḷikā, hṛidyagandhā, jalam.

## 182. ಕೊರನಾರಿಗಡ್ಡೆ, ಗೇಕಿನಗಡ್ಡೆ, ಅಬ್ದಹುಲ್ಲು ತುಂಗೆಹುಲ್ಲು.

ತ. ಕೋರೈಕಿಳಙ್ಗು, ಅಂಬುದಮ್, ತೂಲಮ್. ತೆ. ತುಂಗಮುಸ್ತೆ. ತು. ತಾರಿಪಂತಿ. ಮ. ಕರಿಮುತ್ತಙ. ಕೊಂ. ಭದ್ರಮುಷ್ಟಿ. ಸಂ. ಮುಸ್ತ, ಘನಕೂಟ, ಭದ್ರಮುಷ್ಟಿ.

**ಹುಟ್ಟು**: ದಕ್ಷಿಣ ಹಿಂದುಸ್ಥಾನ, ಬಂಗಾಳ. **ಪುಷ್ಪ**: ಜ್ಯೇಷ್ಠದಿಂದ ಶ್ರಾವಣದ ವರೆಗೆ.

**ಉಪಯೋಗ**: ಔಷ: ಉತ್ತೇಜಕ ಗುಣ. ಗಡ್ಡೆಯ ಕಷಾಯ ಅತಿಸಾರಕ್ಕೂ ಅಜೀರ್ಣರೋಗಕ್ಕೂ ಜ್ವರಕ್ಕೂ ಕಲ್ಲುಸಕ್ಕರೆ ಸಹಿತ ಕೆಮ್ಮಿಗೂ ಆಗುತ್ತದೆ; ವಾಂತಿಭೇದಿಯಲ್ಲಿ ಸಹ ಕೊಡುತ್ತಾರೆ. ಇದಲ್ಲದೆ ಬೆವರು ಬರುವ ಹಾಗೆಯೂ ಮೂತ್ರ ಜುಲಾಬಾಗುವದಕ್ಕೂ ಕ್ರಿಮಿಗಳ ಶಮನಕ್ಕೂ ಸೇವಿಸುವರು. ಸಾಧಾ: ಗಡ್ಡೆ ಪರಿಮಳ. ಹುಲ್ಲು ದನಕ್ಕೆ ಒಳ್ಳೇ ಆಹಾರ.

**Cyperus rotundus**, *Lin.*—C. hexastachyus, *Rottl.*—(Order Cyperaceæ.)

*Tam.* Kōraikiḷangu, ambudam, tūlam. *Tel.* Tungamuste. *Can.* Koranāri-gaḍḍe, gēkina-gaḍḍe, abdahullu, tungehullu. *Tu.* Tāripanti. *Mal.* Karimuttana. *Kon.* Bhadramushṭi. *San.* Musta, dhanakūṭa, bhadramushṭi.

## 183. ಕೊರಿಸಿಗಿನ ಗಿಡ.

ತೆ. ಕಾಕಕೊಡಿಸೆ, ಕೊಲಮುಕ್ಕಿ, ಇಂದ್ರವೃಕ್ಷಮು.

**ಹುಟ್ಟು**: ಮಲಬಾರತೀರ. **ಪುಷ್ಪ**: ಮಾಘದಿಂದ ವೈಶಾಖದ ವರೆಗೆ.

**ಉಪಯೋಗ**: ಔಷ: ಒಗರು ಮತ್ತು ಬಲಕರ ಗುಣ. ಚೆಕ್ಕೆ ಅಜೀರ್ಣರೋಗಕ್ಕೆ ವಿಶೇಷ ಔಷಧ. ಹುರಿದ ಬೀಜದ ಕಲ್ಕನೀರು ಕರುಳುಗಳ ಅಕ್ರಮಕ್ಕೂ ಸನ್ನಿರೋಗದ ವಾಂತಿಗೂ ಆಗುತ್ತದೆ. ಬೀಜ ಕ್ರಿಮಿಗಳ ಶಮನಕ್ಕೂ ಪ್ರಯೋಗಿಸುತ್ತಾರೆ. ಇದು ದನಗಳ ಔಷಧದಲ್ಲಿ ಸಹ ಸೇರುತ್ತದೆ.

**Holarrhena antidysenterica**, *Wall.*—Chonemorpha antid., *G. Don.*—(Order Apocynaceæ.)

*Tel.* Kākakoḍise, kolamukki, indravṛikshamu. *Can.* Korisigina-giḍa.

## 184. ಕೊಳವಳಿಕೆ, ಮುಳ್ಳಂಕೋಲೆ, ಗೋರಿಮಿಡಿ, ನೀರುಪ್ಪಿ ಗಿಡ.

ತ. ನೀರ್ಮುಳ್ಳಿ. ತೆ. ನೀರುಗೊಬ್ಬಿ, ಕೊಂಮಿಡಿ. ತು. ಕೋವೆಮುಳ್ಳುದೈ. ಮ. ವಯಲ್ಚುಳ್ಳಿ. ಕೊಂ. ಕೊಂಳ್ಬುಳೆಝಾಡ. ಮಹಾ. ತಾಲ್ಮಖಾನ. ಹಿಂ. ಗೋಕ್ಷುರ್. ಸಂ. ಕೋಕಿಲಾಕ್ಷ, ಅದ್ಯಂಡ, ಸೂರ್ಯಭಿರ, ಏಕಕಂಟಕ.

**ಹುಟ್ಟು**: ನೀರುಳ್ಳ ಸ್ಥಳಗಳು. **ಪುಷ್ಪ**: ಆಷಾಢದಿಂದ ಕಾರ್ತಿಕದ ವರೆಗೆ.

**ಉಪಯೋಗ**: ಔಷ: ಬೀಜ ವಿಷಹರ; ಹಲ್ಲುನೋವಿಗೂ ಕುರುಗಳಿಗೂ ಆಗುತ್ತದೆ. ಮಹೋದರವೆಂಬ ಬೀಗುರೋಗದಲ್ಲಿ ಮೂತ್ರಜುಲಾಬು ಮಾಡಿಸುವದಕ್ಕೆ

ಬೇರಿನ ಕಷಾಯ ಬಹು ಒಳ್ಳೇದು; ಬೇರನ್ನು ಸುಟ್ಟು ಕರಿ ಮಾಡಿ ಬೀಗುಗಳಿಗೆ ಹಚ್ಚು ವದು ಸಹ ಉಂಟು. ಕಷಾಯ ಅಶ್ಮರಿಯೆಂಬ ಮೂತ್ರಕಲ್ಲಿಗೆ ಸಹ ಉಪಯೋಗ. ಸಿರ್ಕದಲ್ಲಿ ಬೇಯಿಸಿದ ಎಲೆಗಳು ಮೂತ್ರಭೇದಿ.

**Barleria longiflora,** *Lin.*—(Order Acanthaceæ.)

*Tam.* Nīrmuḷḷi. *Tel.* Nīrugobbi, korimiḍi. *Can.* Koḷavaḷike, muḷḷankōle, gōrimiḍi, nīruppi-giḍa. *Tu.* Kōvemuḷḷu-dai. *Mal.* Vayalčuḷḷi. *Kon.* Koḷmbuḷe-jhāḍa. *Mah.* Tālmakhāna. *Hin.* Gōkshur. *San.* Kōkilāksha, adyaṇḍa, sūrya-bhira, ēkakaṇṭaka.

## 185. ಕೋಳಿಕುಟುಮ, ನಾಂಗುಲಿಕ, ಶಿವಶಕ್ತಿ, ತೊಟಿಲ್, ಶಿವರಕ್ತಿ ಬಳ್ಳಿ, ಕರಡಿಕಣ್ಣಿನ ಗಡ್ಡೆ (Gloriosa).

ತ. ಕಾಂದಳ್, ಅಕ್ಕಿನಿಚ್ಚಿಲಮ್ (=ಅಗ್ನಿಜಲಮ್), ಕಾರ್ತಿಕೈಪ್ಪೂ, ಕಾರ್ತಿಕೈಕಿಳಂಗು, ತೋಂಡಿ. ತೆ. ಅಗ್ನಿಶಿಖ, ಲಾಂಗಲಿ. ತು. ಬಲಿಪಪೂ, ಕೇಂಕಣ್ಣುದ ಪೂ. ಮ. ಮೇತ್ತೋನ್ನಿ, ಕಾಂದಳ್. ಕೊಂ. ವಾಗಾನಾಂಕ್ಟ, ಶಿವಶಕ್ತಿ. ಸಂ. ಅಮ್ರತಾ, ಹರಿಪ್ರಿಯ, ಕಂದಳಿ, ಅಹಿಜಹ್ವಾ, ಉತ್ತಮಾರಣಿ.

ಹುಟ್ಟು: ಸಾಧಾರಣ. ಪುಷ್ಪ: ಶ್ರಾವಣದಿಂದ ಆಶ್ವೀಜದ ವರೆಗೆ.

ಉಪಯೋಗ: ಔಷ: ಕುರುಗಳಿಗೂ ಹೆರಬೇನೆಗೂ ಗಡ್ಡೆಯ ಲೇಪ ಮಾಡುವರು. ಆದರೆ ಗಡ್ಡೆ ಅತಿ ವಿಷ; ತಿಂದರೆ, ಸಾಯುತ್ತಾರೆ. ಸಾಧಾ: ಶೃಂಗಾರದ ಹೂ.

**Gloriosa superba,** *Lin.*—Methonica superba, *Lam.*—(Order Liliaceæ.)

*Tam.* Kāndaḷ, akkiniččilam (=agnijalam), kārtikaippū, kārtikaikiḷangu, tōndi. *Tel.* Agnišikha, lāngali. *Can.* Kōḷikuṭuma, nāngulika, šivašakti, toṭil, šivarakti-baḷḷi, karaḍi-kaṇṇina-gaḍḍe. *Tu.* Balipa-pū, kēnkaṇṇuda-pū. *Mal.* Mēttōnni, kāndaḷ. *Kon.* Vāgānankta, šivašakti. *San.* Amratā, haripriya, kandaḷi, ahijihvā, uttamāraṇi.

## 186. ಗಂಟುಭಾರೆಂಗಿ (ಬಾರಂಗಿ) ಗಿಡ.

ತ. ತಿರುತೇಕ್ಕು, ಕಂಡುಬಾರಙ್ಗಿ. ಮ. ಚೆರುತೇಕ್ಕು. ಕೊಂ. ಸಿರ್ವಿಷ. ಸಂ. ಅಂಗಾರ, ದ್ವಿದಂಡಿ, ಭಾರ್ಗೀ.

ಹುಟ್ಟು: ಪಶ್ಚಿಮ ಹಿಂದುಸ್ಥಾನ. ಪುಷ್ಪ: ಕಾರ್ತಿಕ, ಮಾರ್ಗಶಿರ.

ಉಪಯೋಗ: ಔಷ: ಎಲೆಗಳನ್ನು ಎಣ್ಣೆಯಲ್ಲಿ ಅಥವಾ ತುಪ್ಪದಲ್ಲಿ ಕಾಯಿಸಿ, ಕಠಿಣ ತಲೆನೋವಿಗೂ ಕಣ್ಣುನೋವಿಗೂ ಹಚ್ಚಬಹುದು. ಬೇರನ್ನು ಶುಂಠಿ ಮತ್ತು ಕೊತ್ತಂಬರಿ ಸಹಿತ ನೀರಲ್ಲಿ ಬೇಯಿಸಿ, ಓಕರಿಕೆಗೂ ಅನ್ನಕೋಶದ ಅಕ್ರಮಕ್ಕೂ ಕೊಡುವರು. ಬೇರು ಸರ್ಪವಿಷಕ್ಕೂ ಜ್ವರಕ್ಕೂ ಕಫಕ್ಕೂ ಆಗುತ್ತದೆ. ಜಜ್ಜಿ ಮಜ್ಜಿಗೆಯಲ್ಲಿ ಬೇಯಿಸಿದ ಬೀಜ ಲಘುವಿರೇಚನಕ್ಕೂ ಬೀಗಿಗೂ ಉಪಯೋಗ.

**Clerodendrum serratum,** *Spreng.*—Volkameria serrata, *Lin.*—(Order Verbenaceæ.)

*Tam.* Širutēkku, kaṇḍubāraṅgi. *Can.* Gaṇṭubhāreṅgi (bāraṅgi)-giḍa. *Mal.* Čerutēkku. *Kon.* Nirvisha. *San.* Aṅgāra, dvidaṇḍi, bhārggī.

## 187. ಗಂಡೀರ (Telinga Potato).

ತ. ಕರಣೈಪ್ಪಲಾ. ತೆ. ಕಂದ, ಆಲುಕಮು. ತು. ಪರಿಂಕಿಗಡ್ಡೆ. ಮ. ಚೀನಪಾವ್.

ಹುಟ್ಟು: ಬಂಗಾಳ, ದಕ್ಷಿಣ ಹಿಂದುಸ್ಥಾನ. ಪುಷ್ಪ: ಜ್ಯೇಷ್ಠ.

ಉಪಯೋಗ ಔಷ: ಕುರುಗಳಿಗೂ ಕಣ್ಣುರೋಗಕ್ಕೂ ಕಫಕ್ಕೂ ವಾತಕ್ಕೂ ಉಪಯೋಗ. ಸಾಧಾ: ಗಡ್ಡೆ ಗೆಣಸಿನ ಹಾಗೆ ತಿನ್ನುತ್ತಾರೆ.

**Amorphophallus campanulatus,** *Blume.*—Arum campanulatum, *Roxb.*—(Order Aroideæ.)

*Tam.* Karaṇaippalā. *Tel.* Kanda, ālukamu. *Can.* Gaṇḍīra. *Tu.* Pariṅki-gaḍḍe. *Mal.* Čīnapāvu̥.

## 188. ಗಂಡುಕೇಪಳ, ಬಂದಿಕ್ಯಾ ಗಿಡ.

ತು. ಒಳ್ಳೆಕೊಡಿ. ಮ. ನೆಟುಂಚೆತ್ತಿ. ಕೊಂ. ಗಂಡಪಟಕಳಿ.

ಹುಟ್ಟು: ತಿರುವಂಕೋಡು, ಮಲಬಾರತೀರದ ಅಡವಿಗಳು. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ಹೂ ಚಿಗುರುಗಳ ಕಷಾಯ ಎಣ್ಣೇ ಸಮೇತ ಕಜ್ಜಿಗೆ ಉಪಯೋಗ. ಅದರ ಬೇರು ತೇದು ಕುಡಿದರೆ, ಉಷ್ಣದ ಕಜ್ಜಿಗೆ ಒಳ್ಳೇದು.

**Memecylon amplexicaule,** *Roxb.*—M. cordatum, *Wall.*—M. depressum, *Benth.*—(Order Melastomaceæ.)

*Can.* Gaṇḍukēpaḷa, bandikyā-giḍa. *Tu.* Oḷḷekoḍi. *Mal.* Neṭuṅčetti. *Kon.* Gaṇḍapaṭakaḷi

## 189. ಗಂಡುಬಿದುರು (Boarspear or Male Bamboo).

ತು. ಪಂಜಬೆದ್ರ್. ಮ. ಅರಿಂಕಂಟನ್. ಕೊಂ. ಆಬುಂತು ವಾಸೊ.

ಹುಟ್ಟು: ತೀರಗಳ ಕಾಡುಗಳು. ಪುಷ್ಪ: ಅನೇಕ ವರುಷ ಬಾಳಿ ಸತ್ತು ಹೋಗುವ ಕಾಲದಲ್ಲಿ ಮಾತ್ರ ಹೂ ಬರುತ್ತದೆ.

ಉಪಯೋಗ: ಸಾಧಾ: ಅದರ ಕಣಿಲೆಯ ಪಲ್ಯ ಮಾಡುತ್ತಾರೆ. ಘಟ್ಟಿಯಾದ ಬಿದುರು ನಾನಾ ಕೆಲಸಕ್ಕೆ ಬರುತ್ತದೆ.

**Dendrocalamus strictus,** *Nees.*—Bambusa stricta, *Roxb.*—B. verticillata, *Rottl.*—(Order Gramineæ.)

*Can.* Gaṇḍubiduru. *Tu.* Pañjibeḍuru. *Mal.* Ariṅkaṇṭan. *Kon.* Akhaṇḍu-vāso.

## 190. ಗಂಧಮೆಣಸು, ಬಾಲಮೆಣಸು (Cubebs).

ತ. ವಾಲ್ಮಿಳಗು, ತಕ್ಕೋಲಮ್. ತೆ. ಚಲವಮಿರಿಯಾಲು. ಮ. ಚೀನಮುಳಗ್, ವಾಳ್ಮಳಗ್. ಕೊಂ. ಗಂಧಮೆಣಸು. ಹಿಂ. ಕಬಾಬ್ಚೀನಿ.

ಉಪಯೋಗ: ಔಷ: ಮುದಿ ಪ್ರಾಯದವರ ಕೆಮ್ಮಿಗೂ ಬಾಯಾರುವಿಕೆಗೂ ವಾತಕ್ಕೂ ಆಗುತ್ತದೆ; ಶ್ಲೇಷ್ಮಹರ; ಮುಖ್ಯವಾಗಿ ಪ್ರಮೇಹರೋಗದಲ್ಲಿ ಪಟಿಕಾರದ ಸಂಗಡ ಉಪಯೋಗ.

**Piper Cubeba,** *Lin. f.*—Cubeba officinalis, *Miq.*—(Order Piperaceæ.)

*Tam.* Vālmiḻagu, takkōlam. *Tel.* Čalavamiriyālu. *Can.* Gandhameṇasu, bālameṇasu. *Mal.* Čīnamuḻagu. *Kon.* Gandhameṇasu. *Hin.* Kabābčīni.

## 191. ಗಜ್ಜಿಗೆಕಾಯಿ, ಗಜ್ಜಗ ಬಳ್ಳಿ (Molucca Bean or Nicker Plant).

ತ. ಕಳರ್ಕೊಡಿ, ಮುಳಲ್, ಕಳಂಗು. ತೆ. ಗಚ್ಚ, ನೆಮಲಿಅಡಗು, ಯಲಾಕ್ಷಿ, ಶುಕಜಂಬುಕ. ತು. ಗಜಿಗೆಕಾಯಿ. ಮ. ಕಳಂಚಿ. ಕೊಂ. ಗಜಗೊ. ಹಿಂ. ಕಾಟ್ಕಾರಂಜ್, ಕಾಟ್ಕಲಿಜಾ. ಸಂ. ಕುಬೇರಾಕ್ಷಿ.

ಹುಟ್ಟು: ತೀರಪ್ರಾಂತಗಳು, ಬಂಗಾಳ. ಪುಷ್ಪ: ಶ್ರಾವಣ, ಭಾದ್ರಪದ.

ಉಪಯೋಗ: ಔಷ: ಬೀರು ಕಾಯಿಗಳ ಕಷಾಯ ಆಹಿಕ ಜ್ವರಕ್ಕೂ ರಕ್ತ ಶುದ್ಧಿಗೂ ಆಗುತ್ತದೆ. ಬೀಜ ಕರುಳುಗಳ ಅಕ್ರಮಕ್ಕೂ ಕ್ರಿಮಿಗಳ ನಾಶಕ್ಕೂ, ಅದರ ಎಣ್ಣೆ ಎಳವುರೋಗಕ್ಕೂ ಉಪಯೋಗ. ಬೇರಿಗೆ ಒಗರು, ಬಲಕರ ಮತ್ತು ಅಗ್ನಿ ದೀಪಕ ಗುಣ.

**Cæsalpinia Bonducella,** *Flem.*—Guilandina Bonduc, *Lin.* β.—G. Bonducella, *Lin.*—(Order Leguminosæ.)

*Tam.* Kaḻarkoḍi, muḻal, kaḻaṅgu. *Tel.* Gačča, nemaliaḍugu, yalākshi, šukajambuka. *Can.* Gajjigekāyi, gajjega-baḷḷi. *Tu.* Gajigekāyi. *Mal.* Kaḻañči. *Kon.* Gajago. *Hin.* Kāṭkārañj, kāṭkalijā. *San.* Kubērākshi.

## 192. ಗಣಜಿಲು, ಕೊಮ್ಮೆ, ಕೆಂಚಿಗೆ.

ತು. ತೀಮುಳ್ಳು. ಕೊಂ. ಕೆಂಚಿಕಿ. ಸಂ. ವೈಶಾಖಮುಂಥ, ಋತುದಾಣ, ಶ್ವೇತಮೂಲ.

ಉಪಯೋಗ: ಔಷ: ಬೀಗಿಗೂ ಅಜೀರ್ಣಕ್ಕೂ ಸಂದುವಾತಕ್ಕೂ ಆಗುತ್ತದೆ. ಸಾಧಾ: ಎಲೆಗಳಿಂದ ಪಲ್ಯ, ಚಟ್ಣಿ ಸಹ ಮಾಡುತ್ತಾರೆ.

**Cæsalpinia mimosoides,** *Lam.*—C. armata, *Grah.*—C. horrida, *Wall.*—C. Simora, *Hamilt.*—(Order Leguminosæ.)

*Can.* Gaṇajilu, komme, keṅčige. *Tu.* Tīmuḷḷu. *Kon.* Keṅčiki. *San.* Vaišākhamantha, ṛitubāṇa, švētamūla.

## 193. ಗರಗಸ, ಗರ್ಗತ್ತೀ ಮರ (Sandpaper Tree).

ತ. ತರಗತಿಮರಂ. ತು. ಪಾಜೇವು. ಮ. ಪಾರೋಮ್, ತೊಂಡಿತೇರಕಮ್, ಪೆರುಂತೇರಕಮ್. ಕೊಂ. ಖರ್ವತೆರೂಕು. ಸಂ. ಖರಪತ್ರ.

ಹುಟ್ಟು: ತೀರಪ್ರಾಂತಗಳು. ಪುಷ್ಪ: ಇಡೀ ವರುಷ.

ಉಪಯೋಗ: ಔಷ: ಕಂಠರೋಗಕ್ಕೆ ಮರದ ಸೊಸೆಯನ್ನು ಸುಣ್ಣ ಕಲಸಿ ಹಚ್ಚುತ್ತಾರೆ. ಚಿಕ್ಕೆ ಕಾಯಿಗಳ ಕಷಾಯದಲ್ಲಿ ಕುಷ್ಠರೋಗಗಳು ಮಿಾಯುವದು ಒಳ್ಳೇದಂತೆ. ಸಾಧಾ: ಎಲೆಗಳಿಂದ ಮರ ನಯ ಮಾಡುವದುಂಟು.

**Ficus asperrima,** *Roxb.*—(Order Urticaceæ.)

*Tam.* Taragatimaram. *Can.* Garagasa, gargattī-mara. *Tu.* Pājēvu. *Mal.* Pārōm, toṇḍitērakam, peruntērakam. *Kon.* Kharvate-rūku. *San.* Kharapatra.

## 194. ಗರಿಕೇ, ಕರಿಕೇ, ಅಂಬಟೇ ಹುಲ್ಲು (Hariali or Doub Grass).

ತ. ಅರುಗು, ಮುಯರ್ಪುಲ್, ಅಂಗುಶೋಲಿ. ತೆ. ಗರಿಕೆ. ತು. ಕದಿಕೆಪಂತಿ. ಮ. ಕರುಕಪುಲ್ಲು, ಮುಯಲ್ಪುಲ್. ಕೊಂ. ಜಿರ್ಬಾಂಕುರ. ಸಂ. ರಸಲ್ಲಕಿ, ದೂರ್ವಾ.

ಹುಟ್ಟು: ಸಮಸ್ತ ಹಿಂದುಸ್ಥಾನ. ಪುಷ್ಪ: ಇಡೀ ವರುಷ.

ಉಪಯೋಗ: ಔಷ: ಭಾವ ತಂಪು. ರಸವು ರಕ್ತಕಾರುವದನ್ನು ನಿಲ್ಲಿಸುತ್ತದೆ. ಕಷಾಯ ಜ್ವರಕ್ಕೂ ಮೂತ್ರಶೋಧನೆ ಮಾಡುವದಕ್ಕೂ ಒಳ್ಳೇದು. ಸಾಧಾ: ಕುದುರೆ ದನ ಮುಂತಾದ್ದಕ್ಕೆ ಬಹು ಒಳ್ಳೇ ಆಹಾರ. ಚಿಗುರುಗಳು ಪಲ್ಯ. ಬೇರಿನಿಂದ ತಂಪಾದ ಪಾನಕ ಮಾಡುತ್ತಾರೆ.

**Cynodon dactylon,** *Pers.*—C. linearis, *Willd.*—C. maritimus, *H. B.*—C. occidentalis, *Willd.*—C. portoricensis, *Willd.*—Agrostis bermudiana, *Tuss.*—A. linearis, *Retz.*—Chloris cynodon, *Trin.*—Ch. maritima, *Trin.*—Dactylon officinale, *Vill.*—Digitaria dactylon, *Scop.*, *Ell.*—D. linearis, *Pers.*, *Spr.*—D. stolonifera, *Schrad.*—Fibichia umbellata, *Kœl.*—Milium dactylon, *Mœnch.*—Papsalum dactylon, *Lam.*—P. præcox, *Walt.*—P. umbellatum, *Lam.*—Vilfa linearis, *Beauv.*—Panicum dactylon, *Lin.*—P. lineare, *Burm.*—(Order Gramineæ.)

*Tam.* Arugu, muyarpul, aṅgušōli. *Tel.* Garike. *Can.* Garikē, karikē, ambaṭē-hullu. *Tu.* Kadikepanti. *Mal.* Karukapullu, muyalpul. *Kon.* Jirbāṅkura. *San.* Rasallaki, dūrvā.

## 195. ಗರುಗ, ಗರ್ಗ್ಗ, ಅಜಾಗರ, ಗರುಗಲು ಗಿಡ.

ತ. ಕರಿಶಲಾಂಕಣ್ಣಿ, ಅರುಬದಮ್, ಕೈಯಾಂತಗರೈ, ಚಾರುದಾರಿ. ತೆ. ಗುಂಟಗಲಿಜೇರು. ಮ. ಕಣ್ಣಾಣ್ಣಿ, ಕೈಯಾಂತಕರ, ಕಯ್ಯನ್ನಿ. ಕೊಂ. ಕಾಜಲಮಾವು. ಸಂ. ಭೃಂಗರಾಜ, ಮಾರ್ಕ್ಕವ, ಸುಪರ್ನ.

**ಹುಟ್ಟು**: ನೀರುಳ್ಳ ಸ್ಥಳಗಳು. **ಪುಷ್ಪ**: ಇಡೀ ವರುಷ.

**ಉಪಯೋಗ**: ಔಷ: ಹಸಿ ಗಿಡವನ್ನು ಎಳ್ಳೆಣ್ಣೆಯೊಡನೆ ಅರದು ಆನೆಕಾಲಿಗೆ ಹಚ್ಚುವದು. ಬೇರು ವಾಂತಿ ಮತ್ತು ಜುಲಾಬು ಮಾಡಿಸುತ್ತದೆ. ಎಣ್ಣೆಯಲ್ಲಿ ಕಾಸಿದ ಎಲೆಗಳ ರಸ ಬೀಗಿಗೂ ನಂಜಿಗೂ ಒಳ್ಳೇದು. ಇದಲ್ಲದೆ ಪಿತ್ತದೋಷಕ್ಕೂ ಅಜೀರ್ಣಕ್ಕೂ ಕ್ರಿಮಿರೋಗಕ್ಕೂ ಉಪಯೋಗ. ಚೇಳು ಕಚ್ಚಿದ್ದಕ್ಕೆ ಉತ್ತಮ ಔಷಧ, ಹ್ಯಾಗಂದರೆ: ವಿಷದ ವೇಗ ಏರಿದರೂ, ಈ ಎಲೆಗಳನ್ನು ಕೈಯಿಂದ ಹಿಸಿಕಿ ಬಾವು ಇರುವ ಸ್ಥಳದಿಂದ ಘಾಯದ ಪರ್ಯಂತರ ಇಳಿತೆಗೆದು ಪೂಸುತ್ತಾ, ಕಡೆಗೆ ಆ ಹಿಂಡಿ ಘಾಯಕ್ಕೆ ಕಟ್ಟಲು, ಅದು, ಸೂಜಿಕಲ್ಲು ಕಬ್ಬಿಣವನ್ನು ಆಕರ್ಷಿಸುವಂತೆ, ವಿಷವನ್ನು ಹೀರಿಬಿಡುವದು. ಸಾಧಾ: ಎಲೆಗಳ ರಸದಿಂದ ಕೂದಲುಗಳನ್ನು, ಅವು ಕಪ್ಪಾಗುವಂತೆ, ತೊಳೆಯುತ್ತಾರೆ.

**Eclipta alba,** *Hassk.*—E. erecta, *Lin.*—E. adpressa, *Mach.*—E. prostrata, *Lin.*, *Roxb.*—(Order Compositæ.)

*Tam.* Karišalāṅkaṇṇi, arubadam, kaiyāntagarai, čārudāri. *Tel.* Guṇṭagalijēru. *Can.* Garuga, gargga, ajāgara, garugalu-giḍa. *Mal.* Kaṅṅaṇṇi, kaiyāntakara, kayyanni. *Kon.* Kājalamāvu. *San.* Bhṛingarāja, mārkkava, suparna.

## 196. ಗರುಡಫಲ.

ತ. ನೇರದಿ. ತೆ. ನಿರದಿ. ತು. ಸೂರಂಟೆ. ಮ. ಮರೋಟಿ, ನೀರಳ. ಕೊಂ. ಗರ್ಡಫಲ.

**ಹುಟ್ಟು**: ಮಲಬಾರತೀರ, ತಿರುವಂಕೋಡು. **ಪುಷ್ಪ**: ಆಶ್ವೀಜ, ಕಾರ್ತಿಕ.

**ಉಪಯೋಗ**: ಔಷ: ಬೀಜದ ಎಣ್ಣೆ ನಂಜಿಗೂ ವ್ರಣಗಳಿಗೂ ಕುಷ್ಠರೋಗಕ್ಕೂ ಕಣ್ಣುರೋಗಕ್ಕೂ ಉಪಯೋಗಿಸುತ್ತಾರೆ. ಸಾಧಾ: ಬೀಜಗಳನ್ನು ಮೀನು ಹಿಡಿಯುವವರು ಅದಕ್ಕೆ ವಿಷವಾಗಿ ಪ್ರಯೋಗಿಸುತ್ತಾರೆ; ಆದರೆ ಅಂಥ ಮೀನು ತಿಂದರೆ, ವಾಂತಿಯಾಗುವದು.

**Hydnocarpus venenata,** *Gærtn.*—H. inebrians, *Vahl.*—(Order Bixineæ.)

*Tam.* Nēradi. *Tel.* Niradi. *Can.* Garuḍaphala. *Tu.* Sūraṇṭe. *Mal.* Marōṭi, nīraḷa. *Kon.* Garḍaphala.

## 197. ಗರ್ಗರಿ ಗಿಡ.

ತ. ಪೊತ್ತಲೈಕೈಯಾಂದಗರೈ, ಅವಿಗುಂಬೈ. ಮ. ಪೈಕಯ್ಯನ್ನಿ, (ವಲಿಯ) ಮಾಜಿನಾರಿ.

**ಹುಟ್ಟು**: ತೀರಪ್ರಾಂತಗಳು. **ಪುಷ್ಪ**: ಶ್ರಾವಣದಿಂದ ಪುಷ್ಯದ ವರೆಗೆ.

ಉಪಯೋಗ: ಔಷ: ಅಜೀರ್ಣಕ್ಕೆ, ಬೇರು ಕುರುಗಳಿಗೆ ಉಪಯೋಗ.

**Wedelia calendulacea,** *Less.*—W. benghalensis, *Rich., Pers.*—Jægeria calendulacea, *Spr.*—(Order Compositæ.)

*Tam.* Pottalaikaiyāndagarai, adigumbai. *Can.* Gargari-giḍa. *Mal.* Paikay-yanni, (valiya) mānanāri.

## 198. ಗಿಜಿಗಿಜಿ, ಗಿಜಟೆ, ಗಿಲಿಗಿಜಿ, ತನ್ನೆಲೆವುಳುಕ ಗಿಡ.

ತ. ವೆಳ್ಳೈಕಿಲುಕಿಲುಪ್ಪೈ, ನರಿಮರುಟ್ಟಿ, ಚಿತುಡು. ತು. ಗಿಜಿಗಿಜಿ ದೈ. ಮ. ಪೇತಂದಲಕೊಟೆ.

ಹುಟ್ಟು: ಮಲಬಾರತೀರ. ಪುಷ್ಪ: ಜ್ಯೇಷ್ಠ, ಆಷಾಢ.

ಉಪಯೋಗ: ಔಷ: ಎಲೆಗಳ ರಸ ಉಗುಳುರೋಗಕ್ಕೂ ಮಕ್ಕಳ ಹೊಟ್ಟೇ ಅಕ್ರಮಕ್ಕೂ, ಉಪ್ಪಿನ ಸಂಗಡ ಕ್ರಿಮಿರೋಗಕ್ಕೂ ಆಗುತ್ತದೆ. ಬೇರಿನ ಕಷಾಯ ಮಕ್ಕಳ ಕೆಮ್ಮಿಗೆ ಒಳ್ಳೇದು.

**Crotalaria verrucosa,** *Lin.*—C. angulosa, *Lam.*—C. coerulea, *Jacq.*—(Order Leguminosæ.)

*Tam.* Veḷḷaikilukiluppai, narimaruṭṭi, čituḍu. *Can.* Gijigiji, gijaṭe, giligiji, tannelevuḷuka-giḍa. *Tu.* Gijigiji-dai. *Mal.* Pētandalakoṭe.

## 199. ಗುಗ್ಗುಳ ಮರ.

ತ. ಕುಂದ್ರಿಕಮ್. ಮ. ಕುಂತಿರಿಕ್ಕಮ್. ಕೊಂ. ವಿಶೇಷಧೂಪು, ಗುಗ್ಗುಳು. ಸಂ. ಕೊಂಕಣಧೂಪಮ್.

ಹುಟ್ಟು: ಚೋಳಮಂಡಲ, ಮಲಬಾರತೀರ, ದಖ್ಖಣ. ಪುಷ್ಪ: ಫಾಲ್ಗುಣ, ಚೈತ್ರ.

ಉಪಯೋಗ: ಔಷ: ತೆಂಗಿನ ಎಣ್ಣೆ ಮತ್ತು ಲಿಂಬೆರಸದೊಡನೆ ಇದರ ಹಗಿನು ಆರದು ನಂಜಿಗೆ ಒಳ್ಳೇ ಲೇಪ ಮಾಡುತ್ತಾರೆ. ಸಾಧಾ: ಹಗಿನು ಪರಿಮಳ. ಮರ ಕೆಲಸಕ್ಕೆ ಬರುತ್ತದೆ.

**Boswellia glabra,** *Roxb.*—(Order Burseraceæ.)

*Tam.* Kundrikam. *Can.* Gugguḷa-mara. *Mal.* Kuntirikkam. *Kon.* Višesha-dhūpu, gugguḷu. *San.* Koṅkaṇadhūpam.

## 200. ಗುಡ್ಡದ ಗೋಣೀ, ಕಲ್ಲುಮಾವಿನ ಮರ.

ತ. ತರುಪ್ಪುಆಳಿಂಜಿಮರಮ್. ತೆ. ನಲ್ಲಊಡುಗ, ನಲ್ಲಅಂಕೋಲಮು. ಮ. ಕರಂಗೋಲಮ್.

ಹುಟ್ಟು: ಮಲಬಾರತೀರ, ಅಲ್ಲಹಾಬಾದು. ಪುಷ್ಪ: ವೈಶಾಖ.

ಉಪಯೋಗ: ಬೇರು ಮಲಭೇದಿ. ಸಾಧಾ: ಹಣ್ಣು ತಿನ್ನುತ್ತಾರೆ.

**Alangium hexapetalum,** *Lam.*—A. Lamarckii, *Thwaites.*—(Order Cornaceæ.)

*Tam.* Karppu-aḷiñji-maram. *Tel.* Nalla-ūḍuga, nalla-aṅkōlamu. *Can.* Guḍḍa-da-gōṇī, kāllumāvina-mara. *Mal.* Karaṅgōlam.

### 201. ಗುಡ್ಡನೇರಳೆ, ಕುಂಟನೇರಳೆ.

**ಉಪಯೋಗ:** ಔಷ: ಒಗರು ಗುಣ. ರಕ್ತಾತಿಸಾರಕ್ಕೆ ಇದರ ಕುಡಿಗಳ ಕಷಾಯ ಇಲ್ಲವೆ ಕುಡಿಗಳನ್ನು ಸ್ವಲ್ಪ ಜೀರಿಗೆ ಬೆರಸಿ ಪಾನಕ ಮಾಡಿ ಕೊಡುವರು; ಹೊಟ್ಟೆಯ ಅಕ್ರಮಕ್ಕೂ ಆಗುತ್ತದೆ. ಸಾಧಾ: ಚರ್ಮ ಹದ ಮಾಡಲಿಕ್ಕೆ ಉಪಯೋಗ. ಚಿಗುರುಗಳ ತಂಬಳಿ ಮಾಡುತ್ತಾರೆ.

**Elæocarpus lanceæfolius,** *Roxb.*—E. lanceolatus, *Wall.*—(Order Tiliaceæ.)

*Can.* Guḍḍanēraḷe, kuṇṭanēraḷe.

### 202. ಗುಡ್ಡಪನ್ನೇರಳು ಮರ.

ತು. ಜೋಗಿಪಂದ್ರ್ನ.

**ಉಪಯೋಗ:** ಸಾಧಾ: ಹಣ್ಣು ತಿನ್ನುತ್ತಾರೆ.

**Eugenia zeylanica,** *Wight.*—Syzigium zeylanicum, *Dec.*—Myrtus zeylanica, *Lin.*, *Spr.*—(Order Myrtaceæ.)

*Can.* Guḍḍapannēraḷu-mara. *Tu.* Jōgi-parndu.

### 203. ಗುಡ್ಡರೆಂಜೆ, ಬೀಗದ ಮರ.

ತು. ರಾಹುಬೀಜ. ಮ. ಆವಿಲ್. ಕೊಂ. ವಾವಳಿ. ಸಂ. ಚಿರಿಬಿಲ್ವ.

**ಉಪಯೋಗ:** ಔಷ: ಚೆಕ್ಕೆಯ ಕಷಾಯಕ್ಕೆ ಎಣ್ಣೆ ಸೇರಿಸಿ ಕಾಯಿಸಿ ವಾತ ರೋಗಿಗಳಿಗೆ ಹಚ್ಚುವದುಂಟು. ಎಲೆಗಳು ಸಂಜುಹರ. ಜೀಗು ಇದ್ದವರು ಚೆಕ್ಕೆಯ ಸ್ವಲ್ಪ ಕಷಾಯ ಕುಡಿಯಬಹುದು.

**Elæocarpus serratus,** *Lin.*, *W. and A.*—(Order Tiliaceæ.)

*Can.* Guḍḍareñje, bīgada-mara. *Tu.* Rāhubīja. *Mal.* Āvil. *Kon.* Vāvaḷi. *San.* Čiribilva.

### 204. ಗುಲಗಂಜಿ, ಗುರುಗುಂಜಿ, ಗುಲಗುಂಜಿ, ಗುಲಿಗಂಜಿ ಬಳ್ಳಿ (Wild Liquorice).

ತ. ಕುನ್ರಿ. ತೆ. ಗುರಿಗಿಂಜ, ಗುಲಿವಿಂದ, ಕುಕ್ಕುಟಮು. ತು. ಗುರುಗೊಂಜಿ. ಮ. ಕುನ್ನಿ, ಗುಂಜ. ಕೊಂ. ಗುರ್ಗುಂಜಿ. ಮರಾ. ಗುಂಜಿ. ಸಂ. ತುಲಾಬೀಜಂ, ಗುಂಜಾ, ರಕ್ತಿಕಾ.

[ಇದಕ್ಕೆ ಸಮ್ಮಂಧವಿರುವ ಜ್ಯೇಷ್ಠಮಧು ಇಲ್ಲವೆ ಅತಿಮಧುರವೆಂಬದು ಪರ್ಶಿಯ ದೇಶದಿಂದ ಈ ಊರಿಗೆ ಬರುತ್ತದೆ.]

ಹುಟ್ಟು: ಪಶ್ಚಿಮ ಪೂರ್ವ ತೀರಗಳೂ ಮೈಸೂರೂ. ಪುಷ್ಪ: ಚೈತ್ರದಿಂದ ಆಶ್ವೀಜದ ವರೆಗೆ.

ಉಪಯೋಗ: ಔಷ: ಎಲೆಗಳು ಜೇಸುತುಪ್ಪದ ಸಂಗಡ ಬಾವಿಗೂ, ಒಣ ಎಲೆಯ ಪುಡಿ ಮಾಡಿ ಸಕ್ಕರೆ ಕೂಡಿಸಿ ಅಗಿದರೆ ಕೆಮ್ಮಿಗೂ ಒಳ್ಳೇದು. ಬೀಜ ಕಣ್ಣುರೋಗಕ್ಕೂ ಜಾಡಹುಳದ ವಿಷಕ್ಕೂ ಇಲಿವಿಷಕ್ಕೂ ಉಪಯೋಗ; ಅದು ತಾನೆ ವಿಷವಾದ್ದರಿಂದ ಒಳಗಿನ ಪ್ರಯೋಗಕ್ಕೆ ಬಾರದು. ಸಾಧಾ: ಅಕ್ಕಸಾಲಿಗರು ಚಿನ್ನ ಬೆಸೆಯುವದಕ್ಕೆ ಇದರ ಬೀಜ ತೇದು ಉಪಯೋಗಿಸುತ್ತಾರೆ; ಅದರಲ್ಲಿ ಒಳ್ಳೇ ಅಂಟು ಸಹ ಉಂಟು. ಚಿನ್ನ ತೂಗುವದಕ್ಕೂ ಆಗುತ್ತದೆ.

**Abrus precatorius,** *Lin.*—A. minor, *Desv.*—A. pauciflorus, *Desv.*—(Order Leguminosæ.)

*Tam.* Kunri. *Tel.* Gurigiṅja, gulivinda, kukkuṭamu. *Can.* Gulagañji, guruguñji, gulaguñji, guligañji-baḷḷi. *Tu.* Gurugoñji. *Mal.* Kunni, guñja. *Kon.* Gurguñji. *San.* Tulābījam, guñjā, raktikā.

[The true Liquorice is Glycyrrhiza glabra, *Lin.*—*Can.* Jyeshṭhamadhu, atimadhura.]



## 205. ಗುಲಾಬಿ ಗಿಡ (Rose).

ತು. ಗುಲಾಬು. ಮ. ಪನಿನೀರ್ಪು. ಕೊಂ. ಗುಲಾಬಿ.

ಹುಟ್ಟು: ನಟ್ಟು ಬೆಳೆಸುತ್ತಾರೆ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಹೂ ಕಾಯಿ ಬೀಜಗಳಿಗೆ ಒಗರು ಮತ್ತು ಬಲಕರ ಗುಣ. ಕಷಾಯ ಇಲ್ಲವೆ ಕಲ್ಕನೀರು ಅತಿಸಾರ ಅಜೀರ್ಣರೋಗಗಳಲ್ಲಿ ಉಪಯೋಗ. ಹೂವಿನಿಂದುಂಟಾಗುವ ಅತ್ತರೆಂಬ ಎಣ್ಣೆಯೂ ನೀರೂ ಕಣ್ಣುರೋಗಗಳಿಗೂ ಬೇರೆ ಔಷಧಗಳ ಸಮೇತ ವಿವಿಧ ದೋಷಗಳಿಗೂ ಬಳಿಸುತ್ತಾರೆ. ಸಾಧಾ: ಹೂ, ಅದರ ಎಣ್ಣೆಯೂ ಉತ್ತಮ ಪರಿಮಳ.

**Rosa centifolia,** *Lin.*—(Order Rosaceæ.)

*Can.* Gulābi-giḍa. *Tu.* Gulābu. *Mal.* Paninīrpu. *Kon.* Gulābi.

## 206. ಗುಳ್ಳ, ಬಿಳೀ ಗುಳ್ಳ ಗಿಡ.

ತೆ. ಮೊಲಕಾಯಿ. ತು. ಗುಳ್ಳಬದನೆ. ಮ. ವೆಳ್ಳುಟ್ಪಟುತಿನ. ಕೊಂ. ಗುಳ್ಳ.

ಹುಟ್ಟು: ಪಶ್ಚಿಮಪೂರ್ವ ತೀರಗಳು. ಪುಷ್ಪ: ಶ್ರಾವಣದಿಂದ ಆಶ್ವೀಜದ ವರೆಗೆ.

ಉಪಯೋಗ: ಔಷ: ಬೇರಿನ ಕಷಾಯ ವಾತಜ್ವರಕ್ಕೆ ಆಗುತ್ತದೆ. ಇದು ದಶಮೂಲಗಳಲ್ಲಿ ಒಂದು. ಸಾಧಾ: ಕಾಯಿಯಿಂದ ಬಜ್ಜಿ ಮುಂತಾದ ಪಲ್ಯ ಮಾಡುವರು.

**Solanum ferox,** *Lin.*—S. hirsutum, *Roxb.*—S. involucratum, *Blum.*—S. lasiocarpum, *Dunal.*—(Order Solanaceæ.)

*Tel.* Molakkāyi. *Can.* Guḷḷa, biḷē-guḷḷa-giḍa. *Tu.* Guḷḷabadane. *Mal.* Veḷḷottuvaḷutina. *Kon.* Guḷḷa.

## 207. ಗೆಣಸು (Yam).

### ೧. ಕುಂಟಗೆಣಸು (Common Yam).

**Dioscorea sativa,** *Lin.*—D. pulchella, *Roxb.*—(Order Dioscoreaceæ.)

*Can.* Kuṇṭageṇasu.

### ೨. ಮುಡಿಗೆಣಸು, ತೂನಗೆಣಸು, ದಂಡಾಲು (Pondicherry Potato, Yam).

ತ. ಪೆರುವಳ್ಳಿ. ತೆ. ಪೆಂಡಲಮು. ತು. ತೂನಕೆರೆಂಗ್. ಮ. ಕಾಚಿಲ್. ಕೊಂ. ಕೋನ.

**Dioscorea alata,** *Lin.*—(Order Dioscoreaceæ.)

*Tam.* Peruvaḷḷi. *Tel.* Peṇḍalamu. *Can.* Muḍigeṇasu, tūnageṇasu. *Tu.* Tūnakereṅgu. *Mal.* Kāčil. *Kon.* Kōna.

### ೩. ಮುಳ್ಳುಗೆಣಸು (Goa Potato).

ತು. ಮುಳ್ಳುಕೆರೆಂಗ್. ಮ. ಮುಳ್ಳಂಕಿಳಂಙ್. ಕೊಂ. ಕಾಂಟೆಕಣಂಗ.

**Dioscorea aculeata,** *Lin.*—(Order Dioscoreaceæ.)

*Can.* Biḷē-geṇasu, muḷḷu-geṇasu. *Tu.* Muḷḷukereṅgu. *Mal.* Muḷḷaṅkiḷaṅu. *Kon.* Kāṇṭe-kaṇaṅga.

### ೪. ಹೆಬ್ಬು, ದುಪ್ಪೆಗೆಣಸು.

ತು. ತುಪ್ಪೆಕೆರೆಂಗ್. ಕೊಂ. ಬಡ್ಡಿಕೋನ.

**Dioscorea atropurpurea,** *Roxb.*—(Order Dioscoreaceæ.)

*Can.* Hebbu, duppe-geṇasu. *Tu.* Tuppekereṅgu. *Kon.* Baḍḍikōna.

ಉಪಯೋಗ: ಔಷ: ಮುಡಿಗೆಣಸಿನ ಎಲೆ ಚೇಳುವಿಷಕ್ಕೆ ಆಗುತ್ತದೆ. ಗಡ್ಡೆಯ ಪುಡಿ ಹುಣ್ಣುಗಳಿಗೆ ಹಚ್ಚುವರು. ಸಾಧಾ: ಮೇಲಿನ ತರಗಳ ಗಡ್ಡೆ ಪಲ್ಯವಾಗಿದೆ. ಮುಡಿಗೆಣಸಿನ ಎಲೆಗಳಿಂದ ಉಪ್ಪು ಶುದ್ಧ ಮಾಡುತ್ತಾರೆ.

## 208. ಗೇರು, ತುರುಕಗೇರು ಮರ (Cashew Nut Tree).

ತ. ಮುಂದಿರಿಕ್ಕೈ, ಉತ್ತಂಬಲಮ್, ಚಿಗಿಡಿಮಾ, ಚಾರಮ್, ತಿರಿಗೈ. ತೆ. ಜೀಡಿಮಾಮಿಡಿ, ಮುಂತಮಾಮಿಡಿ. ತು. ಗೋಕುದ ಮರ. ಮ. ಕಪ್ಪಮಾವು, ಕಶುಮಾವು, ಪೊರ್ತುಕಿಮಾವು. ಕೊಂ. ಕಾಜ್ಜುರೂಕು. ಹಿಂ. ಕಾಜೂಕೆಝಾಡ್. ಸಂ. ಶೋಫಹರಾ.

ಹುಟ್ಟು: ತೀರಪ್ರಾಂತಗಳು. ಪುಷ್ಪ: ಪುಷ್ಯ, ಮಾಘ.

ಉಪಯೋಗ: ಔಷ: ಬೀಜವನ್ನು ವಸ್ತ್ರದಲ್ಲಿ ಕಟ್ಟಿ ಉಡಿಯಲ್ಲಿಟ್ಟುಕೊಳ್ಳುವದರಿಂದ ಕಣ್ಣಿನ ಉಷ್ಣಗುಣ. ಕಠಿಣ ವ್ರಣಗಳಿಗೆ ಸಿಪ್ಪೆಯ ಎಣ್ಣೆ ಒಂದು ಪಾಲಿಗೆ ಬೇರೆ

ಎಣ್ಣೆಯ ಒಂಭತ್ತು ಪಾಲು ಸೇರಿಸಿ ಹಚ್ಚುವರು. ಹಣ್ಣಿನ ರಸ ಜುಲಾಬು ನಿಲ್ಲಿಸುತ್ತದೆ; ಅದು ಬೀಗು ಇರುವವರಿಗೆ ಒಳ್ಳೇದು. ಈ ಮರದ ಬಂದಣಿಕೆ ಬಹುಮೂತ್ರಕ್ಕೆ ಆಗುತ್ತದೆ. ಸಾಧಾ: ಕಾಯಿ ಮತ್ತು ಬೀಜ ತಿನ್ನುತ್ತಾರೆ. ಮರದ ಸಿಪ್ಪೆಯಿಂದ ಒಳ್ಳೇ ಅಂಟು ದೊರಕುತ್ತದೆ. ಅದು ತಾಗಿಸಿದ ವಸ್ತುವಿಗೆ ನುಸಿ ಬೂಬು ಹತ್ತುವದಿಲ್ಲ. ಬೀಜದ ಸಿಪ್ಪೆಯ ಎಣ್ಣೆಯಿಂದ ವಸ್ತ್ರಕ್ಕೆ ಗುರುತು ಹಾಕುತ್ತಾರೆ; ಮರಕ್ಕೆ ಹಚ್ಚಿದರೆ, ಅದು ಕೊಳತು ಹೋಗದು, ಗೆದಲು ಹಿಡಿಯುವದಿಲ್ಲ. ಬೀಜದಿಂದ ಒಳ್ಳೇ ಎಣ್ಣೆ ತೆಗಿಯುತ್ತಾರೆ. ಚೆಕ್ಕೆ ಚರ್ಮ ಹದ ಮಾಡುವದಕ್ಕೂ ವಸ್ತ್ರಕ್ಕೆ ಬಣ್ಣ ಹಾಕುವದಕ್ಕೂ ಉಪಯೋಗ.

**Anacardium occidentale,** *Lin.*—(Order Anacardiaceæ.)

*Tam.* Mundirikai, uttambalam, čigiḍimā, čāram, tirigai. *Tel.* Jīḍimāmiḍi-muntamāmiḍi. *Can.* Gēru, turuka-gēru-mara. *Tu.* Gōkuda-mara. *Mal.* Kappa-māvu, kašu-māvu, portuki-māvu. *Kon.* Kājju-rūku. *Hin.* Kājūke-jhāḍ. *San.* Šōphaharā.

## 209. ಗೇರ್ಕಾಯಿ, ಕೇರ ಮರ (Marking Nut Tree).

ತ. ಶೆಂಗೋಟ್ಟೈಮರಮ್, ತಗಿಲಿಮಾ, ವೀರಶಾಕಿ, ಎರಿಮುಗಿ, ಶಾಯಿರಂಗ್. ತೆ. ಜೀಡಿಚೆಟ್ಟು, ಭಲ್ಲಾತಮು, ಭಲ್ಲಾತಕೀ. ತು. ತೇರೆದ ಮರ, ಗೇರ್‌ಕಾಯಿ. ಮ. ಚೇರ್‌ಮರ. ಕೊಂ. ಬಿಬ್ಬಯಿ. ಸಂ. ಅಗ್ನಿಮುಖಿ, ವ್ರಣಖ್ವತ್, ಕ್ಷತಾಕ್ಷತರು.

ಹುಟ್ಟು: ಘಟ್ಟಪ್ರಾಂತಗಳು. ಪುಷ್ಪ: ವೈಶಾಖದಿಂದ ಆಷಾಢದ ವರೆಗೆ.

ಉಪಯೋಗ: ಔಷ: ಸಿಪ್ಪೆಯ ಎಣ್ಣೆ ವಾತರೋಗಕ್ಕೂ ಕುಷ್ಠಕ್ಕೂ ಉಳುಕಿಗೂ, ಹಾಲಿನಲ್ಲಿ ಕುಡಿದರೆ ಕ್ರಿಮಿರೋಗಕ್ಕೂ, ಬೇಯಿಸಿ ತೆಗೆದ ಕಷಾಯ ಬಾಣಂತಿಗೂ ಜಾಗ್ರತೆಯಿಂದ ಉಪಯೋಗಿಸಬಹುದು. ಸಿಪ್ಪೆಯ ಬರೇ ಎಣ್ಣೆಗೆ ಬ್ಲಿಸ್ಟ್ರೀ ಗುಣ. ಸಾಧಾ: ಎಣ್ಣೆಯಿಂದ ವಸ್ತ್ರಗಳಿಗೆ ಗುರುತು ಹಾಕುವರು. ಬೀಜ ಹುಡಿ ಮಾಡಿ ಉಪ್ಪಿನ ಸಂಗಡ ಹುರಿದು ಹಲ್ಲು ತಿಕ್ಕುವದುಂಟು.

**Semecarpus Anacardium,** *Lin. f.*—Anacardium officinarum, *Gært.*—(Order Anacardiaceæ.)

*Tam.* Šeṅgōṭai-maram, tagilimā, vīrašāki, erimugi, šāyiraṅgu. *Tel.* Jīḍi-čeṭṭu, bhallātamu, bhallātakī. *Can.* Gērkāyi, kēra-mara. *Tu.* Tēreda-mara, gērukāyi. *Mal.* Čērumara. *Kon.* Bibbayi. *San.* Agnimukhi, vraṇakhvat, kshatā-kshataru.

## 210. ಗೋಣಿ ಮರ.

ತ. ವಿಗಾಯ್. ಹಿಂ. ಪಿಲೂ. ಸಂ. ಗೌಳಿ.

ಹುಟ್ಟು: ಪಶ್ಚಿಮ ಪೂರ್ವ ತೀರಗಳು. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ**: ಔಷ: ಚಕ್ಕೆಯ ಕಷಾಯ ಜ್ವರಕ್ಕೂ ಸೂತಿಕದ ಅಕ್ರಮಕ್ಕೂ ಕೊಡುತ್ತಾರೆ. ಬೇರಿನ ಚಕ್ಕೆ ಹಸಿಯಾದರೆ, ಚರ್ಮಕೆಂಪಿಗೆ (ಬ್ಲಿಸ್ಟ್ರಿ) ಆಗುತ್ತದೆ. ಕಾಯಿ ಸರ್ಪದಂಶಕ್ಕೆ ಒಳ್ಳೇದು. ಸಾಧಾ: ಬೀಜಕ್ಕೆ ಪರಿಮಳ. ಅದನ್ನು ಸಾಸಿವೇ ಬದಲಾಗಿ ಬಳಿಸುತ್ತಾರೆ.

**Salvadora persica**, *Lin.*—Cissus arborea, *Forsk.*—Embelia Grossularia, *Retz.*—(Order Salvadoraceæ.)

*Tam.* Vigāy. *Can.* Gōṇi-mara. *Hin.* Pilū. *San.* Gauḷi.

## 211. ಗೋಧಿ (Common Wheat).

ತ. ಗೋದುಮೈ. ತೆ ಗೋಧುಮಲು. ತು. ಗೋದಿ. ಮ. ಕೋತಂಪಮ್. ಕೊಂ. ಗವು. ಸಂ. ಮ್ಲೇಚ್ಛಭೋಜನ, ಗೋಧೂಮ, ಅಕ್ಷತ.

**ಉಪಯೋಗ**: ಔಷ: ಗೋಧಿ ಹಿಟ್ಟನ್ನು ನೀರಲ್ಲಿ ಕುಡಿದರೆ, ಪಾದರಸ ತಾಂಬ್ರ ಮುಂತಾದ ಲೋಹವಿಷ ಪರಿಹಾರವಾಗುತ್ತದೆ. ಅದನ್ನು ಉರಿಗೂ ಸುಟ್ಟ ಚರ್ಮಕ್ಕೂ ಹಚ್ಚುವದು ಒಳ್ಳೇದು. ಸಾಧಾ: "ಮ್ಲೇಚ್ಛರಿಗೆ" ಮಾತ್ರವಲ್ಲ, ಎಲ್ಲರಿಗೂ ಒಳ್ಳೇ ಭೋಜನ ಕೊಡುವಂಥ ಒಂದು ಧಾನ್ಯ. ಹೆಚ್ಚಾಗಿ ದಕ್ಷಿಣದಲ್ಲಿಯೂ ಉತ್ತರ ಹಿಂದುಸ್ಥಾನದಲ್ಲಿಯೂ ಕೃಷಿ ಮಾಡುತ್ತಾರೆ. ವಿಲಾಯತಿಯವರು ತಿನ್ನುವ ರೊಟ್ಟಿ ಇದರ ಹಿಟ್ಟಿನಿಂದಲೇ ಆಗುತ್ತದೆ.

**Triticum vulgare**, *Villars.*—(Order Gramineæ.)

*Tam.* Gōdumai. *Tel.* Gōdhumalu. *Can.* Gōdhi. *Tu.* Gōdi. *Mal.* Kōtampam. *Kōn.* Gavu. *San.* Mlēčšhabhōjana, gōdhūma, akshata.

## 212. ಗೋವ, ಪೇರಳ, ಚೇಪೆ ಮರ (Red Guava).

ತ. ಕೊಯ್ಯಾಪಳಮ್. ತೆ. ಗೊಯ್ಯಾಪಂಡು, ಜಾಮಪಂಡು. ತು. ಪೇರಂಗಾಯಿ. ಮ. ಮಲಂಪೇರ. ಕೊಂ. ಪೇರ. ಸಂ. ಪೇರಾಳ.

**ಹುಟ್ಟು**: ಮಲಬಾರತೀರ, ದಕ್ಷಿಣ. **ಪುಷ್ಪ**: ಮಾರ್ಗಶಿರ, ಪುಷ್ಯ.

**ಉಪಯೋಗ**: ಔಷ: ಬೇರು ಎಲೆಗಳು ಒಗರು ಮತ್ತು ಬಲಕರ ಗುಣ. ಎಲೆಗಳ ಕಷಾಯ ವಾಂತಿ ಮತ್ತು ಭೇದಿ ನಿಲ್ಲಿಸುತ್ತದೆ. ಸಾಧಾ: ಹಣ್ಣು ತಿನ್ನಬಹುದು.

**Psidium Guyava**, *Lin.*—P. pomiferum, *Lin.*—(Order Myrtaceæ.)

*Tam.* Koyyāpaḷam. *Tel.* Goyyāpaṇḍu, jāmapaṇḍu. *Can.* Gōva, pēraḷa, čēpe-mara. *Tu.* Pērangāyi. *Mal.* Malampēra. *Kōn.* Pēra. *San.* Pērāḷa.

## 213. ಚಂಡೇ, ಹೊಂಡೇ, ಮೊಂಡೇ ಮರ.

ತ. ಕಾಟರಳಿ. ತು. ತೆಂಡೆ ಮರ. ಮ. ಉತಳಂ, ಪೊಬ. ಕೊಂ. ಹೊಂಡ್ಯಾರೂಕು.

**ಹುಟ್ಟು**: ಮಬಾರತೀರ, ತಿರುವಂಕೋಡು. **ಪುಷ್ಪ**: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಎಲೆಗಳು ಮಲಭೇದಿ. ಸಾಧಾ: ಮರದಿಂದ ಹಾವುಗೆ ಮಾಡುತ್ತಾರೆ. ಕಾಯಿ ವಿಷ; ಅದನ್ನು ನಾಯಿಗೆ ಹಾಕಿದರೆ ಹಲ್ಲು ಬಿದ್ದು ಹೋಗುತ್ತವೆ.

**Cerbera Odollam,** *Gart.*—C. Manghu, *Lin.*—(Order Apocynaceæ.)

*Tam.* Kāṭaraḷi. *Can.* Čaṇḍē, hoṇḍē, moṇḍē-mara. *Tu.* Teṇḍe-mara. *Mal.* Utaḷam, poṅa. *Kon.* Hoṇḍyā-rūku.

## 214. ಚಂದ್ರಕಾಂತಿ (Moon Flower Creeper).

ತೆ. ನಗರಮುಕ್ಕಟ್ಟೆ. ಮ. ಮಣ್ಡವಳ್ಳಿ. ಕೊಂ. ಚಂದ್ರಕಾಂತಿ.

ಹುಟ್ಟು: ತೋಟಗಳು. ಪುಷ್ಪ: ಶ್ರಾವಣದಿಂದ ಆಶ್ವೀಜದ ವರೆಗೆ.

ಉಪಯೋಗ: ಔಷ: ಬೇರು ಬೀಜ ಎಲೆಗಳು ಸರ್ಪವಿಷಕ್ಕೆ ಆಗುತ್ತವೆ. ಸಾಧಾ: ಶೃಂಗಾರದ ಬಳ್ಳಿ.

**Ipomæa bona-nox,** *Lin.*—I. grandiflora, *R. S.*—(Order Convolvulaceæ.)

*Tel.* Nagaramukkaṭṭe. *Can.* Čandrakānti. *Mal.* Maṇḍavaḷḷi. *Kon.* Čandrakānti.

## 215. ಚಕ್ಲಿ, ಕೆರಕಪುಳ್ಳೀ, ಸೀಮೇಹುಣಸೆ ಮರ (Manilla Tamarind, Corkapuli).

ತ. ಕೊಡುಕ್ಕಪುಳಿ. ತೆ. ಶೀಮಚಿಂತ. ತು. ಚಕ್ಕುಲಿಮರ.

ಹುಟ್ಟು: ತೋಟಗಳು. ಪುಷ್ಪ: ಪುಷ್ಯ, ಮಾಘ.

ಉಪಯೋಗ: ಸಾಧಾ: ಕಾಯಿಯ ತಿರುಳು ತಿನ್ನಬಹುದು. ಮರ ಕೆಲಸಕ್ಕೆ ಆಗುತ್ತದೆ; ಬೇಲಿಗೆ ಬಹಳ ಒಳ್ಳೇದು.

**Pithecolobium dulce,** *Benth.*—Inga dulcis, *Willd.*—Mimosa ducis, *Roxb.*—(Order Leguminosæ.)

*Tam.* Koḍukkapuḷi. *Tel.* Šīmačinta. *Can.* Čakli, kērakapuḷḷē, sīme-huṇase-mara. *Tu.* Čakkuli-mara.

## 216. ಚದರಕಳ್ಳಿ, ಬೊಂತೆಕಳ್ಳಿ, ಜೆಡೆಕಳ್ಳಿ ಗಿಡ (Triangular Spurge).

ತ. ಚತುರಕಳ್ಳಿ, ವಜ್ಜಿರಮ್, ಚುದಾಜ್ಜಿ, ಕಣೀರವಮ್. ತೆ. ಬೊಮ್ಮಜೆಮುಡು, ಭೂಮಿಜೆಮುಡು, ಸಿಂಹುಂಡುಮು. ತು. ದಾರೇಕಳ್ಳಿ, ಕೋಡೆಕಳ್ಳಿ. ಮ. ಚತುರಕಳ್ಳಿ. ಕೊಂ. ಹೋಡಿ ನಿವಲಿ, ಚತುರಕಳ್ಳಿ. ಸಂ. ಸ್ನುಹಿ.

ಹುಟ್ಟು: ದಕ್ಷಿಣ ಹಿಂದುಸ್ಥಾನದ ಕಾಡುಗಳು. ಪುಷ್ಪ: ಮಾರ್ಗಶಿರ, ಪುಷ್ಯ.

ಉಪಯೋಗ: ಔಷ: ಸೊನೆಯು ಹಲ್ಲುನೋವಿಗೂ ವಾತರೋಗಕ್ಕೂ ಕಜ್ಜಿಗೂ ಆಗುತ್ತದೆ. ಅದರ ಸಂಗಡ ಹಾಕಿ ಕಾಸಿದ ಎಣ್ಣೆ ಗಂಡಮಾಲೆಗೆ ಬಹಳ ಉಪಯೋಗ; ವ್ರಣಗಳಿಗೆ ಹಚ್ಚುವದಕ್ಕೆ ಬಹಳವಾಗಿ ಉಪಯೋಗಿಸುತ್ತಾರೆ. ಇದಕ್ಕೆ ಎಣ್ಣೆ ಸೇರಿ

ದರೆ ವಿಷ; ಹೊಟ್ಟೆಯಲ್ಲಿ ಹ್ಯಾಗೂ ಕೊಡತಕ್ಕದ್ದಲ್ಲ. ಕಳ್ಳಿಯ ಹಗಿನು ವಾಂತಿ ಮಾಡಿಸುತ್ತದೆ. ಬೇರಿನ ಚೆಕ್ಕೆ ಮಲಭೇದಿ. ಬೇರನ್ನು ಅರದು ಇಂಗು ಕೊಡಿಸಿ, ಕ್ರಿಮಿಯುಳ್ಳ ಮಕ್ಕಳ ಹೊಟ್ಟೆಗೆ ಮುಲಾಮಾಗಿ ಹಚ್ಚುವರು. ದಂಟಿನ ಕಷಾಯ ಶ್ರೋಣಿತವಾತಕ್ಕೆ ಕೊಡುತ್ತಾರೆ; ಆದರೆ ಕೊಡುವಲ್ಲಿ ಬಹು ಜಾಗ್ರತೆಬೇಕು. ದಂಟು ಹುರಿದು ಪುಡಿ ಮಾಡಿ ಹಳೇ ವ್ರಣಗಳಿಗೆ ಹಚ್ಚುವದುಂಟು; ಅದನ್ನು ಒಲೆಯಲ್ಲಿ ಬೇಯಿಸಿ ಉಗುರುಸುತ್ತು ಉಳ್ಳವರಿಗೆ ಕಟ್ಟಬಹುದು.

**Euphorbia antiquorum,** *Lin.*—(Order Euphorbiaceæ.)

*Tam.* Čaturakaḷḷi, vaččiram, čudāčči, kaṉīravam. *Tel.* Bommajemuḍu, bhūmi-jemuḍu, simhunḍumu. *Can.* Čadarakaḷḷi, bontekaḷḷi, jeḍekaḷḷi-giḍa. *Tu.* Dārē-kaḷḷi, kōḍe-kaḷḷi. *Mal.* Čaturakaḷḷi. *Kon.* Hōḍi-nivali, čaturakaḷḷi. *San.* Snuhi.

## 217. ಚಪ್ಪರದವರೆ, ಗೋರಿಕಾಯಿ ಬಳ್ಳಿ, ಚವಳಿ ಬಳ್ಳಿ.

ತ. ಕೂತವರೈ. ತು. ದೊಂಪದಬರೆ. ಮ. ಪಂತಲವರ. ಕೊಂ. ವಾಲ್ಲಾಸಾಂಗೊ.

ಉಪಯೋಗ: ಸಾಧಾ: ಒಳ್ಳೇ ಪಲ್ಯ.

**Cyamopsis psoralioides,** *Dec.*—(Order Leguminosæ.)

*Tam.* Kūtavarai. *Can.* Čapparadavare, gōrikāyi-baḷḷi, čavaḷi-baḷḷi. *Tu.* Dompadabare. *Mal.* Pantalavara. *Kon.* Vāllāsāṅgo.

## 218. ಚಬುಕು ಮರ, ಕೇಸರಿಕೆ, ಸರವಿನ, ಗಾಳಿ ಮರ
(Casuarina, Tinian Pine, Beefwood Tree).

ತ. ಶಿವಮರಮ್. ತು. ಚಬುಕುಮರ. ಮ. ಚಬೋಕು, ಚೋಳಮರಮ್. ಕೊಂ. ಚಬ್ಕಿರೂಕು.

ಉಪಯೋಗ: ಸಾಧಾ: ಚೆಕ್ಕೆ ಬಣ್ಣಕ್ಕೆ ಆಗುತ್ತದೆ. ಮರ ಕೆಲಸಕ್ಕೆ ಒಳ್ಳೇದು. ಅದಕ್ಕೆ ಗೆದಲು ಹತ್ತುವದಿಲ್ಲ. ಅಡ್ಡದೊಲೆಯಾಗಿ ಭಾರ ಹೊರುವದರಲ್ಲಿ ಉತ್ತಮ ಮರ.

**Casuarina equisetifolia,** *Forst.*—C. muricata, *Roxb.*—(Order Casuarineæ.)

*Tam.* Šivamaram. *Can.* Čabuku-mara, kēsarike, saravina, gāḷi-mara. *Tu.* Čabuku-mara. *Mal.* Čabōku, čōḷa-maram. *Kon.* Čabki-rūku.

## 219. ಚಲಿಬೀಜ, ಚಿತ್ತುಬೀಜ, ಚಿಲ್ಲಿಯ ಮರ (Clearing Nut Tree).

ತ. ತೆತ್ತಾಮರಮ್, ತೆತ್ತಾಂಕೊಟ್ಟೈ, ಅಕ್ಕೋಲಮ್. ತೆ. ಚಿಲ್ಲಚೆಟ್ಟು, ಕತಕಮು, ಇಂದುಪು. ಮ. ತೇಟ್ಟಾಮರಮ್. ಕೊಂ. ಚಲಬೀಯಿ. ಸಂ. ಬತಕ, ಕತಕ.

ಹುಟ್ಟು: ಘಟ್ಟಗಳು. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ಬೀಜವನ್ನು ಪುಡಿ ಮಾಡಿ ಜೇನುತುಪ್ಪದಲ್ಲಿ ಕುರು ವ್ರಣಗಳಿಗೂ, ಹಾಲಿನಲ್ಲಿ ಉರಿಗಣ್ಣಿಗೂ ಹಚ್ಚುತ್ತಾರೆ. ಬೀಜ ಬಹುಮೂತ್ರಕ್ಕೆ ಸಹ ಉಪ

ಯೋಗ. ಸಾಧಾ: ಕಾಯಿ ತಿನ್ನುತ್ತಾರೆ. ಬೀಜದಿಂದ ನೀರು ಮತ್ತು ನೀರಿನ ಪಾತ್ರೆಗಳು ನಿರ್ಮಲವಾಗುತ್ತವೆ; ಅದರಲ್ಲಿ ಅಂಟು ಸಹ ಉಂಟು.

**Strychnos potatorum,** *Lin.*—St. Tettankotta, *Retz.*—(Order Loganiaceæ.)

*Tam.* Tettāmaram, tettāṅkoṭṭai, akkōlam. *Tel.* Čillačeṭṭu, katakamu, indupu. *Can.* Čalibīja, čittubīja, čilliya-mara. *Mal.* Tēṭṭāmaram. *Kon.* Čilabīyi. *San.* Khataka, kataka.

## 220. ಚಾ ಗಿಡ (Tea Shrub).

ಕೆಲವು ವರುಷಗಳ ಇತ್ತಲಾಗೆ ಈ ಗಿಡವನ್ನು ನೀಲಗಿರಿಗಳಲ್ಲಿಯೂ ಬಂಗಾಳದ ಕೆಲವು ಬೆಟ್ಟ ಸೀಮೆಗಳಲ್ಲಿಯೂ ಬಹಳವಾಗಿ ನೆಟ್ಟು ಬೆಳಿಸುತ್ತಾರೆ. ಅದರ ಒಣ ಎಲೆಗಳಿಂದ ಚಾ ಎಂಬ ಒಳ್ಳೇ ಪಾನಕ ಮಾಡುತ್ತಾರೆ.

**Camellia theifera,** *Griff.*—Thea chinensis, *Lin.*—(Order Ternströmiaceæ.)

*Can.* Čā-giḍa.

## 221. ಚಾಯಿಬೇರು, ಚಿರಿವೇರು ಗಿಡ (Indian Madder).

ತ. ಚಾಯವೇರ್, ಇಂಬೂರಲ್. ತೆ. ಚಿರಿವೇರ್. ಮ. ಚಾಯವೇರ್.

ಹುಟ್ಟು: ಸಮುದ್ರತೀರ, ಲಂಕಾ, ರಾಮೇಶ್ವರ.

ಉಪಯೋಗ: ಔಷ: ಎಲೆಗಳು ಶ್ಲೇಷ್ಮ ಬಿಡಿಸುವದಕ್ಕೂ ಶ್ವಾಸಕಟ್ಟಿಗೂ ಕ್ಷಯ ರೋಗಕ್ಕೂ ಉಪಯೋಗ. ಸಾಧಾ: ಬೇರಿನ ಸಿಪ್ಪೆಯಲ್ಲಿ ವಿಶೇಷ ಕೆಂಪು ಬಣ್ಣ ಉಂಟು. ಈ ಗಿಡವನ್ನು ಸಮುದ್ರತೀರದ ಉಸುಬಿನಲ್ಲಿ ಬೆಳಿಸಬಹುದು.

**Oldenlandia umbellata,** *Lin.*—Hedyotis umbellata, *Lam.*—(Order Rubiaceæ.)

*Tam.* Čāyavēr, imbūral. *Tel.* Čirivēr. *Can.* Čāyibēru, čirivēru-giḍa. *Mal.* Čāyavēr.

## 222. ಚಾಹುಲ್ಲು, ಶುಂಠಿ, ಬೋದೆ, ಸಂಬಾರಹುಲ್ಲು (Roussa Grass, Ginger Grass).

ತ. ಶುಕ್ಕುನಾರಿಪ್ಪುಲ್. ಮಹಾ. ರೋಷ್. ಸಂ. ಭೂಸ್ತೃಣ.

ಹುಟ್ಟು: ಹೆಚ್ಚಾಗಿ ದಖ್ಖಣ.

ಉಪಯೋಗ: ಔಷ: ಸುಗಂಧವುಳ್ಳ ಈ ಹುಲ್ಲಿನ ಎಣ್ಣೆ (ರೋಷಕತೈಲ) ವಾತಕ್ಕೆ ಬಹು ಒಳ್ಳೇದು. ರೋಗಿಗಳಿಗೆ ಕೂದಲು ಉದುರಿಹೋಗದ ಹಾಗೆ ಅದನ್ನು ತಲೆಗೆ ಹಚ್ಚುವರು.

**Andropogon Martini,** *Roxb.*—(Order Gramineæ.)

*Tam.* Šukkunārippul. *Can.* Čā-hullu, šuṇṭhi, bōde, sambāra-hullu. *Mah.* Rōsh. *San.* Bhūstṛiṇa.

## 223. ಚಿಟ್ಟಾಮಟ್ಟಿ, ಅಂಟುತೊಗರಿ ಗಿಡ.

ತ. ಶಿತ್ತಾಮಟ್ಟಿ. ತೆ. ಚಿನ್ನಮುತ್ತವಪುಲಗಮ್.

ಹುಟ್ಟು: ದಕ್ಷಿಣ ಹಿಂದುಸ್ಥಾನವೂ ದಖ್ಖಣವೂ. ಪುಷ್ಪ: ಆಷಾಢದಿಂದ ಭಾದ್ರಪದದ ವರೆಗೆ.

ಉಪಯೋಗ: ಔಷ: ಬೇರಿನ ಕಷಾಯ ಜ್ವರಕ್ಕೆ ಆಗುತ್ತದೆ.

**Pavonia zeylanica,** *Cav.*—Hibiscus zeylanicus, *Lin.*—(Order Malvaceæ.)

*Tam.* Šittāmaṭṭi. *Tel.* Činnamuttavapulagam. *Can.* Čiṭṭāmaṭṭi, aṇṭu-togari-giḍa.

## 224. ಚಿಟಿಪಾಲ ಮರ (Three-nerved Zizyphus).

ತ. ಕರುಕ್ಕುವಾಳಿ, ಕಡಿಕ್ಕೈ. ತೆ. ಕಾಕುಪಾಲ.

ಹುಟ್ಟು: ಮೈಸೂರ ಸೀಮೆ. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ಎಲೆಗಳ ಕಷಾಯ ರಕ್ತಶುದ್ಧಿಗಾಗುತ್ತದೆ.

**Zizyphus glabrata,** *Heyne.*—Z. trinervia, *Roxb.*—(Order Rhamneæ.)

*Tam.* Karukkuvāḷi, kadikkai. *Tel.* Kākupāla. *Can.* Čiṭipāla-mara.

## 225. ಚಿತ್ರಮೂಲ.

*a)* ಕೆಂಪು ಚಿತ್ರಮೂಲ (Rose-coloured Leadwort).

ತ. ಚಿತ್ತಿರಮೂಲಮ್, ಅಕ್ಕಿನಿ, ಶೆಙ್ಕೊಡಿವೇಲಿ. ತೆ. ಎರ್ರಚಿತ್ರಮೂಲಮು. ತು. ಕೆಂಪು ಚಿತ್ರಮೂಲ. ಮ. ಚೆಕ್ಕಿಕೊಟುವೇರಿ. ಕೊಂ. ತಾಮ್ಡೆ ಚಿತ್ರಮೂಲ. ಹಿಂ. ಲಾಲ್ಚೀತ. ಸಂ. ಚಿತ್ರವಿಲ್ಲ, ದೀಪಿಕಾ, ದಾರುಣಂ, ವಹ್ನಿಮೂಲ, ಚಿತ್ರಕಃ.

ಹುಟ್ಟು: ತೋಟಗಳು. ಪುಷ್ಪ: ಫಾಲ್ಗುಣದಿಂದ ಆಷಾಢದ ವರೆಗೆ.

ಉಪಯೋಗ: ಔಷ: ಬೇರು ವಾತಕ್ಕೂ ಪಕ್ಷವಾತಕ್ಕೂ ನಂಜಿಗೂ ಕುಷ್ಠಕ್ಕೂ ಬೀಗಿಗೂ ಹಲ್ಲುನೋವಿಗೂ ಆಗುತ್ತದೆ; ಅದನ್ನು ಅರದು ಮೈಭಾಗಕ್ಕೆ ಇಟ್ಟು ಕಟ್ಟಿದರೆ, ಬ್ಲಿಸ್ಟ್ರಿಗುಣ (ಚರ್ಮಕೆಂಪಿ). ಬೇರು ಶುದ್ಧ ಮಾಡದೆ ಮಿತಿಮೀರಿ ತಕ್ಕೊಂಡರೆ, ವಿಷ. ಎಲೆಗಳನ್ನು ವಾಳಗಳಿಗೆ ಮುಲಾಮಾಗಿ ಹಚ್ಚುವದು ಒಳ್ಳೇದು. ಸಾಧಾ: ತೋಟಗಳಲ್ಲಿ ಅಲಂಕಾರಕ್ಕಾಗಿ ನೆಟ್ಟು ಬೆಳಿಸುತ್ತಾರೆ.

**Plumbago rosea,** *Lin.*—(Order Plumbagineæ.)

*Tam.* Čittiramūlam, akkini, šeṅkoḍivēli. *Tel.* Erračitramūlamu. *Can.* Kempu-čitramūla. *Tu.* Kempu-čitramūla. *Mal.* Čekkikoṭuvēri. *Kon.* Tāmḍe-čitramūla. *Hin.* Lālčīta. *San.* Čitravilla, dīpikā, dāruṇam, vahnimūla, čitrakaḥ.

*b)* ಬಿಳೀ ಚಿತ್ರಮೂಲ (Ceylon Leadwort).

ತ. ಕೊಡಿವೇಲಿ, ಅದಿಕನಾರಿ, ಚಿತ್ತಿರಗಮ್, ಕಾರಿಮೈ. ತೆ. ಅಗ್ನಿಮಾತ, ಚಿತ್ರಮೂಲಮು. ತು. ಬೊಲ್ದು ಚಿತ್ರಮೂಲ. ಮ. ತೀ, ತುಂಪಕೊಟುವೇಲಿ, ವೆಳ್ಳಕೊಟುವೇರಿ. ಕೊಂ. ಧವೆ ಚಿತ್ರಮೂಲ.

**ಹುಟ್ಟು**: ಪಶ್ಚಿಮತೀರ, ಬಂಗಾಳ. **ಪುಷ್ಪ**: ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ**: ಔಷ: ಹಸಿ ಚೆಕ್ಕೆ ನೀರಿನಲ್ಲಿ ಅರದು ಗಂಜಿ ವಾಳಗಳಿಗೆ ಮುಲಾಮಾಗಿ ಹಚ್ಚುವರು. ಬೇರಿನ ಚೆಕ್ಕೆಯ ಸತ್ವ ಆಹಿಕಜ್ವರದಲ್ಲಿ ಉಪಯೋಗ; ಅದು ಮೈಬೆವರುವ ಹಾಗೆ ಮಾಡುತ್ತದೆ. ಇದಲ್ಲದೆ ಕೆಂಪು ಚಿತ್ರಮೂಲಕ್ಕೆ ಬದಲಾಗಿ ಬಿಳೀತರ ಉಪಯೋಗಿಸುವರು; ಮಾತ್ರ ಇದರ ಬಲ ಕಡಿಮೆ.

**Plumbago zeylanica,** *Lin.*—P. flaccida, *Mœnch.*—(Order Plumbagineæ.)

*Tam.* Koḍivēli, adikanāri, čittiragam, kārimai. *Tel.* Agnimāta, čitramūlamu. *Can.* Biḷī-čitramūla. *Tu.* Boldu-čitramūla. *Mal.* Tī, tumpakoṭuvēli, veḷḷakoṭuvēri. *Kon.* Dhave-čitramūla.

226. **ಚಿನ್ನಿಮರ** (Birch-leaved Acalypha).

ತ. ಚಿನ್ನಿ. ತೆ. ಚಿನ್ನಾಕು.

**ಹುಟ್ಟು**: ಹೆಚ್ಚಾಗಿ ದಕ್ಷಿಣ, ಮೈಸೂರು.

**ಉಪಯೋಗ**: ಔಷ: ಎಲೆಗಳ ಕಷಾಯ ಅಜೀರ್ಣಕ್ಕೂ ಹೊಟ್ಟೇ ಅಕ್ರಮಕ್ಕೂ ವಾಂತಿಭೇದಿಗೂ ಉಪಯೋಗ; ಶರೀರಸ್ಥಿತಿ ತಿದ್ದುವಂಥಾದ್ದು.

**Acalypha fruticosa,** *Forsk.*—A. betulina, *Retz.*—(Order Euphorbiaceæ.)

*Tam.* Činni. *Tel.* Činnāku. *Can.* Činni-mara.

227. **ಚಿರ್ರ್ಯಾತ, ಕಿರಿಯಾತು ಗಿಡ** (Chiretta, Gentian).

ತ. ಚಿರಾಯತು. ತು. ಕಿರಿಯಾತ್. ಮ. ಕಿರಿಯಾತ್ತ್. ಕೊಂ. ಜರಾತ್ತೆ. ಸಂ. ಕಿರಾತನಾಮಾ, ಹೈಮ, ಸುವರ್ಣಭೂಮಿಜ.

**ಹುಟ್ಟು**: ಉತ್ತರ ಹಿಂದುಸ್ಥಾನ; ಅಂಗಡಿಗಳಲ್ಲಿ ದೊರೆಯುವದು.

**ಉಪಯೋಗ**: ಔಷ: ಇದು ಹೊಟ್ಟೆಯ ಅಕ್ರಮಕ್ಕೂ ಜ್ವರಕ್ಕೂ ಕ್ರಿಮಿರೋಗಕ್ಕೂ ಅನ್ನಕೋಶದ ಮಂದತ್ವಕ್ಕೂ ಅಜೀರ್ಣಕ್ಕೂ ವಾಯುವಿಗೂ ಶ್ರೋಣಿತವಾತಕ್ಕೂ ಆಗುವಂಥ ವಿಶೇಷ ಔಷಧ. ಊರುಕಿರಿಯಾತೆಂಬ ನೆಲಬೇವಿನ ಗುಣವುಳ್ಳದ್ದು; ಆದರೆ, ಅದಕ್ಕಿಂತ ಬಲವುಳ್ಳದ್ದಾಗಿದೆ. ಕಷಾಯವಲ್ಲ, ಕಲ್ಕನೀರನ್ನು ಉಪಯೋಗಿಸುವದು ಒಳ್ಳೇದು. ಜ್ವರಕ್ಕೆ ಕೊಡುವದಾದರೆ, ಗಜಿಗೆಕಾಯಿ ಸಹ ಕೂಡಿಸಬಹುದು. ಬೀಗಿಗೆ ಮೂಲವಾಗಿರುವ ಬಲಹೀನತ್ವಕ್ಕಾದರೆ, ಕಿರಿಯಾತಿನ ಸತ್ವಕ್ಕೆ ಕಿತ್ತಳೇಹಣ್ಣಿನ ಸಿಪ್ಪೆ ಮತ್ತು ಏಲಕ್ಕಿ ಸೇರಿಸುವರು.

**Swertia Chirata,** *Ham.*—Gentiana Chirayita, *Roxb.*—G. Chirata, *Wall.*—Agathotes Chirata, *D. Don.*—Ophelia Chirata, *Griseb.*, *Dec.*—(Order Gentianaceæ.)

*Tam.* Čirāyatu. *Can.* Čiryāta, kiriyātu-giḍa. *Tu.* Kiriyātu. *Mal.* Kiriyāttu. *Kon.* Jirātte. *San.* Kirātanāmā, haima, suvarṇabhūmija.

## 228. ಚುಂಚಲ ಗಿಡ (Jute Plant).

**ಹುಟ್ಟು:** ಗಂಗಾ ಮತ್ತು ಬ್ರಹ್ಮಪುತ್ರ ನದಿಗಳ ತಗ್ಗು ಸೀಮೆಗಳಲ್ಲಿಯೂ ಅಸ್ಸಾಮ ಮತ್ತು ಮದ್ರಾಸ ಸಂಸ್ಥಾನಗಳ ತಂಪಾದ ಪ್ರದೇಶಗಳಲ್ಲಿಯೂ.

**ಉಪಯೋಗ:** ಇದರ ನಾರಿನಿಂದ ಗೋಣಿಗಳನ್ನು ಮಾಡುತ್ತಾರೆ.

**Corchorus olitorius,** *Lin.*—(Order Tiliaceæ.)

*Can.* Čuñčala-giḍa.

## 229. ಚೇಳುಕೊಂಡಿ, ಆನೆಕಿವಿ, ಗಜಕರ್ಣ (Common Maiden Hair Fern).

**ಹುಟ್ಟು:** ಮಳೆಕಾಲದಲ್ಲಿ ಎಲ್ಲೆಲ್ಲಿಯೂ ಸಿಕ್ಕುವದು.

**ಉಪಯೋಗ:** ಔಷ: ಒಗರು ಗುಣ. ಕತ್ತಿ ಮುಂತಾದ್ದರಿಂದ ಘಾಯವಾದರೆ, ಈ ಗಿಡದ ಸೊಪ್ಪನ್ನು ತಂದು ಸುಣ್ಣದೊಡನೆ ನಯವಾಗಿ ಅರೆದು ಘಾಯಕ್ಕೆ ಹಚ್ಚಿದರೆ, ಬೇಗನೇ ಒಣಗುವದು. ಇಲ್ಲವೆ ಸೊಪ್ಪನ್ನು ತಂದು ನಯವಾಗಿ ಅರೆದು ಎಳ್ಳೆಣ್ಣೆಯನ್ನು ಹಾಕಿ ಬಿಸಿ ಮಾಡಿಟ್ಟುಕೊಂಡು, ಘಾಯ ಮುಂತಾದ ವ್ರಣಗಳಿಗೆ ಹಚ್ಚಿದರೆ, ಒಣಗುವವು.

**Adiantum caudatum,** *Lin.*—(Order Filices.)

*Can.* Čēḷukoṇḍi, āne-kivi, gajakarṇa.

## 230. ಚೇಳುಬಾಲದ ಗಿಡ, ಚೇಳುಕೊಂಡಿ, ಚೇಳುಮಣಿ ಗಿಡ (Indian Turnsole).

ತ. ನೇಲ್ಕೊಡುಕಿ, ನಕ್ಕಿಪ್ಪೂ. ತೆ. ಗುರುಗು, ಭೂರುಂಡಿ. ತು. ಚೇಲಕಡೆ. ಮ. ವೇನವಪ, ತೇಳ್ ಕಟ. ಸಂ. ಭೂವೃಶ್ಚಿತಾಳಿ, ನಕ್ರಾರಿ, ವಿಷಘ್ನ, ಅಮರದಾರು.

**ಹುಟ್ಟು:** ಪಶ್ಚಿಮತೀರ, ಚಿತ್ತಗೊಂಗ್. ಗದ್ದೆಗಳ ಬದಿಯಲ್ಲಿ ಬೆಳೆಯುತ್ತದೆ. **ಪುಷ್ಪ:** ಚೈತ್ರದಿಂದ ಕಾರ್ತಿಕದ ವರೆಗೆ.

**ಉಪಯೋಗ:** ಔಷ: ಒಗರು ಗುಣ. ಎಲೆಗಳ ರಸ ಕುರು ಮೊಡವೆಗಳಿಗೂ ಕಣ್ಣುರೋಗಕ್ಕೂ, ಘಾಯ ವ್ರಣಗಳನ್ನು ಶುಚಿ ಮಾಡುವದಕ್ಕೂ ಉಪಯೋಗ. ಹರಳೆಣ್ಣೆಯೊಡನೆ ಬೇಯಿಸಿದರೆ, ಅದು ವಿಷಹರ; ಉರಿಬಾವಿಗೂ ಒಳ್ಳೇದು. ಬೇರಿನ ಕಷಾಯ ಕೆಮ್ಮಿಗೂ ಜ್ವರಕ್ಕೂ ಗಂಟ್ಲಿನ ಕಫಕ್ಕೂ ತಕ್ಕದ್ದು.

**Heliotropium indicum,** *Lin.*—H. cordifolium, *Mœnch.*—H. hispidum, *Banks.*—Tiaridium indicum, *Dec.*—(Order Boragineæ.)

*Tam.* Nēlkoḍuki, nakkipū. *Tel.* Gurugu, bhūrunḍi. *Can.* Čēḷubālada-giḍa, čēḷukonḍi, čēḷumaṇi-giḍa. *Tu.* Čēlakaḍe. *Mal.* Vēnapača, tēḷukaṭa. *San.* Bhūvṛiščitāḷi, nakrāri, vishaghna, amaradāru.

## 231. ಜಂಬುನೇರಳು ಮರ (Rose Apple).

ತು. ಜಂಬುನೇರೊಳು. ಕೊಂ. ಪನ್ನೀರಜಾಂಬ. ಹಿಂ. ಗುಲಾಬಿಜಾಮೂನ್.

ಉಪಯೋಗ: ಸಾಧಾ: ಹಣ್ಣು ತಿನ್ನಲಿಕ್ಕೆ ಒಳ್ಳೇದು. ಅದನ್ನು ಬೀಜ ತೆಗದು ನಾಲ್ಕು ಸರ್ತಿ ಭಟ್ಟಿ ಇಟ್ಟರೆ, ಗುಲಾಬಿನೀರಿಗೆ ಸರಿಯಾದ ಸುಗಂಧದ ನೀರು ದೊರಕುತ್ತದೆ.

**Eugenia Jambos,** *Lin.*—Jambosa vulgaris, *Dec.*—Myrtus Jambos, *Kth.*—(Order Myrtaceæ.)

*Can.* Jambunēraḷu-mara. *Tu.* Jambunēroḷu. *Kon.* Pannīrjāmba. *Hin.* Gulābijāmūn.

## 232. ಜವೆಗೋದಿ, ಯವ (Barley).

ತೆ. ಯವಲು. ಕೊಂ. ಬಾಜ್ರಿ, ಬಾರ್ಲಿ. ಸಂ. ಯವ.

ಇದು ನೆಟ್ಟು ದಕ್ಷಿಣದಲ್ಲಿ ಬೆಳಿಸುವದೊಂದು ಧಾನ್ಯ. ಅದರ ಗಂಜಿಯು ರೋಗಿಗಳಿಗೆ ಒಳ್ಳೇ ಪಥ್ಯಕರ ಆಹಾರ. ಕಾಳು ಹುರಿದು ಹುಡಿ ಮಾಡಿ ಬೇಯಿಸಿದರೆ, (ಕಾಫಿಯಂತೆ) ನಿರ್ದೋಷವಾದ ಪಾನಕವಾಗುವದು.

**Hordeum vulgare,** *Lin.*—H. sativum, *Pers.*—(Order Gramineæ.)

*Tel.* Yavalu. *Can.* Javegōdi, yava. *Kon.* Bājri, bārli. *San.* Yava.

## 233. ಜಾಜಿಕಾಯಿ ಮರ (Nutmeg Tree).

ತ. ಜಾದಿಕಾಯ್. ತೆ. ಜಾಜಿಕಾಯ. ತು. ಜಾಜಿಕಾಯಿ. ಮ. ಜಾತಿಕಾಮರಂ. ಕೊಂ. ಜಾಯಿಫಲ. ಹಿಂ. ಜಾಯಿಫಲ್. ಸಂ. ಘಟಸ್ಥ.

ಹುಟ್ಟು: ಮಲಬಾರದಲ್ಲಿ ಈ ಮರವನ್ನು ಸ್ವಲ್ಪವಾಗಿ ನೆಟ್ಟು ಬೆಳಿಸುತ್ತಾರೆ.

ಉಪಯೋಗ: ಔಷ: ಉದರವಾಯುವಿಗಾಗುತ್ತದೆ. ಕಾಯಿ ಜಜ್ಜಿ ಬೇಯಿಸಿದರೆ, ವ್ರಣಗಳಿಗೂ ವಾತರೋಗಕ್ಕೂ ಆಗುವಂಥಾ ಒಂದು ಎಣ್ಣೆ ದೊರಕುತ್ತದೆ.

**Myristica fragrans,** *Houtt.*—M. moschata, *Thunb.*—M. aromatica, *Lam.*—M. officinalis, *Lin. fil.*—(Order Myristiceæ.)

*Tam.* Jādikāy. *Tel.* Jājikāya. *Can.* Jājikāyi-mara. *Tu.* Jājikāyi. *Mal.* Jātikāmaram. *Kon.* Jāyiphala. *Hin.* Jāyiphal. *San.* Ghaṭastha.

### 234. ಜಾಜಿಮಲ್ಲಿಗೆ, ಆನೆಮಲ್ಲಿಗೆ.

ತು. ಜಾಜಿಪೂ. ಮ. ಪಿಚ್ಚಕಮ್, ಮಾಲತಿ. ಕೊಂ. ಜಾಯ್ಚೆಮೊಗ್ರೆ.

**ಉಪಯೋಗ:** ಸಾಧಾ: ಅಲಂಕಾರದ ಮತ್ತು ಪರಿಮಳದ ಹೂ.

**Jasminum grandiflorum,** *Lin.*—(Order Oleaceæ.)

*Can.* Jājimallige, ānemallige. *Tu.* Jājipū. *Mal.* Piččakam, mālati. *Kon.* Jāyčemogre.

### 235. ಜಾಪಾಳದ, ನೇಪಾಳದ, ನೇರ್ವಾಳದ ಗಿಡ (Croton Oil Plant).

ತ. ನೇರ್ವಾಳಮ್, ಚಿದುರಮ್, ತೆಂಡಿ. ತೆ. ನೇಪಾಳವೇಮು. ತು. ಬ್ಯಾರಿಬಿತ್ತ್. ಮ. ನೀರ್ವಾಳಮ್. ಕೊಂ. ಜಾಫಲ. ಹಿಂ. ಜಮಾಲಗೋಟ್. ಸಂ. ನೇಪಾಳ.

**ಹುಟ್ಟು:** ಪಶ್ಚಿಮ ಪೂರ್ವ ತೀರಗಳು. **ಪುಷ್ಪ:** ಚೈತ್ರದಿಂದ ಜ್ಯೇಷ್ಠದ ವರೆಗೆ.

**ಉಪಯೋಗ:** ಔಷ: ಉದರವ್ಯಾಧಿಗೂ ಕಾಸಶ್ವಾಸಕ್ಕೂ ಬೀಗಿಗೂ ಅಪಸ್ಮಾರಕ್ಕೂ ಶುದ್ಧ ಮಾಡಿದ ಇದರ ಬೀಜದ ಲೇಶಾಂಶವನ್ನು ಹೊಟ್ಟೆಗೆ ಕೊಡುತ್ತಾರೆ. ಕಾಸಿದ ಎಣ್ಣೆ ವಾತರೋಗಕ್ಕೆ ಹಚ್ಚುವದು ಒಳ್ಳೇದು. ಅರದ ಎಲೆಗಳನ್ನು ನೀರಿನಲ್ಲಿ ತಕ್ಕೊಂಡರೆ, ಭೇದಿಯಾಗುತ್ತದೆ. ಒಜ್ಜಿದ ಬೀಜ ಜೇನಿನ ಸಂಗಡ ವಾಳಗಳಿಗೆ ಲೇಪಿಸುವರು. ತೇದ ಚೆಕ್ಕೆ ಮೈಬೆವರುವ ಹಾಗೂ ವಾಂತಿಯಾಗುವ ಹಾಗೂ ಮಾಡುವದು. ಒಣಗಿಸಿದ ಬೀಜವೂ ಎಲೆಗಳೂ ತೇದು ಹಚ್ಚಿದರೆ, ಸರ್ಪವಿಷಕ್ಕೆ ಆಗುತ್ತವೆ. ಈ ಬೀಜವಾಗಲೀ ಇದರ ಎಣ್ಣೆಯಾಗಲೀ ಉಪಯೋಗಿಸುವದರಲ್ಲಿ ಬಹಳ ಜಾಗ್ರತೆ ಇರಬೇಕು; ವೈದ್ಯಪಂಡಿತರಲ್ಲದೆ, ಅದರ ಗುಣದೋಷ ತಿಳಿಯದವರು ಪ್ರಯೋಗಿಸಿದರೆ, ವಿಷವಾಗುವದು.

**Croton Tiglium,** *Lin.*—C. Jamalgota, *Hamilt.*—(Order Euphorbiaceæ).

*Tam.* Nērvāḷam, čiduram, tendi. *Tel.* Nēpāḷavēmu. *Can.* Jāpāḷada, nēpāḷada, nērvāḷada-giḍa. *Tu.* Byāribittu. *Mal.* Nīrvāḷam. *Kon.* Jāphala. *Hin.* Jamālagōṭ. *San.* Nēpāḷa.

### 236. ಜಾಮುಫಲದ ಮರ, ಪೇರ್ಲ ಮರ (White Guava).

ತ. ಕೊಯ್ಯಾಮರಮ್. ತೆ. ಜಾಮಚೆಟ್ಟು. ತು. ಪೇರಂಗಾಯಿಮರ. ಮ. ಪೇರ, ಕೊಯ್ಯಾಮರಮ್. ಕೊಂ. ಪೇರೀರೂಕು.

**ಹುಟ್ಟು:** ತೋಟಗಳು. **ಪುಷ್ಪ:** ಕಾರ್ತಿಕ, ಮಾರ್ಗಶಿರ.

**ಉಪಯೋಗ:** ಔಷ: ಬೇರಿನ ಚೆಕ್ಕೆ ಒಗರು ಗುಣ; ಅದರ ಕಷಾಯ ಮಕ್ಕಳ ದೀರ್ಘಕಾಲದ ಅತಿಸಾರದಲ್ಲಿ ಫಲಕರವಾದ್ದು. ಸಾಧಾ: ಹಣ್ಣು ತಿನ್ನುತ್ತಾರೆ. ಮರ ಘಟ್ಟಿಯಾಗಿದೆ; ನಯವಾದ ಕೆತ್ತಿಗೆಕೆಲಸಕ್ಕೆ ಒಳ್ಳೇದು.

**Psidium Guyava,** *var. pyriferum, Lin.*—Guaiava pyriformis, *Gært.*—(Order Myrtaceæ.)

*Tam.* Koyyāmaram. *Tel.* Jāmačeṭṭu. *Can.* Jāmaphalada-mara, pērla-mara. *Tu.* Pērangāyi-mara. *Mal.* Pēra, koyyāmaram. *Kon.* Pērirūku.

## 237. ಜಾರಿಗೆಹುಳಿ, ಕಣ್ಕುಟಿಗ, ದೇವನಹುಳಿ, ಅರಸಿನಗುರ್ಗಿ ಮರ (Mysore Gamboge Tree).

ತ. ಮುಕ್ಕಿ. ತು. ಜಾರಿಗೆಪುಳಿ. ಮ. ಚಿಗಿರಿ, ಮಕ್ಕಿ. ಕೊಂ. ವಟಾಂಬ.

ಹುಟ್ಟು: ಮಲಬಾರ ತೀರ, ಮೈಸೂರು. ಪುಷ್ಪ: ಮಾಘ.

ಉಪಯೋಗ: ಔಷ: ಎಣ್ಣೆ ಬೆಂದ ಹುಣ್ಣಿಗೆ ಒಳ್ಳೇದು. ಸಾಧಾ: ಅರಸಿನ ಬಣ್ಣದ ಅಂಟು ಕೊಡುತ್ತದೆ. ಎಣ್ಣೆ ಆಹಾರಕ್ಕೂ ತಕ್ಕದ್ದು.

**Garcinia Morella,** *Desrouss.*—G. pictoria, *Roxb.*—(Order Guttiferæ.)

*Tam.* Mukki. *Can.* Jārigehuḷi, kaṇkuṭiga, dēvanahuḷi, arasinagurgi-mara. *Tu.* Jārigepuḷi. *Mal.* Čigiri, makki. *Kon.* Vaṭāmba.

## 238. ಜಿಮ್ಮಿ ಮರ.

ತು. ಕಾವಟೆ ಮರ. ಮ. ಮುಳ್ಳಿಲ, ಕುಯಿಟ್ಟಿ, ಕರಿಮುರಿಕ್. ಕೊಂ. ತೆಪಳೆರೂಕು.

ಹುಟ್ಟು: ತೋಟಗಳು. ಪುಷ್ಪ: ಶ್ರಾವಣ, ಭಾದ್ರಪದ.

ಉಪಯೋಗ: ಸಾಧಾ: ಬೀಜ ಎಳತಾಗಿದ್ದರೆ, ಉಪ್ಪಿನಕಾಯಿ ಮಾಡುತ್ತಾರೆ. ಸಂಬಾರಜೀನಸಿಗೂ ಸೇರಿಸಬಹುದು; ಮುಖ್ಯವಾಗಿ ಅಜೀರ್ಣ, ವಾತ ಇರುವವರಿಗೆ ಪಥ್ಯಕರ.

**Zanthoxylum Rhetsa,** *Dec.*—Fagara Rhetsa, *Roxb.*—(Order Rutaceæ.)

*Can.* Jimmi-mara. *Tu.* Kāvaṭe-mara. *Mal.* Muḷḷila, kuyiṭṭi, karimuriku. *Kon.* Tepaḷirūku.

## 239. ಜೀರಿಗೆ (Cummin Seed).

ತ. ಚೀರಕಮ್, ಅದ್ದುವಾಕ್ಕಾಯಮ್. ತೆ. ಜೀಲಕರ್ರ. ತು. ಜೀರ್ದರಿ. ಮ. ಚೀರಕಮ್. ಕೊಂ. ಜೀರೆ. ಹಿಂ. ಜೀರಾ. ಸಂ. ಜಿರಣಾ, ಹ್ರಸ್ವಾಂಗ.

ಉಪಯೋಗ: ಔಷ: ಉದರವಾಯುವಿಗೂ ಉದರಶೂಲಕ್ಕೂ ಹೊಟ್ಟೆಯ ಬೇರೆ ಅಕ್ರಮಕ್ಕೂ ಆಗುತ್ತದೆ. ಸಾಧಾ: ಬೀಜ ಸಂಬಾರಜೀನಸು.

**Cuminum Cyminum,** *Lin.*—(Order Umbelliferæ.)

*Tam.* Čīrakam, adduvākkāyam. *Tel.* Jīlakarra. *Can.* Jīrige. *Tu.* Jīrdari. *Mal.* Čīrakam. *Kon.* Jīre. *Hin.* Jīrā. *San.* Jiraṇā, hrasvāṅga.

### 240. ತಗಚೆ, ತಗರ್ಚೆ, ಗಂಡುತಗಸಿ, ತಗರಿಸ್ಯನ ಗಿಡ (Fœtid Cassia).

ತ. ತಗರೈ, ವಿಂಡು. ತೆ. ತಗಿರಿಸ. ತು. ತಜಂಕ್. ಮ. ತಕರ. ಕೊಂ. ತಾಯ್ಕಿಳೊ. ಸಂ. ತಗಾ, ಆಯುಧಮ್, ಪ್ರಭೂನತ.

**ಹುಟ್ಟು**: ದಕ್ಷಿಣ ಹಿಂದುಸ್ಥಾನ. **ಪುಷ್ಪ**: ಆಶ್ವೀಜದಿಂದ ಪುಷ್ಯದ ವರೆಗೆ.

**ಉಪಯೋಗ**: ಔಷ: ರಕ್ತಭೇದಿ ಅತಿಸಾರಗಳಲ್ಲಿ ಎಲೆಗಳ ರಸಕ್ಕೆ ಸ್ವಲ್ಪ ಉಪ್ಪು ಹಾಕಿ ಕುಡಿಯುತ್ತಾರೆ. ಬೀಜ ಅರದು ಮಜ್ಜಿಗೇ ಬೆರಿಸಿ, ತುರಿಕಜ್ಜಿಗೆ ಉಪಯೋಗಿಸುವರು. ಎಲೆಗಳ ಕಷಾಯ ಮಕ್ಕಳ ಜ್ವರಕ್ಕೆ ಆಗುತ್ತದೆ. ಬೇರನ್ನು ಅರದು ಲಿಂಬೆ ರಸದ ಸಂಗಡ ಹಚ್ಚಿದರೆ, ದದ್ದಿಗೆ ಒಳ್ಳೇದು. ಎಲೆಗಳನ್ನು ಬಿಸಿ ಮಾಡಿ ಕುರುಗಳು ಆರಿಹೋಗುವಂತೆ ಕಟ್ಟುವರು; ಸಂದುನೋವಿಗೂ ಆಗುತ್ತದೆ. ಎಣ್ಣೆಯಲ್ಲಿ ಕಾಸಿದ ಎಲೆಗಳನ್ನು ವ್ರಣಗಳಿಗೆ ಕಟ್ಟಬಹುದು. ಚೇಳು ಜೇನುಹುಳಗಳ ಕಡಿತಕ್ಕೆ ಅವುಗಳನ್ನು ಹಿಂಡಿ ಪೂಸುತ್ತಾರೆ. ಸಾಧಾ: ಎಲೆಗಳು ಪಲ್ಯಕ್ಕೆ, ಬೀಜ ನೀಲಬಣ್ಣಕ್ಕೆ ಉಪಯೋಗ.

**Cassia Tora**, *Lin.*—C. fœtida, *Salisb.*—C. gallinaria, *Collad.*—C. obtusifolia, *Lin.*—Senna Tora, *Roxb.*—Cassia Toroides, *Roxb.*—(Order Leguminosæ.)

*Tam.* Tagarai, vindu. *Tel.* Tagirisa. *Can.* Tagače, tagarči, gaṇḍu-tagasi, tagarisyana-giḍa. *Tu.* Tajanku. *Mal.* Takara. *Kon.* Tāykiḷo. *San.* Tagā, āyudham, prabhūnata.

### 241. ತಗ್ಗಿ ಗಿಡ.

ತ. ತಳುದಾಳೈ. ತೆ. ತಲೂಕಿ. ಮ. ತಿರುತಾಳಿ. ಸಂ. ಜಯಾರಿಣಿ, ಪರ್ಣ್ಣಕ.

**ಹುಟ್ಟು**: ಮಲಬಾರ, ಚೋಳಮಂಡಲ ತೀರಗಳು. **ಪುಷ್ಪ**: ಆಶ್ವೀಜದಿಂದ ಫಾಲ್ಗುಣದ ವರೆಗೆ.

**ಉಪಯೋಗ**: ಔಷ: ಬದಲಾವಣೆ ಗುಣ. ಸಮೂಲವನ್ನು ಎಣ್ಣೆಯ ಸಂಗಡ ಬೇಯಿಸಿ ತಲೆಗೆ ಇಟ್ಟುಕೊಂಡರೆ, ಪಿತ್ತ ಮತ್ತು ತಾಮರೆ ಹರ.

**Clerodendrum phlomoides**, *Lin. f.*—Volkameria multiflora, *Burm.*—(Order Verbenaceæ.)

*Tam.* Taḷudāḻai. *Tel.* Talūki. *Can.* Taggi-giḍa. *Mal.* Tirutāḷi. *San.* Jayāriṇi, parṇṇaka.

### 242. ತಡಗಣೆ, ಅಲಸಂದಿ ಬಳ್ಳಿ (Alasandi Bean).

ತ. ಕಾರಾಮಣಿ. ತೆ. ದಂಟುಪೆಸಲು, ಅಲಚಂದಲು. ತು. ಲತ್ತನೆ. ಮ. ಕೋಟ್ಟಪಯರ್. ಕೊಂ. ಅಲಸಂದೆ. ಸಂ. ಚಪಲ, ರಾಜಮಾಷಾ.

**ಉಪಯೋಗ**: ಸಾಧಾ: ಬೀಜ ಪಲ್ಯವಾಗಿದೆ.

**Vigna Catiang,** *Endl.*—Dolichos catjang, *Lin.*—Dolichos sinensis, *Dec.*—(Order Leguminosæ.)

*Tam.* Kārāmaṇi. *Tel.* Dantupesalu, alačandalu. *Can.* Tadagaṇi, alasandi-baḷḷi. *Tu.* Lattane. *Mal.* Kōṭṭapayaru. *Kon.* Alasande. *San.* Čapala, rājamāshā.

## 243. ತರಿ, ತಾರಿ, ಶಾಂತಿ ಮರ (Beleric Myrobalan).

ತ. ಅಕ್ಕನ್ದಮ್, ತಾನ್ರಿಮರಮ್, ಅಂಬಲತ್ತಿ, ವಿಪೀತಗಮ್. ತೆ. ತಾಡಿ, ವಿಭೀತಕಮು, ಭೂತಾವಾಸಮು. ತು. ದಾಂದಿಮರ, ಶಾಂತಿಮರ. ಮ. ತಾನ್ನಿ. ಕೊಂ. ಗೋಟಿಂಗ. ಮಹಾ. ಬೇಹಡಾ. ಹಿಂ. ಬರಡಾ. ಸಂ. ಅಕ್ಷವೃಕ್ಷ, ವಿಭೀತಕವೃಕ್ಷ.

ಹುಟ್ಟು: ಸಾಧಾರಣ. ಪುಷ್ಪ: ಫಾಲ್ಗುಣ, ಚೈತ್ರ.

ಉಪಯೋಗ: ಔಷ: ಬೀಜ ಜೇನಿನ ಸಂಗಡ ಕಣ್ಣುರೋಗಕ್ಕೆ ಆಗುತ್ತದೆ. ಕಾಯಿಯನ್ನು ಅಟ್ಟು ಬೀಗಿಗೂ ಅತಿಸಾರಕ್ಕೂ ಮೂಲವ್ಯಾಧಿಗೂ ಕುಷ್ಠಕ್ಕೂ ಕೆಮ್ಮಿಗೂ ಸೇವಿಸುವರು. ಮಿತಿಮಿಾರಿ ತಕ್ಕೊಂಡರೆ, ವಿಷದ ಗುಣ. ಮರದ ಚೆಕ್ಕೆ ರಕ್ತಾತಿಸಾರದಲ್ಲಿ ಉಪಯೋಗ. ಅದರ ಕಷಾಯ ಹಾಲನ್ನದ ಸಂಗಡ ಶೂಲರೋಗದಲ್ಲಿ ಕೊಡುವರು; ಕಣ್ಣುನೋವಿಗೂ ಕ್ರಿಮಿರೋಗಕ್ಕೂ ಆಗುತ್ತದೆ. ಸಾಧಾ: ಮರ ಕೆಲಸಕ್ಕೆ ಬರುತ್ತದೆ. ಚೆಕ್ಕೆಯ ಸಾರು ಅನ್ನಕ್ಕೆ ಹಾಕಿ ಉಣ್ಣುತ್ತಾರೆ. ಎಲೆಗಳನ್ನು ಪತ್ರಾವಳಿಯಾಗಿ ಬಳಸುತ್ತಾರೆ. ಬೀಜ ತಿನ್ನಲೂ ಅದರಿಂದ ಎಣ್ಣೆ ತೆಗೆಯಲೂ ಬಹುದು.

**Terminalia belerica,** *Roxb.*—T. punctata, *Roth.*—Myrobolanus belerica, *Gært.*—(Order Combretaceæ.)

*Tam.* Akkandam, tānrimaram, ambalatti, vipītagam. *Tel.* Tāḍi, vibhītakamu, bhūtāvāsamu. *Can.* Tari, tāri, šānti-mara. *Tu.* Dāndi-mara, šānti-mara. *Mal.* Tānni. *Kon.* Gōṭinga. *Mah.* Bēhaḍā. *Hin.* Baraḍā. *San.* Akshavṛiksha, vibhītakavṛiksha.

## 244. ತಾಳಿ ಮರ, ಕರತಾಳೆ, ಪನಿ (Palmyra Palm, Toddy Tree).

ತ. ಪನ್ನೈಮರವ್, ಪನ್ನೈ, ತಾಳಿ, ಕರುಂಪುರವ್. ತೆ. ತಾಟಿ. ತು. ತಾರಿ, ಓಲಿಮರ. ಮ. ತಾಲಮ್, ಪನ, ಕರಿಂಪನ. ಕೊಂ. ತಳ್ತಮಾಡ್ಡೊ. ಹಿಂ. ತಾಡ್. ಸಂ. ತಾಂತಿ, ತೃಣರಾಜ, ಪುರುಷ.

ಉಪಯೋಗ: ಔಷ: ಗಂಡುಮರದ ಚೆಕ್ಕೆ ಇಲ್ಲವೆ ಸೋಗೆ ಸುಟ್ಟು, ಅದರ ಕರಿಯಿಂದ ಹಲ್ಲು ಉಜ್ಜಲೂ, ಅದನ್ನು ಅರ್ಧ ಕುದಿಸಿ ತೆಗದ ಕಷಾಯಕ್ಕೆ ಸ್ವಲ್ಪ ಉಪ್ಪು ಸೇರಿಸಿ ಮುಕ್ಕುಳಿಸಲೂ ದಂತರೋಗಕ್ಕೆ ಒಳ್ಳೇದು. ಸಾಧಾ: ಈ ಮರದ ಮಿಾರ, ಕಳ್ಳು, ಸಕ್ಕರೆ, ಬೆಲ್ಲ ಮುಂತಾದ ಉತ್ಪನ್ನಗಳು ಪ್ರಖ್ಯಾತ. ಮರವು ಮಾಡಿನ ಕೆಲಸಕ್ಕೆ ಬಹು ಒಳ್ಳೇದು; ಇದಕ್ಕೆ ಗೆದಲೆ ಹತ್ತುವದಿಲ್ಲ. ಸರಕಾರದ ಅಪ್ಪಣೆ ಇಲ್ಲದೆ ಕಡಿಯ ಕೂಡದು.

**Borassus flabelliformis,** *Lin.*—(Order Palmeæ.)

*Tam.* Panaimaram, panai, tāḷi, karumpuram. *Tel.* Tāṭi. *Can.* Tāḷi-mara, karatāḷe, pani. *Tu.* Tāri, vōle-mara. *Mal.* Tālam, pana, karimpana. *Kon.* Taḷtamāḍḍo. *Hin.* Tāḍ. *San.* Tā*m*ši, triṇarāja, purusha.

## 245. ತಾಳಿಸಪತ್ರೆ, ಗೊರಜಿ, ಚರಿಚಲಿ, ಚಂಚಲಿ ಮರ.

ತ. ತಾಳಿಶಪತ್ತಿರಿ. ತೆ. ತಾಳೀಸಪತ್ರಿ. ತು. ಕೊರಜಿ. ಮ. ತಾಳೀಸಪತ್ರಂ. ಸಂ. ತಾಳಿಸಪತ್ರಂ, ಅಹಿಣಿ, ಕಾಲಮೇಷಿ, ಖದಿರಪರ್ನ್ನಿ.

ಹುಟ್ಟು: ತೀರಗಳು, ಬಂಗಾಳ. ಪುಷ್ಪ: ಕಾರ್ತಿಕದಿಂದ ಪುಷ್ಯದ ವರೆಗೆ.

ಉಪಯೋಗ: ಔಷ: ಎಲೆ ಚಿಗುರುಗಳು ಅತಿಸಾರಕ್ಕೂ ಅಜೀರ್ಣರೋಗಕ್ಕೂ ಜ್ವರಕ್ಕೂ ಕ್ಷಯದ ಕೆಮ್ಮಿಗೂ, ಚೆಕ್ಕೆಯ ಕಷಾಯ ಸ್ವರಭಂಗಕ್ಕೂ ಉಪಯೋಗ. ಸಾಧಾ: ಕಾಯಿ ತಿನ್ನಬಹುದು. ಮರ ಕೆಲಸಕ್ಕೆ ಒಳ್ಳೇದು.

**Flacourtia Cataphracta**, *Roxb.*—(Order Bixineæ.)

*Tam.* Tāḷišapattiri. *Tel.* Tāḷīsapatri. *Can.* Tāḷisapatre, goraji, čaričali, čaṅčali-mara. *Tu.* Koraji. *Mal.* Tāḷīsapatram. *San.* Tāḷisapatram, ahiṇi, kālamēshi, khadiraparnni.

## 246. ತಿಗಡೆಬಳ್ಳಿ, ಆಲ್ತಿಗುಡು, ದೇವದಂತಿ, ಬಿಳೇ ನಾಗದಂತಿ (Indian Jalap).

ತ. ಚಿವದೈ, ಗುಣಕಂಡಿ. ತೆ. ತೆಲ್ಲತೆಗಡ, ಎರ್ರತೆಗಡ. ತು. ತಿಗಡಿ. ಮ. ತಿಗಡೆ, ತ್ರಿಕೋಲ್ಪಕೊನ್ನ. ಕೊಂ. ತಿಗಡೆ. ಸಂ. ನಂದಿ, ತ್ರಿಪುಟಾ, ಲಘುರೋಚನೀ, ಕುಂಭಧಾತ್ರೀ.

ಹುಟ್ಟು: ಮಲಬಾರತೀರ, ಚೋಳಮಂಡಲ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ರಾಜನಿಘಂಟಿನ ಪ್ರಕಾರ ಈ ಬಳ್ಳಿ ಕ್ರಿಮಿಹರ, ಶ್ಲೇಷ್ಮ ಹರ, ಬಾವು ನಿವಾರಕವಾಗಿದ್ದು, ಅನ್ನಕೋಶದ ಅಕ್ರಮಗಳಿಗೂ ವ್ರಣನಂಜುಗಳಿಗೂ ಭೇದಿ ಮಾಡಿಸುವದಕ್ಕೂ ಒಳ್ಳೇದಾಗಿದೆ. ಭಾವಪ್ರಕಾಶ ಹೇಳುವದೇನಂದರೆ: "ಬಿಳೇ ತರವು ಉದರವಾಯುವಿಗೂ ಶೀತಕ್ಕೂ ಪಿತ್ತಕ್ಕೂ ಅನ್ನಕೋಶದ ದೋಷಗಳಿಗೂ ಪಿತ್ತಜ್ವರಕ್ಕೂ ಉಪಯೋಗ. ಕರಿ ತರವು ಜೋರಾದ ಭೇದಿ ಮಾಡಿಸಿ, ಮೂರ್ಛೆಗೂ ಅಡಲಭ್ರಮಣೆ ಇರುವ ಜ್ವರದ ಕಾವು ಕಡಿಮೆ ಮಾಡುವದಕ್ಕೂ ಆಗುತ್ತದೆ." ವಿಲಾಯತೀ ವೈದ್ಯರು ಇನ್ನೂ ಇದನ್ನು ಔಷಧಕ್ಕೆ ಉಪಯೋಗಿಸಲಿಕ್ಕೆ ಪ್ರಾರಂಭಿಸಲಿಲ್ಲ.

**Ipomæa Turpethum**, *R. Br.*—C. Turpethum, *Lin.*—(Order Convolvulaceæ.)

*Tam.* Čivadai, guṇakaṇḍi. *Tel.* Tellategaḍa, errategaḍa. *Can.* Tigaḍe-baḷḷi, āltiguḍu, dēvadanti, biḷē-nāgadanti. *Tu.* Tigaḍi. *Mal.* Tigaḍe, trikōlpakonna. *Kon.* Tigaḍe. *San.* Nandi, tripuṭā, laghurōčanī, kumbhadhātrī.

### 247. ತಿರುವ, ಜಂಬೆ, ಈರುಳ್, ಹೊನ್ನಾವರಿಕೆ, ಬೆಟ್ಟದಾವರಿಕೆ ಮರ (Iron Wood).

ತ. ಇರುಳ್. ತೆ. ಕೊಂಡ, ತಂಗೇಡು. ಮ. ಇರುಳ್, ಇರುಬೋಗಂ. ಹಿಂ. ಜಂಬು. ಮಹಾ. ವಿರಾಲ್.

ಹುಟ್ಟು: ದಕ್ಷಿಣ ಹಿಂದುಸ್ಥಾನ. ಪುಷ್ಪ: ವೈಶಾಖ.

ಉಪಯೋಗ: ಸಾಧಾ: ಮನೆ ಕಟ್ಟುವ ಕೆಲಸಕ್ಕೆ ಒಳ್ಳೇ ಮರ; ರೇಲ್ವೇ ಸ್ಲೀಪರುಗಳಿಗೂ ಉಪಯೋಗಿಸುತ್ತಾರೆ.

**Xylia dolabriformis**, *Berich.*—Inga xylocarpa, *D. C.*—Mimosa xylocarpa, *Roxb.*—(Order Leguminosæ.)

*Tam.* Iruḷ. *Tel.* Koṇḍa, taṅgēḍu. *Can.* Tiruva, jambe, īruḷ, honnāvarike, beṭṭadāvarike-mara. *Mal.* Iruḷ, irubōgam. *Hin.* Jambu. *Mah.* Virāl.

### 248. [illegible] ಕರ್ಜಾಲಿ ಗಿಡ (Tumbe).

ತ. ತುಂಬೈ. ತು. ತು[illegible] ಮ. ತುಂಪ. [illegible]ಕೊಂ. ತುಂಬೊ. ಸಂ. ರುದ್ರಪುಷ್ಪ.

ಹುಟ್ಟು: ಎಲ್ಲೆಲ್ಲಿಯೂ ಸಿಕ್ಕುವದು. ಪುಷ್ಪ: ಇಡೀ ವರುಷ.

ಉಪಯೋಗ: ಔಷ: ಅಜೀರ್ಣಕ್ಕೂ ವಾತರೋಗಕ್ಕೂ ಕ್ರಿಮಿರೋಗಕ್ಕೂ ಕುರಗಜ್ಜಿಗಳಿಗೂ ಬವಳಿಗೂ ಉಪಯೋಗ. ಸ್ಥಿರತಪ್ಪಿದವರಿಗೆ ಎಲೆಯ ರಸವನ್ನು ಕಣ್ಣಿನಲ್ಲಿ ಹಿಂಡುತ್ತಾರೆ.

**Leucas linifolia**, *Spreng.*—Phlomis linifolia, *Roth.*—(Order Labiatæ.)

*Tam.* Tumbai. *Can.* Tumbe, karjāli-giḍa. *Tu.* Tumbe. *Mal.* Tumpa. *Kon.* Tumbo. *San.* Rudrapushpa.

### 249. ತುರುಕಬೇವು, ಹುಚ್ಚುಬೇವು, ಅರೆಬೇವು, ಗರಡಬೇವು ಮರ (Common Bead Tree).

ತ. ಶಿಕರಿನಿಂಬಮ್, ಮಲೈವೇಂಬು. ತೆ. ತುರುಕವೇಪ. ಮ. ಮಲೈವೇಂಬು.

ಹುಟ್ಟು: ಕೊಂಕಣ, ದಖ್ಖಣ. ಪುಷ್ಪ: ಫಾಲ್ಗುಣ.

ಉಪಯೋಗ: ಔಷ: ಒಗರು ಗುಣ. ಬೇರು ಕ್ರಿಮಿರೋಗಕ್ಕೂ, ಎಲೆಗಳ ಕಷಾಯ ಅನ್ನಕೋಶದ ಅಕ್ರಮಕ್ಕೂ ಉಪಯೋಗ. ಎಲೆಗಳ ಕಷಾಯಕ್ಕೆ ಕ್ರಿಮಿನಾಶಕ ಗುಣ. ಸಾಧಾ: ಮರ ಕೆಲಸಕ್ಕೆ ಬರುತ್ತದೆ. ಬೀಜದಿಂದ ಎಣ್ಣೆ ತೆಗೆಯಬಹುದು.

**Melia Azedarach**, *Lin.*—M. Commelini, *Medic.*—Azedarach Commelini, *Medic.*—A. deleteria, *Mœnch.*—(Order Meliaceæ.)

*Tam.* Šikarinimbam, malaivēmbu. *Tel.* Turukavēpa. *Can.* Turukabēvu, huččubēvu, arebēvu, garaḍabēvu-mara. *Mal.* Malaivēmbu.

## 250. ತುರಿಕೆ, ತುರಿಸೆಕೆ ಗಿಡ (Nilgiri Nettle).

ತು. ಆಕಿರೆ. ಮ. ಆನಚೊರಿಯಣಮ್.

**ಹುಟ್ಟು:** ದಕ್ಷಿಣ ಹಿಂದುಸ್ಥಾನ, ನೇಪಾಳ. **ಪುಷ್ಪ:** ಭಾದ್ರಪದದಿಂದ ಕಾರ್ತಿಕದ ವರೆಗೆ.

**ಉಪಯೋಗ:** ಔಷ: ಇದರ ಕಷಾಯ ಜ್ವರಕ್ಕೆ ಕೊಡುವದುಂಟು. ಸಾಧಾ: ಎಳತಿರುವಾಗ ಪಲ್ಯ, ಬೆಳದ ಮೇಲೆ ಉತ್ತಮ ನಾರು.

**Urtica parviflora,** *Roxb.*—(Order Urticaceæ.)

*Can.* Turike, turiseke-giḍa. *Tu.* Ākire. *Mal.* Ānačoriyaṇam.

## 251. ತೆಂಗಿನ ಮರ (Cocoanut Palm).

ತ. ತೆನ್ನಮರಮ್, ತೆಂಗು, ನಾರಿಕೇಳಮ್. ತೆ. ಟೆಂಕಾಯಿಚೆಟ್ಟು, ನಾರಿಕೇಡಮು. ತು. ತಾರೆ. ಮ. ತೇಐ. ಕೊ. (ನಾರ್ಲ) ಮಾಡ್ದೊ. ಹಿಂ. ನಾರಲ್ಕೆಝಾಡ್. ಸಂ. ತ್ರಿಣರಾಜ, ದೀರ್ಘವೃಕ್ಷ, ಸದಾಫಲ, ರಸಾಯನತರು.

**ಉಪಯೋಗ:** ಈ ಮರವು ಹಿಂದುಸ್ಥಾನದವರಿಗೆ ವಿಶೇಷ ಉಪಯೋಗಕ್ಕೆ ಬರುವದರಿಂದ ಅದಕ್ಕೆ ಕಲ್ಪವೃಕ್ಷವೆಂಬ ಹೆಸರನ್ನಿಟ್ಟರು. ಅದರ ಪ್ರಯೋಗಗಳು ಜನ ಜನಿತವಾಗಿರುವದರಿಂದ ಇಲ್ಲಿ ವಿವರಿಸುವದು ಅವಶ್ಯವಿಲ್ಲ.

**Cocos nucifera,** *Lin.*—Palma Cocos, *Mill.*—(Order Palmeæ.)

*Tam.* Tennamaram, teṅgu, nārikēḷam. *Tel.* Ṭeṅkāyičeṭṭu, nārikēḍamu. *Can.* Teṅgina-mara. *Tu.* Tāre. *Mal.* Tēṅa. *Kon.* (Nārla) māḍḍo. *Hin.* Nāralke-jhāḍ. *San.* Triṇarāja, dīrghavṛiksha, sadāphala, rasāyanataru.

## 252. ತೇಗಿನ ಮರ, ಸ್ವಾಗುವಾನಿ, ಸಾಗೋನಿ ಮರ (Teak Tree).

ತ. ತೇಕ್ಕುಮರಮ್. ತೆ. ಟೇಕು. ತು. ತಕ್ಕಿ. ಮ. ತೇಕ್ಕ್ ಕೊಂ. ಸಾಗವಾನಿರೂಕು. ಹಿಂ. ಸಾಗ್ವಾನ್. ಸಂ. ತೇಕವೃಕ್ಷ, ತೈಲಪಿಲ, ನೌವೃಕ್ಷ, ಶಬರಸಾರ.

**ಹುಟ್ಟು:** ಮಲಬಾರ ಕೊಂಕಣ ತೀರಗಳು. **ಪುಷ್ಪ:** ಜ್ಯೇಷ್ಠದಿಂದ ಶ್ರಾವಣದ ವರೆಗೆ.

**ಉಪಯೋಗ:** ಔಷ: ಹೂ ಜೇನಿನ ಸಂಗಡ ಬೇಯಿಸಿ ಬೀಗಿಗೂ, ಹಸಿ ಎಲೆ ಕಾಯಿಗಳು ಬಾಯಿಾ ವ್ರಣಕ್ಕೂ ಮೈತುರಿಗೂ ಕೊಡುತ್ತಾರೆ. ಬೀಜವೂ ಹೂವೂ ಮೂತ್ರಜುಲಾಬು ಮಾಡಿಸುವ ಗುಣವುಳ್ಳದ್ದು. ಸಾಧಾ: ಮರ ಉತ್ತಮ ತರದ್ದು, ವಿಶೇಷವಾಗಿ ಬಾಳತರ ಮತ್ತು ಸಫಾಯಿ ಕೆಲಸಕ್ಕೆ ಒಳ್ಳೇದು. ಅದರಲ್ಲಿ ಕಬ್ಬಿಣಕ್ಕೆ ಮಣ್ಣು ಹತ್ತಿ ಕೆಡುವದಿಲ್ಲ. ನೀರುಳ್ಳ ಸ್ಥಳಗಳಲ್ಲಿ ಹುಟ್ಟುವಂಥ ಮರಗಳು ಅಷ್ಟು ಘಟ್ಟಿಯಲ್ಲ. ಎಲೆಗಳು ಬಣ್ಣಕ್ಕೂ ವಾಲೆಪುಸ್ತಕಗಳ ಕಪ್ಪಿಗೂ ಆಗುತ್ತವೆ. ಸರಕಾರದ ಅಪ್ಪಣೆಯ ವಿನಹ ಮರವನ್ನು ಕಡಿಯಕೂಡದು.

**Tectona grandis,** *Lin.*—Tectona Theca, *Lour.*—Theca ternifolia, *Ham.*—(Order Verbenaceæ.)

*Tam.* Tēkkumaram. *Tel.* Ṭēku. *Can.* Tēgina-mara, sāguvāni, sāgōni-mara. *Tu.* Tekki. *Mal.* Tēkku. *Kon.* Sāgavāni-ruku. *Hin.* Sāgvān. *San.* Tēka-vṛiksha, tailapila, nauvṛiksha, śabarasāra.

## 253. ತೊಂಡೆ, ಕೊಂಡೆ ಬಳ್ಳಿ (Kayidonda).

ತ. ಕೋವೈ, ವಿಂಬಮ್. ತೆ. ದೊಂಡತೀಗೆ, ಕಾಕಿದೊಂಡ. ತು. ಮಣೊಲಿ. ಮ. ಕೋವ, ತೊಂಡಿ ಕೊಂ. ತೆಂಡ್ಲೆ. ಹಿಂ. ಕುಂದೊರಿ. ಸಂ. ಕದಳಾ.

ಹುಟ್ಟು: ಸಾಧಾರಣ. ಪುಷ್ಪ: ಇಡೀ ವರುಷ.

ಉಪಯೋಗ: ಔಷ: ಎಲೆಗಳಿಗೆ ಬೆಣ್ಣೆ ಹಚ್ಚಿ, ದದ್ದು ತುರಿ ಮೊದಲಾದ ಮೈಲಿಗೆಗೆ ಕಟ್ಟಬಹುದು. ಸಾಧಾ: ಕಾಯಿಯ ಪಲ್ಯ ಮಾಡುತ್ತಾರೆ; ಹಣ್ಣು ತಿನ್ನಬಹುದು.

**Cephalandra indica,** *Schrader.*—Coccinia indica, *W. and A.*—Momordica monadelpha, *Roxb.*—Bryonia grandis, *Lin.*—(Order Cucurbitaceæ.)

*Tam.* Kōvai, vimbam. *Tel.* Doṇḍatīge, kākidoṇḍa. *Can.* Toṇḍe, koṇḍe-baḷḷi. *Tu.* Maṇoli. *Mal.* Kōva, toṇḍi. *Kon.* Teṇḍle. *Hin.* Kundori. *San.* Kadaḷā.

## 254. ತೊಗರಿ, ಕರಿಉದ್ದು, ತುರುಕುತೊಗರಿ ಗಿಡ (Pigeon Pea or Dholl).

ತ. ಅಡಗಿ, ತುವರೈ, ಇಯವೈ. ತೆ. ಕಂದುಲು, ಆಢಕಿ. ತು. ತೊಗೊರಿ. ಮ. ಆಢಕಿ, ತುವರ. ಕೊಂ. ತೋರಿ. ಸಂ. ಆಢಕಿ, ತುವರಿ, ಸೂಪ್ಯಃ.

ಉಪಯೋಗ: ಔಷ: ಎಲೆಯ ಕಷಾಯವನ್ನು ಬಿಸಿಯಿರುವಾಗ ಮುಕ್ಕಳಿಸುವದರಿಂದ ಹಲ್ಲುನೋವು ಗುಣ. ಸಾಧಾ: ಬೀಜ ಮನುಷ್ಯರಿಗೂ ದನಕ್ಕೂ ಒಳ್ಳೇ ಆಹಾರ. ಪದಾರ್ಥಕ್ಕೆ ವಿಶೇಷವಾಗಿ ಇದರ ಬೇಳೆ ಪ್ರಯೋಗಿಸುತ್ತಾರೆ; ಸಾರು ಪಥ್ಯಕರ.

**Cajanus indicus,** *Spr.*—C. bicolor, *Wall.*—C. flavus, *Dec.*—Cytisus Cajan, *Lin.*—C. Pseudocajan, *Jacq.*—(Order Leguminosæ.)

*Tam.* Āḍagi, tuvarai, iyavai. *Tel.* Kandulu, āḍhaki. *Can.* Togari, kari-uddu, turuku-togari-giḍa. *Tu.* Togori. *Mal.* Āḍhaki, tuvara. *Kon.* Tōri. *San.* Āḍhaki, tuvari, sūpyaḥ.

## 255. ತೊಟ್ಲ ಗಿಡ.

ತ. ಎಲಿಯಾಮಣಕ್ಕ್, ಎರಿಕರೈಕಾಟ್ಟಾಮಣಕ್ಕ್.

ಹುಟ್ಟು: ಸಾಧಾರಣ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ:** ಔಷ: ಬೀಜಗಳ ಎಣ್ಣೆ ವಾತಕ್ಕೂ ಪಕ್ಷವಾತಕ್ಕೂ ಒಳ್ಳೇದು. ಗಿಡದ ರಸ ಕಣ್ಣಿಗೆ ಹಿಂಡಿದರೆ, ಪರೆ ಗುಣ. ಸಾಧಾ: ಎಲೆಗಳಿಂದ ವಸ್ತ್ರಕ್ಕೆ ಹಸುರು ಬಣ್ಣ ಹಾಕುತ್ತಾರೆ. ಬೀಜದಿಂದ ದೀಪಕ್ಕೆ ಹಾಕುವ ಎಣ್ಣೆ ತೆಗಿಯಬಹುದು.

**Jatropha glandulifera,** *Roxb.*—J. glauca, *Vahl.*—(Order Euphorbiaceæ.) *Tam.* Eliyāmaṇakkụ, ērikaraikāṭṭāmaṇakkụ. *Can.* Toṭla-giḍa.

## 256. ತೋರಂಜಿ, ಚಕೋತ್ರ, ಸಕ್ಕರೆಕಂಜಿ, ಸಕ್ಕರೆನಿಂಬೆ, ಸಕ್ಕೊತ್ತಿ ಮರ (Pompelmous, Pummelo, or Shaddock).

ತೆ. ಪಂಪರಪನಸ, ಪಂಪರಮಾಸಚೆಟ್ಟು. ತು. ಚಕ್ಕೋತರ. ಮ. ಮಧುರನಾರಕಮ್. ಕೊಂ. ತೋರಂಜ. ಸಂ. ಮಧುರಾಮ್ಲಫಲ.

**ಹುಟ್ಟು:** ತೋಟಗಳು. **ಪುಷ್ಪ:** ಮಾಘ, ಫಾಲ್ಗುಣ.

**ಉಪಯೋಗ:** ಸಾಧಾ: ಹಣ್ಣು ತಿನ್ನಬಹುದು; ಹುಳಿಯಿರುವಾಗ ಪಚ್ಚಡಿ ಮಾಡುವರು.

**Citrus decumana,** *Lin.*—Aurantium decumanum, *Lin.*—(Order Rutaceæ.) *Tel.* Pamparapanasa, pamparamāsačeṭṭu. *Can.* Tōrañji, čakōtra, sakkare-kañji, sakkarenimbe, sakkotti-mara. *Tu.* Čakkōtara. *Mal.* Madhuranārakam. *Kon.* Tōrañja. *San.* Madhurāmlaphala.

## 257. ತೈಲದ ಮರ (Blue Gum Tree).

**ಹುಟ್ಟು:** ಔಸ್ಟ್ರಾಲ್ಯ ಖಂಡ. ಅಲ್ಲಿಂದ ತೆಗದು ನೀಲಗಿರಿಗಳಲ್ಲಿ ನೆಟ್ಟಿದ್ದಾರೆ.

**ಉಪಯೋಗ:** ಔಷ: ಕಾಯಿಗಳಿಂದ ಎಣ್ಣೆ ತೆಗೆಯುತ್ತಾರೆ. ಸೀತವಾದರೆ, ಅದನ್ನು ತಲೆಗೂ ಮೂಗಿಗೂ ಹಚ್ಚಬೇಕು.

**Eucalyptus globulus,** *Labill.*—(Myrtaceæ.) *Can.* Teilada-mara.

## 258. ದತ್ತೂರ, ದುತ್ತೂರಿ, ಉನ್ಮತ್ತ, ಉಮ್ಮತ್ತ, ಉಂಬತ್ತ, ಮದ್ದುಗುಣಿಕೆ ಗಿಡ.

*a)* ಬಿಳೀ ದತ್ತೂರ (White Stramony or Thorn Apple).

ತ. ಊಮತ್ತೈ, ಇಲಗಮ್, ತುರ್ತೂರಮ್. ತೆ. ಉಮ್ಮೆತ್ತಚೆಟ್ಟು, ದುತ್ತೂರಮು. ತು. ಉಂಬೆ. ಮ. ಉಮ್ಮತ್ತಮ್, ಉಮ್ಮಮ್. ಕೊಂ. ದುತುರೊ. ಸಂ. ಧುತ್ತೂರ, ಮಾತುಲ, ಕನಕ.

**Datura Stramonium,** *Lin.*—(Order Solanaceæ.)

*Tam.* Ūmattai, ilagam, turtūram. *Tel.* Ummettačeṭṭu, duttūramu. *Can.* Dattūra, duttūri, unmatta, ummatta, umbatta, madduguṇike-giḍa; biḷī-dattūra. *Tu.* Umbe. *Mal.* Ummattam, ummam. *Kon.* Duturo. *San.* Dhuttūra, mātula, kanaka.

### *b)* ಕರಿ ಉಮ್ಮತ್ತ ಗಿಡ (Purple Stramony or Thorn Apple).

ತ. ಕರುವೂಮತ್ತೈ. ತೆ. ನಲ್ಲಉಮ್ಮೆತ್ತ. ತು. ಕರಿಉಂಬೆ. ಮ. ಕರಿಉಮ್ಮತ್ತಮ್. ಕೊಂ. ಕಾಳೊದುತುರೊ. ಸಂ. ಕನಕ, ಕೃಷ್ಣೋನ್ಮತ್ತ.

**Datura fastuosa,** *Lin.*—(Order Solanaceæ.)

*Tam.* Karuvūmattai. *Tel.* Nalla-ummetta. *Can.* Kari-ummatta-giḍa. *Tu.* Kari-umbe. *Mal.* Kari-ummattam. *Kon.* Kāḷo-duturo. *San.* Kanaka, kṛishṇōnmatta.

**ಹುಟ್ಟು:** ಎಲ್ಲಿಯೂ ಸಿಕ್ಕುತ್ತದೆ. **ಪುಷ್ಪ:** ಇಡೀ ವರುಷ.

**ಉಪಯೋಗ:** ಔಷ: ಮೇಲಿನ ಎರಡು ತರಗಳೊಳಗೆ ಕರಿದು ಹೆಚ್ಚು ಗುಣವುಳ್ಳದ್ದು. ಬೇರನ್ನು ಬೀಜದ ಎಣ್ಣೆ ಮತ್ತು ಲಿಂಬೇರಸದಲ್ಲಿ ಅರೆದು ಸರ್ಪವಿಷಕ್ಕೆ ಹಚ್ಚುವರು. ಬೇರು ಕೆಪ್ಪಡವೆಂಬ ದವಡೆನೋವಿಗೆ ಸಹ ಉಪಯೋಗ. ರಸ ಹಾಕಿ ಕಾಸಿದ ಎಣ್ಣೆಯು ತಲೆಸಂಜಿಗಾಗುತ್ತದೆ. ಕಾಯಿ ಕೊರೆದು ಅದರಲ್ಲಿ ಎಣ್ಣೆ ಕಾಸಿ ಕಿವಿಗೆ ಹೊಯಿದರೆ, ಕಿವಿನೋವು ಗುಣ. ಎಲೆ ಮತ್ತು ಹೂವುಗಳ ಬತ್ತಿ ಸೇದಿದರೆ, ನೇವಸಕ್ಕೂ ಶ್ವಾಸಕಟ್ಟಿಗೂ ಒಳ್ಳೇದು. ಬೇರಿನ ಪುಡಿ ಕಠಿಣ ತಲೆನೋವಿಗೂ ಅಪಸ್ಮಾರಕ್ಕೂ ಸೇವಿಸಿ, ಹಲ್ಲುನೋವಾದರೆ ಬೀಜದಿಂದ ಮಾಡಿದ ಗುಳಿಗೆಯನ್ನು ಕೊರೆದ ಹಲ್ಲಿನಲ್ಲಿಡುತ್ತಾರೆ. ಬಿಳೇ ದತ್ತೂರ ಬೀಜದ ಚೂರ್ಣ ಸ್ವಲ್ಪ ತಕ್ಕೊಂಡರೆ, ವರಿಸೇಜ್ವರ ನಿಲ್ಲುವದಂತೆ. ಅದೇ ಬೀಜವನ್ನು ಜಜ್ಜಿ, ಎಣ್ಣೆಯಲ್ಲಿ ಹಾಕಿ, ಬಾವುಗಳಿಗೂ ಕುರು ರಾಜಕುರುಗಳಿಗೂ ಹಚ್ಚುವರು. ಇದರಲ್ಲಿ ಬಹು ಜಾಗ್ರತೆ ಇರತಕ್ಕದ್ದು. ಸಿರ್ಕದಲ್ಲಿ ತೇದ ಬೀಜದ ಲೇಪ ಕೆಂಪಿರೋಗಕ್ಕೂ ಸೊಂಟದ ತುರಿಕಜ್ಜಿಗೂ ಆಗುವದು.

ಹುಚ್ಚುನಾಯಿ ಕಚ್ಚಿದ್ದಕ್ಕೆ ಹಿಂದೂ ವೈದ್ಯರು, ಹುಚ್ಚು ಕಾಣಿಸಿಕೊಳ್ಳುವದಕ್ಕೆ ಮುಂಚೆ ಔಷಧ ಮಾಡುವ ಕ್ರಮವೇನಂದರೆ: ಬೆಳ್ತಿಗೆ ಅಕ್ಕಿ ೨ ತೊಲೆ, ಎಳ್ಳು ೧ ತೊಲೆ, ಸೀಯಾಳದ ಕೆನೆ ೧ ತೊಲೆ, ಬೆಲ್ಲ ೧ ತೊಲೆ, ಇವುಗಳನ್ನು ಒದಗಿಸಿಕೊಂಡು, ಮೂರು ಕುಡುತೆ ತೆಂಗಿನಕಾಯಿಯ ನೀರಿನಲ್ಲಿ ಅಕ್ಕಿಯನ್ನೂ ಎಳ್ಳನ್ನೂ ಮೆತ್ತಗಾಗುವ ಪರ್ಯಂತರ ಇಟ್ಟು, ಅನಂತರ ಅದೇ ನೀರಿನಲ್ಲಿ ಈ ನಾಲ್ಕು ಬಗೆಯನ್ನು (ಅಂದರೆ ಅಕ್ಕಿ, ಎಳ್ಳು, ಸೀಯಾಳದ ಕೆನೆ ಮತ್ತು ಬೆಲ್ಲ) ಅರದು, ತಕ್ಕಷ್ಟು ದಪ್ಪವಾದ ಗಂಜಿ ಮಾಡಬೇಕು; ಅತಿ ದಪ್ಪವಾದರೆ, ಸ್ವಲ್ಪ ಎಳೆನೀರು ಕೂಡಿಸಬಹುದು. ಈ ಗಂಜಿಯಲ್ಲಿ, ಪ್ರಾಯಸ್ಥರಿಗಾದರೆ ೧ ತೊಲೆ, ಚಿಕ್ಕವರಿಗಾದರೆ ½ ತೊಲೆ, ಕರಿ ಉಮ್ಮತ್ತದ ಎಲೆಯ ರಸ ಕೂಡಿಸಿ ಕೊಡಬೇಕು.

ಈ ಔಷಧವನ್ನು ಬೆಳಿಗ್ಯೆ ಬರೇ ಹೊಟ್ಟೆಯಲ್ಲಿ ತೆಗದುಕೊಳ್ಳಬೇಕು. ಕೆಲವರಲ್ಲಿ ಮದ್ದು ತೆಗದುಕೊಂಡ ಎರಡು ಮೂರು ತಾಸುಗಳ ಮೇಲೆ ಹುಚ್ಚು ಕಾಣಿಸಿಕೊಳ್ಳುವದು; ಕೆಲವರಲ್ಲಿ ೧೦ ಅಥವಾ ೧೨ ತಾಸುಗಳ ಮೇಲೆ ಬರುವದು. ಹುಚ್ಚು ಬರುವದರ ಗುರುತು ಏನಂದರೆ: ರೋಗಿಗೆ ಆಯಾಸವೂ ಬಲಹೀನತೆಯೂ ಉಂಟಾಗುವದು. ಬಾಯಿಯೂ ಗಂಟ್ಲೂ ಒಣಗಿಹೋದರೆ, ಹುಚ್ಚು ಬಹಳ ಸಮೀಪವಿರುವದೆಂದು ನೆನಸತಕ್ಕದ್ದು. ಬಾಯಿ ಬಹಳ ಒಣಗಿಹೋಗಿಯದೆಂದು ಹೇಳುವಾಗಲೂ,

ಸ್ಥಿರತಪ್ಪುವಾಗಲೂ, ರೋಗಿಯ ತೊಡೆಗಳನ್ನೂ ಕಾಲುಗಳನ್ನೂ ಚನ್ನಾಗಿ ಕಟ್ಟಿ, ಕೈಗಳನ್ನು ಹಿಂದಕ್ಕೆ ಕಟ್ಟಿ, ಒಂದು ಕಂಭಕ್ಕೆ ಬಿಗಿದು, ತನ್ನನ್ನಾಗಲಿ ಬೇರೊಬ್ಬರನ್ನಾಗಲಿ ಕಚ್ಚಲಾರದ ಹಾಗೆ ಮಾಡಬೇಕು. ಹುಚ್ಚು ಕಾಣ ಬಂದ ಮೇಲೆ ಯಾರೂ ಅವನ ಹತ್ತರ ಹೋಗಲೂ ಅವನಿಗೆ ತಿನ್ನುವದಕ್ಕೆ ಕೊಡಲೂ ಬಾರದು; ತಾನಾಗಿ ಬೇಕೆಂದು ಕೇಳುವ ಪರ್ಯಂತರ ಏನೂ ಆಹಾರ ಕೊಡಬಾರದು. ಉಣ್ಣುವದಕ್ಕೆ ಗಂಜಿನೀರನ್ನೂ ಮಜ್ಜಿಗೆಯನ್ನೂ ಕೊಡಬಹುದು.

ಕೆಲವು ಸರ್ತಿ ಹುಚ್ಚು ಬಹಳ ಕಠಿಣವಾಗಿ ೧೨ ಅಥವಾ ೧೫ ತಾಸು ಪರ್ಯಂತರ ಇರುವದು; ಆದಾಗ್ಯೂ ತಿನ್ನಲಿಕ್ಕೆ ಕೊಡಬಾರದು. ಹುಚ್ಚು ಹೆಚ್ಚು ಸಮಯದ ವರೆಗೆ ಇದ್ದರೆ, ರೋಗಿಯನ್ನು ತಂಪಾದ ಸ್ಥಳದಲ್ಲಿ ಇರಿಸಬೇಕು; ಅದು ಸಾಲದಿದ್ದರೆ, ಒಂದೆರಡು ಕುಡುತೆ ಮಜ್ಜಿಗೆಯನ್ನು ಒಂದು ಸೌಟು ನೀರುಳ್ಳಿಯ ರಸ ಹಾಕಿ ಕೊಡಬೇಕು.

ಕೆಲವು ತಿಂಗಳ ಪರ್ಯಂತರ ತಂಪು ಆಹಾರವನ್ನೇ ಕೊಟ್ಟು ಪಥ್ಯದಲ್ಲಿರಿಸಬೇಕು. ಹ್ಯಾಗಂದರೆ: ಆರು ತಿಂಗಳ ಪರ್ಯಂತರ ಮೀನನ್ನೂ ಉಷ್ಣ ತರದ ಮಾಂಸವನ್ನೂ ತಿನ್ನಬಾರದು; ೪ ಅಥವಾ ೫ ತಿಂಗಳ ವರೆಗೆ ನೀರಿನಲ್ಲಿ ಹೋಗದೆ, ಆಗುವಷ್ಟು ಅದಕ್ಕೆ ಮುಟ್ಟದೆ ಇರಬೇಕು; ತಣ್ಣೀರನ್ನು ಕುಡಿಯದೆ ಬಿಸಿ ನೀರು ಮಾತ್ರ ಕುಡಿಯಬೇಕು; ಕೈಕಾಲು ಸಹ ಬಿಸಿ ನೀರಿನಿಂದಲೇ ತೊಳಿಯಬೇಕು.

ಹುಚ್ಚುನಾಯಿ ಕಚ್ಚಿದ ಕೆಲವು ದಿವಸಗಳ ಮೇಲೆ ಈ ಔಷಧವನ್ನು ಕೊಡತಕ್ಕದ್ದು. ಹುಚ್ಚು ಬಹಳ ಸಮೀಪವಿದ್ದರೆ, ಈ ಔಷಧವು ಹೆಚ್ಚು ಪ್ರಯೋಜನವುಳ್ಳದ್ದೆಂದು ಹೇಳುತ್ತಾರೆ. ಹುಚ್ಚು ಬರುವದಕ್ಕೆ ಬಹಳ ತಡವಾದರೆ, ಔಷಧವು ಅಷ್ಟು ಪ್ರಯೋಜನದ್ದಲ್ಲಾ.

ಇದು ಪ್ರಖ್ಯಾತಿ ಹೊಂದಿದ ಔಷಧವಾಗಿರುತ್ತದೆ. ಕೆಲವು ದೇಶಸ್ಥರಿಗೆ ಅದು ಗೊತ್ತುಂಟು; ಆದರೆ ಅದನ್ನು ಅವರು ಬಹಳ ಮರೆ ಮಾಡುತ್ತಾರೆ. ಹುಚ್ಚುನಾಯಿ ಕಚ್ಚಿದವರಿಗೆ ಈ ಔಷಧವನ್ನು ಕೊಟ್ಟಲ್ಲಿ ಒಬ್ಬನಿಗಾದರೂ ಸರಿಯಾದ ಹುಚ್ಚು ಉಂಟಾಗಲಿಲ್ಲವೆಂದು ಹೇಳುತ್ತಾರೆ.

### 259. ದದ್ದಾಲ, ಗುಡ್ಡದ ಇಪ್ಪೇ, ಗೌಜು ಮರ (Careya).

ತ., ತೆ. ಕುಂಬಿ. ತು. ದಡ್ಡಲ್. ಮ. ಪೀಲಮ್, ಪೇರ್, ಉಕಮರಮ್, ಆಲಮ್. ಕೊಂ. ಕುಂಬಿಯೊ.

**ಹುಟ್ಟು**: ಮಲಬಾರ ಚೋಳಮಂಡಲ ತೀರಗಳು. **ಪುಷ್ಪ**: ಫಾಲ್ಗುಣ, ಚೈತ್ರ.

**ಉಪಯೋಗ**: ಔಷ: ಕುರುಗಳೂ ಕಠಿಣ ವ್ರಣಗಳೂ ಇದರ ಚಕ್ಕೆಯ ಕಷಾಯದಿಂದ ವಾಸಿ. ಇದು ರಕ್ತಾತಿಸಾರಕ್ಕೆ ಸಹ ಒಳ್ಳೇದು. ಸಾಧಾ: ಎಳೆ ಚಿಗುರುಗಳ ತಂಬಳಿ ಮಾಡಿ ಅನ್ನಕ್ಕೆ ಹಾಕಿ ಉಣ್ಣಬಹುದು. ಚಕ್ಕೆಗೆ ಒಗರು ಗುಣ; ಒಳ್ಳೇ ನಾರು ಉಂಟು. ಮರ ಕೆಲಸಕ್ಕೆ ಒಳ್ಳೇದು.

**Careya arborea,** *Roxb.*—(Order Myrtaceæ.)

*Tam., Tel.* Kumbi. *Can.* Daddāla, guḍḍada-ippē, gauju-mara. *Tu.* Daḍḍal. *Mal.* Pīlam, pēr, ukamaram, ālam. *Kon.* Kumbiyo.

### 260. ದಾಗಡಿ, ದುಸರೀ, ಯದಾನಿ, ಸುಗದಿ ಬಳ್ಳಿ.

**ಹುಟ್ಟು**: ದಕ್ಷಿಣ ಹಿಂದುಸ್ಥಾನದ ತೀರಗಳು, ಬಂಗಾಳ. **ಪುಷ್ಪ**: ಆಶ್ವೀಜದಿಂದ ಮಾರ್ಗಶಿರದ ವರೆಗೆ.

**ಉಪಯೋಗ**: ಔಷ: ಹಸಿ ಬೇರಿನ ಕಷಾಯ ಮೆಣಸೂ ಆಡಿನ ಹಾಲೂ ಸಮೇತ ವಾತರೋಗಕ್ಕೆ ಉಪಯೋಗ. ಸಾಧಾ: ಎಲೆಗಳಿಂದ ನೀರು ಶುದ್ಧ ಮಾಡುತ್ತಾರೆ.

**Cocculus villosus,** *Dec.*—Menispermum hirsutum, *Roxb.*—M. villosum, *Lam.*—(Order Menispermaceæ.)

*Can.* Dāgaḍi, dusarī, yadāni, sugadi-baḷḷi.

### 261. ದಾರೆಹುಳಿ ಮರ (Carambola Tree).

ತ. ಚಗಡಮ್, ತಮರತ್ತೈ. ತೆ. ತಮರತಮು. ತು. ದಾರೆಪುಳಿ. ಮ. ಚತುರಪುಳಿ, ತಮರತ್ತ. ಕೊಂ. ಕಂಬ್ಗಲ.

**ಹುಟ್ಟು**: ದಕ್ಷಿಣ ಹಿಂದುಸ್ಥಾನದ ತೀರಗಳು. **ಪುಷ್ಪ**: ಚೈತ್ರದಿಂದ ಜ್ಯೇಷ್ಠದ ವರೆಗೆ.

**ಉಪಯೋಗ**: ಔಷ: ಶ್ಲೇಷ್ಮ ಬಿಡಿಸುವ ಗುಣ. ಸಾಧಾ: ಉಪ್ಪಿನಕಾಯಿ ಮಾಡ ಬಹುದು. ರಸದಿಂದ ವಸ್ತ್ರದ ಕಲೆಗಳನ್ನು ತೆಗಿಯುತ್ತಾರೆ; ವಸ್ತ್ರತೊಳೆಯುವದರಲ್ಲಿ ಸಹ ಉಪಯೋಗ. ಎಳೆ ಕಾಯಿಗಳು ಪಲ್ಯ; ಧಾನ್ಯಕ್ಕೆ ಹಾಕಿದರೆ, ಬೇಗ ಬೇಯುತ್ತದೆ.

**Averrhoa Carambola,** *Lin.*—(Order Geraniaceæ.)

*Tam.* Čagaḍam, tamarattai. *Tel.* Tamaratamu. *Can.* Dārehuḷi-mara. *Tu.* Dārepuḷi. *Mal.* Čaturapuḷi, tamaratta. *Kon.* Karmbala.

### 262. ದಾಲ್ಚಿನಿ, ಲವಂಗಚಕ್ಕೆ, ಲವಂಗಪಟ್ಟೆ ಮರ (Cinnamon).

ತ. ಲವಂಗಪಟ್ಟೈ, ಕರುವಾಪಟ್ಟೈ. ತೆ. ಲವಂಗಪಟ್ಟ. ತು. ಇಜಿನ್. ಮ. ಇಲವಂಙಪಟ್ಟ, ವರನ, ಕರುವ. ಕೊಂ. ದಾಲ್ಚಿನಿ, ಟಿಕ್ಕೆ. ಹಿಂ. ದಾಲ್ಚೀನ್. ಸಂ. ತಮಾಲಪತ್ರ, ನಳದ, ತಾಪಿಂಛ, ವಸನಮ್.

**ಹುಟ್ಟು**: ಮಲಬಾರದಲ್ಲಿಯೂ ಸಿಂಹಳದಲ್ಲಿಯೂ ಬೆಳಿಸುತ್ತಾರೆ.

**ಉಪಯೋಗ**: ಔಷ: ಉದರವಾಯುವಿಗೂ ಚುರಕು ಕೊಡುವದಕ್ಕೂ ಅಜೀರ್ಣಕ್ಕೂ ಉಪಯೋಗ. ಸಾಧಾರಣವಾಗಿ ಬೇರೆ ಔಷಧಗಳ ಸಂಗಡ ಪ್ರಯೋಗಿಸುವರು. ಚೆಕ್ಕೆಯ ಸತ್ವ ರಕ್ತ ಹೋಗೋಣ ನಿಲ್ಲಿಸುತ್ತದೆ. ಸಾಧಾ: ಚೆಕ್ಕೆ ಸಂಬಾರ ಜೀನಸು. ಸರಕಾರದ ಅಪ್ಪಣೆ ಏನಹ ಮರವನ್ನು ಕಡಿಯಕೂಡದು.

**Cinnamomum zeylanicum,** *Breyn.*—Laurus Cassia, *Burm.*—L. Cinnamomum, *Roxb.*—L. nitida, *Wall.*—(Order Laurineæ.)

*Tam.* Lavaṅgapaṭṭai, karuvāpaṭṭai. *Tel.* Lavaṅgapaṭṭa. *Can.* Dālčini, lavaṅgačakke, lavaṅgapaṭṭe-mara. *Tu.* Ijin. *Mal.* Ilavaṅṅapaṭṭa, varana, karuva. *Kon.* Dālčini, ṭikke. *Hin.* Dālčīn. *San.* Tamālapatra, naḷada, tāpiñča, vasanam.

## 263. ದಾಸಣಿಗೆ, ದಾಸಾಳ, ದಾಸವಾಳ, ದಾಸರಿಹೂ ಗಿಡ
## (China Rose, or Shoe Flower).

ತ. ಶೆಂಬರತ್ತೈ, ಆರತ್ತಮ್. ತೆ. ದಾಸನಚೆಟ್ಟು, ಚೆಮಬರತ್ತಮು, ಜಪಾ. ತು. ದಾಸನ್‌ಪೂ. ಮ. ಚೆಂಪರುತ್ತಿ. ಕೊಂ. ದಸಣೆಫೂಲ. ಸಂ. ಜಪ, ರುದ್ರಪುಷ್ಪ.

ಹುಟ್ಟು: ತೋಟಗಳು. ಪುಷ್ಪ: ಇಡೀ ವರುಷ.

*ಉಪಯೋಗ:* ಔಷ: ತಂಪು ಗುಣ. ಉಷ್ಣಕ್ಕೂ ಕರುಳುಗಳ ಅಕ್ರಮಕ್ಕೂ ಮೂರ್ಛೆಗೂ ಇದರ ಎಲೆಗಳನ್ನು ಗಿವಿಚಿದ ನೀರನ್ನು ಸಕ್ಕರೆ ಹಾಕಿ ಕೊಡುತ್ತಾರೆ. ಕುರುಗಳಿಗೆ ಎಲೆಗಳನ್ನು ಅರದು ಲೇಪಿಸುವರು. ಮೊಗ್ಗೆಗಳು ಮೂಲವ್ಯಾಧಿಗೆ ಒಳ್ಳೇದು; ಮಾರಿರೋಗದಲ್ಲಿ ಸಹ ಉಪಯೋಗ. ಸಾಧಾ: ಶೃಂಗಾರದ ಗಿಡ. ಹೂ ತಿನ್ನುತ್ತಾರೆ, ಪಲ್ಯ ಮಾಡುತ್ತಾರೆ; ಅದರಿಂದ ಚರ್ಮಕ್ಕೆ ಕಪ್ಪು ಬಣ್ಣ ಸಹ ಕೊಡುತ್ತಾರೆ.

**Hibiscus Rosa-sinensis,** *Lin.*—(Order Malvaceæ.)

*Tam.* Šembarattai, arattam. *Tel.* Dāsanačeṭṭu, čemabarattamu, japā. *Can.* Dāsaṇige, dāsāḷa, dāsavāḷa, dāsarihū-giḍa. *Tu.* Dāsanpū. *Mal.* Čemparutti. *Kon.* Dasaṇephūla. *San.* Japa, rudrapushpa.

## 264. ದಾಳಿಂಬೆ ಮರ (Pomegranate Tree).

ತ. ಮಾದಳೈ, ತುಚಗಮ್. ತೆ. ದಾಡಿಮಮು, ದಾನಿಮ್ಮ, ದಾಳಿಂಬ. ತು. ದಾಲಿಂಬ. ಮ. ಉರುಯಾಂಪಟಮ್, ತಾಳಿಮಾದಳಮ್. ಕೊಂ. ದಾಳಿಂಬ. ಹಿಂ. ಅನಾರ್, ದರಿಮ್. ಸಂ. ಕರಕ, ದಾಡಿಮ, ದಾಳಿಕ, ನಾಗರಾಟ.

ಹುಟ್ಟು: ತೋಟಗಳು. ಪುಷ್ಪ: ಮಾರ್ಗಶಿರ, ಪುಷ್ಯ.

*ಉಪಯೋಗ:* ಔಷ: ಹೂ ಮತ್ತು ಹಣ್ಣಿನ ಸಿಪ್ಪೆಗೆ ಒಗರು ಗುಣ. ಹೂ ಚಿಗುರೂ ಅಗ್ರಕ್ಕೂ ಅರುಚಿಗೂ ರಕ್ತಾತಿಸಾರಕ್ಕೂ ಆಮಾತಿಸಾರಕ್ಕೂ, ಬೇರಿನ ಚೆಕ್ಕೆ ಲಾಡಿಹುಳಕ್ಕೂ ಉಪಯೋಗ. ಸಾಧಾ: ಹಣ್ಣು ತಿನ್ನಬಹುದು; ಶೃಂಗಾರದ ಮರ. ಹೂ ಮತ್ತು ಚೆಕ್ಕೆ ಬಣ್ಣಕ್ಕೆ ಆಗುತ್ತವೆ.

**Punica Granatum,** *Lin.*—(Order Lythraceæ.)

*Tam.* Mādaḷai, tučagam. *Tel.* Dāḍimamu, dānimma, dāḷimba. *Can.* Daḷimbe-mara. *Tu.* Dālimba. *Mal.* Uruyāmpaḷam, tāḷimādaḷam. *Kon.* Dāḷimba. *Hin.* Anār, darim. *San.* Karaka, dāḍima, dāḷika, nāgarāṭa.

## 265. ದಿಕ್ಕಾಮಲ್ಲಿ ಗಿಡ (Gardenia).

ತ. ಕುಂಬೈ, ದಿಕಾಮಲ್ಲಿ. ತೆ. ಗೆರ್ರಿಬಿಕ್ಕಿ.

ಹುಟ್ಟು: ದಕ್ಷಿಣ ಮಹಾರಾಷ್ಟ್ರ, ಚಿತ್ತಗೊಂಗ್. ಪುಷ್ಪ: ಫಾಲ್ಗುಣ, ಚೈತ್ರ.

ಉಪಯೋಗ: ಔಷ: ದಿಕ್ಕಾಮಲ್ಲಿಯ ಅಂಟು (ರಾಳ) ಹುಣ್ಣುಗಳಿಗೆ ಔಷಧ ವಾಗಿದೆ. ಅದರಿಂದ ವ್ರಣದ ಹುಳುಗಳೆಲ್ಲ ಹೋಗುತ್ತವೆ.

**Gardenia lucida,** *Roxb.*—G. resinifera, *Roth.*—(Order Rubiaceæ.)

*Tam.* Kumbai, dikāmalli. *Tel.* Gerribikki. *Can.* Dikkāmalli-giḍa.

## 266. ದ್ವೀಪಿಹಲಸು ಮರ (Breadfruit Tree).

ತು. ದೀವುದ ಗುಜ್ಜೆ. ಮ. ವಿಲಾತಿಪಿಲಾವು, ದ್ವೀಪುಪಿಲಾವು. ಕೊಂ. ದೀವಿಕಡಿಗಿ.

ಹುಟ್ಟು: ತೋಟಗಳಲ್ಲಿ ಬೇರು ನೆಟ್ಟು ಬೆಳಿಸುತ್ತಾರೆ.

ಉಪಯೋಗ: ಸಾಧಾ: ಮರ ಸುಂದರ. ಕಾಯಿ ಒಳ್ಳೇ ಪಲ್ಯ; ಅದನ್ನು ತುಂಡು ಮಾಡಿ ಒಣಗಿಸಿ, ಕೆಲವು ಕಾಲದ ವರೆಗೆ ಹಾಳಾಗದೆ ಇಡಬಹುದು.

**Artocarpus incisa,** *Lin. f.*—A. communis, *Forst.*—Rademachia inc., *Thunb.*—(Order Urticaceæ.)

*Can.* Dīvihalasu-mara. *Tu.* Dīvuda-gujje. *Mal.* Vilāti-pilāvu, dvīpu-pilāvu. *Kon.* Dīvikaḍigi.

## 267. ದೂಲಗೊಂಡಿ, ತುರಚಿ ಬಳ್ಳಿ (Nettle).

ತ. ಕಾಯಂಚೊರಿ, ಶೆಂದೊಟ್ಟಿ, ಕಣ್ಣೀಚಿ. ತೆ. ದೂಲಗೊಂಡಿ, ತೇಲುಮಣಿಚೆಟ್ಟು. ತು. ಪಚ್ಚೆರೆಂಗಿ, ತುನುಸು, ತುನುಸೆ. ಮ. ಕೊಟತ್ತೂವ, ಚೊರಿಣಣಮ್, ಚೊರಿಯಣಮ್. ಕೊಂ. ಖಾಜ್ರಕುಲ್ಲಿ. ಸಂ. ಕಂಚುರಾ, ಸಮುದ್ರಾಂತಾ, ದುರಾಲಭಾ.

ಹುಟ್ಟು: ಮಲಬಾರತೀರ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಬೇರಿನ ರಸವನ್ನು ಹಾಲು ಸಕ್ಕರೆಯೊಡನೆ ಜ್ವರ ಮತ್ತು ಕಜ್ಜಿ ಇರುವವರು ಕುಡಿಯುತ್ತಾರೆ. ಬೇರಿನ ಕಷಾಯ ಮೂತ್ರಕಟ್ಟಿಗೂ ಶೂಲ ರೋಗಕ್ಕೂ ಆಗುತ್ತದೆ. ಸಾಧಾ: ಹೊಟ್ಟೇ ಹುಳು ಇದ್ದವರಿಗೆ ಚಿಗುರುಗಳ ತಂಬಳಿ ಪಥ್ಯಕರ.

**Tragia involucrata,** *Lin.*—(Order Euphorbiaceæ.)

*Tam.* Kāyañčori, šendoṭṭi, kaṇṇīči. *Tel.* Dūlagoṇḍi, tēlumaṇičeṭṭu. *Can.* Dūlagoṇḍi, turači-baḷḷi. *Tu.* Paččerengi, tunusu, tunuse. *Mal.* Koṭattūva, čoriṅaṇam, čoriyaṇam. *Kon.* Khājrakulli. *San.* Kañčurā, samudrāntā, durālabhā.

## 268. ದೇವದಾರು, ಗಂಧಗಿರಿ, ಚೆಂಬುಳುಕಾಯಿ ಮರ (Red Cedar, or Bastard Sandal).

ತ., ಮ., ಕೊಂ. ದೇವದಾರು. ತೆ. ಆಡವಿಗೋರಂಟ. ತು. ದೇವದಾರ್.

ಹುಟ್ಟು: ದಕ್ಷಿಣ ಹಿಂದುಸ್ಥಾನ. ಪುಷ್ಪ: ಆಷಾಢದಿಂದ ಮಾರ್ಗಶಿರದ ವರೆಗೆ.

**ಉಪಯೋಗ:** ಔಷ: ತಂಪು ಮತ್ತು ಬಲ ಕೊಡುವಂಥಾದ್ದು. ಎಲೆ ಚಿಗುರುಗಳನ್ನು ಗುದ್ದಿ ಎಣ್ಣೆಯಲ್ಲಿ ತಲೆಗೆ ಹಚ್ಚಿದರೆ, ಪಿತ್ತಹರ; ನಿದ್ದೆಗೂ ಮಂದಕಣ್ಣಿಗೂ ಸಹ ಒಳ್ಳೇದು. ಸಾಧಾ: ಮರಕ್ಕೆ ಪರಿಮಳ ಉಂಟು; ಅದು ಕೆಲಸಕ್ಕೆ ಬರುತ್ತದೆ.

**Erythroxylon monogynum,** *Roxb.*—Sethia indica, *Dec.*—(Order Lineæ.)

*Tam.*, *Mal.*, *Kon.* Dēvadāru. *Tel.* Aḍavigōranṭa. *Can.* Dēvadāru, gandhagiri, čembuḷukāyi-mara. *Tu.* Dēvadāru.

## 269. ದೊಡ್ಡತಗಚೆ, ಕೋಲುತಗಸಿ ಗಿಡ.

ತ. ಪೇಯಾವಿರೈ, ಪೊನ್ನಾವಿರೈ. ತೆ. ಕಸಿಂದ, ಕಸಿವಿಂದ. ತು. ಆನೆತಜಂಕ್. ಮ. ಪೊನ್ನಾವೀರಮ್. ಕೊಂ. ಹೋಡುತೈಕಿಳೊ.

**ಹುಟ್ಟು:** ಸಾಧಾರಣ. **ಪುಷ್ಪ:** ಇಡೀ ವರುಷ.

**ಉಪಯೋಗ:** ಔಷ: ಎಲೆಗಳು ಮಲಭೇದಿ. ಬೇರು ಮೂತ್ರಜುಲಾಬು ಮಾಡಿಸುವದಕ್ಕೂ ಬೀಗಿಗೂ ಅನ್ನಕೋಶದ ಅಕ್ರಮಕ್ಕೂ ಆಗುವದು. ಎಲೆಗಳನ್ನು ಹೊಟ್ಟೆಯೊಳಗೂ ಹೊರಗೂ ಉಪಯೋಗಿಸುವದರಿಂದ ಕಜ್ಜಿ ನಂಬುಗಳು ಹರ. ಸಾಧಾ: ಕೆಲವರು ಪಲ್ಯ ಮಾಡುತ್ತಾರೆ.

**Cassia occidentalis,** *Lin.*—C. fœtida, *Pers.*—C. Sophera, *Wall.*—Senna occidentalis, *Roxb.*—(Order Leguminosæ.)

*Tam.* Pēyāvirai, ponnāvirai. *Tel.* Kasinda, kasivinda. *Can.* Doḍḍatagače, kōlutagasi-giḍa. *Tu.* Ānetajaṅku. *Mal.* Ponnāvīram. *Kon.* Hōḍu-taikiḷo.

## 270. ದೊಡ್ಡ ನೆಕ್ಕರೆ (Indian Rhododendron).

ತು. ನೆಕ್ಕರೆ. ಮ. ಕಡಳಿ. ಕೊಂ. ನಾಂಕೇರಿ.

**ಹುಟ್ಟು:** ಮಲಬಾರತೀರ, ಓಡ್ರ ದೇಶ, ನೇಪಾಳ. **ಪುಷ್ಪ:** ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ:** ಔಷ: ಎಲೆಯ ರಸವನ್ನು ಗಂಜಿನೀರಿನಲ್ಲಿ ಹಾಕಿ ಕುಡಿದರೆ, ಹೊಟ್ಟೆನೋವು ಗುಣ. ಅಜೀರ್ಣರೋಗದಲ್ಲಿ ಬೇರಿನ ಸಿಪ್ಪೆಯ ಸಾರು ಒಳ್ಳೇದು. ಸಾಧಾ: ಕಾಯಿ ತಿನ್ನುತ್ತಾರೆ; ಅದು ಬಣ್ಣಕ್ಕೆ ಸಹ ಆಗುತ್ತದೆ.

**Melastoma malabathricum,** *Lin.*—(Order Melastomaceæ.)

*Can.* Doḍḍa-nekkare. *Tu.* Nekkare. *Mal.* Kaḍaḷi. *Kon.* Nāṅkēri.

## 271. ದೊಡ್ಡಪತ್ರೆ, ಪತ್ರಿ, ಕುರುವೇಲು ಬಳ್ಳಿ (Thick-leaved Lavender).

ತ. ಕರ್ಪೂರವಳ್ಳಿ. ತೆ. ಕರ್ಪೂರವಳ್ಳಿ, ಕರವೇರು. ತು. ಸಂಬಾರಬಳ್ಳಿ. ಮ. ಕರ್ಪೂರವಳ್ಳಿ, ಕಾಟುಕೂರ್ಕ. ಕೊಂ. ಸಾವಿರಸಂಬಾರ. ಸಂ. ಉತ್ಪಲಭೇದ, ಅಜಪಾದ, ಇಂದುಪರ್ಣಿ.

**ಹುಟ್ಟು**: ಮಲಬಾರತೀರ, ಮೈಸೂರು. **ಪುಷ್ಪ**: ಜ್ಯೇಷ್ಠದಿಂದ ಭಾದ್ರಪದದ ವರೆಗೆ.

**ಉಪಯೋಗ**: ಔಷ: ಕಷಾಯವನ್ನು ಮಕ್ಕಳ ಕೆಮ್ಮಿಗೂ ಉಬ್ಬಸಕ್ಕೂ ಕೊಡಬಹುದು; ಇದಕ್ಕೆ ಶ್ಲೇಷ್ಮ ಬಿಡಿಸುವ ಗುಣ. ಎಲೆಗಳ ರಸಕ್ಕೆ ಸಕ್ಕರೆ ಎಳ್ಳೆಣ್ಣೆ ಕೂಡಿಸಿ ತಲೆಗೆ ಹಚ್ಚಿದರೆ ತಂಪು. ಸಾಧಾ: ಚಟ್ಣಿ ಮಾಡುತ್ತಾರೆ.

**Anisochilus carnosus,** *Wall.*—Lavendula carnosa, *Lin.*—(Order Labiatæ.)

*Tam.* Karpūravaḷḷi. *Tel.* Karpūravaḷḷi, karavēru. *Can.* Doḍḍapatre, patri, kuruvēlu-baḷḷi. *Tu.* Sambāra-baḷḷi. *Mal.* Karpūravaḷḷi, kāṭukūrka. *Kon.* Sāvirsambāra. *San.* Utpalabhēda, ajapāda, induparni.

## 272. ದೊಡ್ಡಮಣಿ, ಹಿರೇ ಮರ.

ತ. ಪೆರುಮರುತ್ತು. ತೆ. ಪೆದ್ದಮಾನು. ಮ. ಪೆರುಮರಂ.

**ಹುಟ್ಟು**: ದಕ್ಷಿಣ, ಕೊಯಂಬತ್ತೂರು.

**ಉಪಯೋಗ**: ಔಷ: ಚೆಕ್ಕೆ ಜೀರ್ಣ ಹೆಚ್ಚಿಸಿ ಬಲ ಕೊಡುವಂಥಾದ್ದು; ಜ್ವರಕ್ಕೂ ಆಗುತ್ತದೆ. ಸಾಧಾ: ಮರ ದೋಣಿಗಳಿಗೂ ಚಿಲ್ಲರೆ ಕೆಲಸಕ್ಕೂ ಬರುತ್ತದೆ.

**Ailanthus excelsa,** *Roxb.*—(Order Simarubeæ.)

*Tam.* Perumaruttu. *Tel.* Peddamānu. *Can.* Doḍḍamaṇi, hirē-mara. *Mal.* Perumaram.

## 273. ದೊಡ್ಡಮರದರಸಿನ (Tree Turmeric).

ತ., ತು. ಮರಮಂಜಳ್. ತೆ. ಮಾನುಪಸುಪು. ಮ. ಮರಮಂಞಾಳ್.

**ಉಪಯೋಗ**: ಔಷ: ಚೆಕ್ಕೆಯ ಪಾನಕ ಬಲ ಕೊಡುವಂಥಾದ್ದು; ಅನ್ನಕೋಶದ ಅಕ್ರಮ ಸಹ ನಿಲ್ಲಿಸುವದು. ಸಾಧಾ: ಹಳದಿ ಬಣ್ಣಕ್ಕೆ ಆಗುತ್ತದೆ.

**Coscinium fenestratum,** *Colebrooke.*—Menispermum fenestr., *Gærl.*—(Order Menispermaceæ.)

*Tam.*, *Tu.* Maramañjaḷu. *Tel.* Mānupasupu. *Can.* Doḍḍamaradarasina. *Mal.* Maramaññaḷ.

## 274. ದೊಡ್ಡ ರತ್ನಗಂಧಿ, ಸಂಕೇಶ್ವರ ಮರ (Goolmohur, Royal Goolmohur).

ತ. ವಾದನಾರಯಣ, ಪಂಜಾದಿ. ತೆ. ಶೀಮತಂಗೇಡು. ತು. ಕೋಡುಮರ. ಮ. ಅಲಸಿಪ್ಪೂ. ಕೊಂ. ಹೋಡಿರತ್ನಗಂಧಿ.

**ಹುಟ್ಟು**: ತೋಟಗಳು. **ಪುಷ್ಪ**: ಚೈತ್ರ, ವೈಶಾಖ.

**ಉಪಯೋಗ**: ಸಾಧಾ: ಅಲಂಕಾರದ ಮರ. ಮರಕ್ಕೆ ಗೆದಲು ಹಿಡಿಯುವದಿಲ್ಲವಂತೆ.

**Poinciana regia,** *Bojer.*—Cæsalpinia regia, *D. Dr.*—(Order Leguminosæ.)

*Tam.* Vādanārayaṇa, pañjādi. *Tel.* Šīmatangēḍu. *Can.* Doḍḍa-ratnagandhi, saṅkēšvara-mara. *Tu.* Kōḍu-mara. *Mal.* Alasippū. *Kon.* Hōḍi-ratnagandhi.

## 275. ಧೂಪದ ಮರ, ರಾಳದ ಮರ (White Dammar, or Indian Copal Tree).

ತ. ವೆಳ್ಳೈಕುಂನ್ರಿಕಮ್. ತೆ. ತೆಲ್ಲದಾಮರಮು. ತು. ತಂಡೊಳಿಗೆದ ಮರ. ಮ. ಪಯನ್ನು ಮರಮ್. ಕೊ. ಧುಂಪಾರೂಕು. ಹಿಂ. ಸುಫೇದ್ದಾಮರ್.

**ಹುಟ್ಟು:** ಮಲಬಾರತೀರ, ತಿರುವಂಕೋಡು. **ಪುಷ್ಪ:** ಪುಷ್ಯದಿಂದ ಫಾಲ್ಗುಣದ ವರೆಗೆ.

**ಉಪಯೋಗ:** ಔಷ: ಅಂಟನ್ನು ಎಣ್ಣೆಯ ಸಂಗಡ ಕಾಸಿ ಹಚ್ಚಿದರೆ, ವಾತದ ಬಾವು ಗುಣ. ಕಾಯಿ ಗುದ್ದಿ ಬಿಸಿ ನೀರಲ್ಲಿಟ್ಟು ಕುಡಿದರೆ, ವಾಂತಿ ನಿಲ್ಲುವದು. ಕಾಯಿಗಳಿಂದ ಸಿಕ್ಕುವ ಎಣ್ಣೆಯನ್ನು ವಾತರೋಗದಲ್ಲಿ ಮೈಗೆ ಹಚ್ಚುವರು. ಸಾಧಾ: ಅಂಟಿನಿಂದ ಥಳಥಳ ಕೊಡುವ ಲೇಪವಾಗುತ್ತದೆ. ಎಲೆಗಳನ್ನು ಪತ್ರಾವಳಿಯಾಗಿ ಬಳಿಸುತ್ತಾರೆ.

**Vateria indica,** *Lin.*—V. malabarica, *Blum.*—(Order Dipterocarpeæ.)

*Tam.* Veḷḷaikunnrikam. *Tel.* Telladāmaramu. *Can.* Dhūpada-mara, rāḷada-mara. *Tu.* Tandoḷigeda-mara. *Mal.* Payannumaram. *Kon.* Dhumpā-rūku. *Hin.* Suphēddāmar.

## 276. ನವಣೆ ಅಕ್ಕಿ, ಕಂಗೋ, ಅರಿಕೆ, ಪ್ರಿಯಂಗು, ತೆನೆ ಗಿಡ (Italian Millet).

ತ. ತಿನೈ. ತೆ. ಕೊರ್ರಲು. ಮ. ತಿನ. ಕೊಂ. ವರಯಿ. ಸಂ. ಕಂಕು, ಶ್ಯಾಮಾ.

**ಉಪಯೋಗ:** ಇದೊಂದು ಒಳ್ಳೇ ಬಲಕರವಾದ ಧಾನ್ಯ. ಹಾಲಿನಲ್ಲಿ ಬೇಯಿಸಿದರೆ, ರೋಗಿಗಳಿಗೆ ಹಿತಕರ ಪಥ್ಯ.

**Setaria italica,** *Beauv.*—Panicum italicum, *Lin.*—P. erythrospermum, *Hornem.*—P. glomeratum, *Mœnch.*—Echinolæna erythrosperma, *R. S.*—Pennisetum italicum, *R. Br.*—(Order Gramineæ.)

*Tam.* Tinai. *Tel.* Korralu. *Can.* Navaṇe-akki, kangō, ārike, priyangu, tene-giḍa. *Mal.* Tina. *Kon.* Varayi. *San.* Kaṅku, šyāmā.

## 277. ನವಿಲಿನ ಬಾಲ (Peacock-tailed Adiantum).

ತ. ಮೈಲಿಕೊಂಡೆ. ಸಂ. ಮಯೂರಶಿಖಂಡ.

**ಹುಟ್ಟು:** ಬಂಡೆಕಲ್ಲುಗಳ ಮೇಲೆ. **ಪುಷ್ಪ:** ಮಳೆಗಾಲದಲ್ಲಿ.

**ಉಪಯೋಗ:** ಔಷ: ಎಲೆಗಳಿಗೆ ಒಗರು ಗುಣ. ಅಗ್ನಿವರ್ಧಕ ಔಷಧ.

**Adiantum melanacaulon.**—(Order Filices.)

*Tam.* Mailikoṇḍe. *Can.* Navilina-bāla. *San.* Mayūrašikhanda.

## 278. ನಸುಗುನ್ನಿ, ತುರಚಿ, ಕಾಡವರೆ, ನಾಯಿಸೊಣಗು ಬಳ್ಳಿ (Cowhage, Cowitch).

ತ. ಪೂನೈಕ್ಕಾಲಿ. ತೆ. ಪಿಲ್ಲಿಯಡುಗು. ತು. ನಾಯಿಸೊಣಂಗ್. ಮ. ನಾಯಿಕುರುಣ, ಚೊರಿವಳ್ಳಿ. ಕೊಂ. ಖವಲ್ಯಾವಾಲಿ. ಸಂ. ಆತ್ಮಗುಪ್ತ.

**ಹುಟ್ಟು:** ಸಾಧಾರಣ. **ಪುಷ್ಪ:** ಮಾರ್ಗಶಿರದಿಂದ ಮಾಘದ ವರೆಗೆ.

**ಉಪಯೋಗ:** ಔಷ: ಗಿಡದ ಕುಸುಮಗಳನ್ನು ಹಾಕಿ ಕಲಸಿದ ಪಾಕವು ಕ್ರಿಮಿ ಹೊರಡಿಸುತ್ತದೆ. ಬೇರಿನ ಕಷಾಯ ಮೂತ್ರಜುಲಾಬು ಮಾಡಿಸಿ, ಅದರ ಲೇಪ ಆನೆ ಕಾಲಿಗೆ ಸಹ ಹಚ್ಚುವರು. ಎಲೆಗಳನ್ನು ಅರದು ವ್ರಣಗಳಿಗೆ ಹಚ್ಚುವದುಂಟು. ಬೇರಿನ ಕಲ್ಕನೀರು ಸನ್ನಿರೋಗಿಳಿಗಗೆ ಕೊಡುತ್ತಾರೆ. ಮೊಗ್ಗೆಗಳನ್ನು ನೆನೆಹಾಕಿ ಇಟ್ಟ ವೈನ್ ಎಂಬ ದ್ರಾಕ್ಷಾರಸ (ಒಂದು ಕುಪ್ಪಿಗೆ ೧೨ ಮೊಗ್ಗೆ ಪ್ರಕಾರ) ಬೀಗಿಗೆ ಒಳ್ಳೇ ಔಷಧ. ಸಾಧಾ: ಬೀಜವು ಪಲ್ಯ.

**Mucuna pruriens,** *Dec.*—Carpopogon pr., *Roxb.*—Dolichos pr., *Lin.*—(Order Leguminosæ.)

*Tam.* Pūnaikkāli. *Tel.* Pilliyaḍugu. *Can.* Nasugunni, turačī, kāḍavare, nāyisoṇagu-baḷḷi. *Tu.* Nāyisoṇaṅgu. *Mal.* Nāyikuruṇa, čorivaḷḷi. *Kon.* Khavalyā-vāli. *San.* Ātmagupta.

## 279. ನಾಗಮಲ್ಲಿಗೆ, ದೊಡ್ಡಪಟಿಕೆ ಗಿಡ.

ತ. ನಾಗಮಲ್ಲಿ, ಉರಗಮಲ್ಲಿ. ತೆ. ನಾಗಮಲ್ಲಿ. ಮ. ಪುರುಕೊಲ್ಲಿ.

**ಹುಟ್ಟು:** ಮಲಬಾರತೀರ, ತಿರುವಂಕೋಡು. **ಪುಷ್ಪ:** ಫಾಲ್ಗುಣ, ಚೈತ್ರ.

**ಉಪಯೋಗ:** ಔಷ: ಬೇರು ಎಲೆಗಳನ್ನು ಗುದ್ದಿ ಲಿಂಬೆರಸದೊಡನೆ ಹಚ್ಚಿದರೆ, ಸಂಜು ಮತ್ತು ದದ್ದು ಗುಣ; ಬೀಜದ ಲೇಪದಿಂದ ಸಹ ದದ್ದು ಹರ. ಬೇರು ಜಂತು ವಿಷಕ್ಕೆ ಆಗುತ್ತದೆ. ಎಲೆಗಳ ರಸವನ್ನು ಕೊಟ್ಟು ವಿಷ ಕಾರಿಸಬಹುದು.

**Rhinacanthus communis,** *Nees.*—Justicia nasuta, *Lin.*—(Order Acanthaceæ.)

*Tam.* Nāgamalli, uragamalli. *Tel.* Nāgamallige. *Can.* Nāgamallige, doḍḍa-paṭike-giḍa. *Mal.* Purukolli.

## 280. ನಾಗಸಂಪಿಗೆ, ನಾಗಕೇಸರಿ ಮರ.

ತ. ನಾಗೇಶುರಮ್, ವೆಳುತ್ತಚಂಪಕಮ್, ನಾಗಪೂ. ತೆ. ನಾಗಕೇಸರಮು. ತು. ನಾಗಸಂಪೈ, ಕೇಶರ. ಮ. ನಾಗಚಂಪಕಮ್. ಕೊಂ. ನಾಗಚಾಂಪೆ. ಸಂ. ಕೇಶರಮ್, ನಾಗಪುಷ್ಪ, ನಾಗಮ್.

**ಹುಟ್ಟು:** ತೋಟಗಳು. **ಪುಷ್ಪ:** ಫಾಲ್ಗುಣ, ಚೈತ್ರ.

ಉಪಯೋಗ: ಔಷ: ಇದರ ಎಣ್ಣೆ ಹುಣ್ಣುಗಳಿಗೂ ವಾತದ ನೋವಿಗೂ ಉಪಯೋಗ. ಎಲೆಗಳ ಕಷಾಯ ಶ್ಲೇಷ್ಮಕ್ಕೂ ಕೆಮ್ಮಿಗೂ ಒಳ್ಳೇದು. ಬೇರು ಸರ್ಪವಿಷಕ್ಕಾಗುತ್ತದೆ. ಸಾಧಾ: ಪರಿಮಳದ ಮತ್ತು ಅಲಂಕಾರದ ವೃಕ್ಷ. ಎಣ್ಣೆ ಬೇರೆ ಕೆಲಸಕ್ಕೆ ಬಳಿಸಬಹುದು.

**Mesua ferrea,** *Lin.*—M. speciosa, *Chois.*—(Order Guttiferæ.)

*Tam.* Nāgešuram, veḷuttačampakam, nāgapū. *Tel.* Nāgakēsaramu. *Can.* Nāgasampige, nāgakēsari-mara. *Tu.* Nāgasampai, kēšara. *Mal.* Nāgačampakam. *Kon.* Nāgačāmpe. *San.* Kēšaram, nāgapushpa, nāgam.

## 281. ನಾಚಿಕೆ ಗಿಡ, ಮುಟ್ಲಮುರಿಕೆ, ಮುಡುಗುದಾವರೆ, ಮುಟ್ಟಿದರೆಮುನಿವ, ಲಜ್ಜಾವತಿ ಗಿಡ (Humble Plant).

ತ. ತೊಟ್ಟಾಲ್ಶುರುಂಗಿ, ತೊಟ್ಟಾಲ್ವಾಡಿ. ತೆ. ಮುನುಗುದಾಮರಮು, ಮುತ್ತವಪುಲಗಮುಚೆಟ್ಟು. ತು. ನಾಚಿಕೆದೈ. ಮ. ತೋಟ್ಟಂವಾಟಿ, ತಿಂಡಾರ್ಮಣಿ. ಸಂ. ಅಜಾಲಿಕಾಲಿಕಾ, ಶಬರಃ, ನಮಸ್ಕಾರೀ.

ಉಪಯೋಗ: ಔಷ: ಬೇರಿನ ಕಷಾಯ ಅಶ್ಮರಿ ಎಂಬ ಮೂತ್ರಕಲ್ಲಿಗೆ ಒಳ್ಳೇದು. ಸಹಮೂಲದ ರಸ ಎಣ್ಣೇ ಸಮೇತ ಕಾಸಿ ಮಕ್ಕಳ ಅಶಕ್ತಿಯೂ ಬಾಲಗ್ರಹವೂ ಹೋಗುವ ಹಾಗೆ ಹಚ್ಚುತ್ತಾರೆ.

**Mimosa pudica,** *Lin.*—(Order Leguminosæ.)

*Tam.* Toṭṭālšurungi, toṭṭālvāḍi. *Tel.* Munugudāmaramu, muttāvapulagamučeṭṭu. *Can.* Nāčike-giḍa, mutlamurike, muḍugudāvare, muṭṭidaremuniva, lajjāvati-giḍa. *Tu.* Nāčikedai. *Mal.* Tōṭṭa*m*vāṭi, tīṇḍārmaṇi. *San.* Ajālikālikā, šabara*h*, namaskārī.

## 282. ನಾತಹೂ, ಹೇಸಿಗೆಹೂ, ಕಸೂತಿಹೂವಿನ ಗಿಡ (Lantana).

ತು. ನಾತಪೂ. ಮ. ಅರಿಪ್ಪು. ಕೊಂ. ಗಣೆರೆ.

ಹುಟ್ಟು: ಸಾಧಾರಣ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಸಾಧಾ: ಬೇಲಿಗೆ ಆಗುತ್ತದೆ.

**Lantana camara,** *Lin.*—L. aculeata, *D.*—(Order Verbenaceæ.)

*Can.* Nātahū, hēsigehū, kasūtihuvina-giḍa. *Tu.* Nātapū. *Mal.* Arippu. *Kon.* Gaṇere.

## 283. ನಾಯಿತುಳಸಿ, ರಾಮತುಳಸಿ.

ತ. ಗಂಜಾಮ್ಕೋರೈ. ತೆ. ಕುಕ್ಕತುಳಸಿ. ತು. ನಾಯಿತೂಳಚಿ. ಮ. ಕಾಟ್ಟ್ರಾಮತುಳಸಿ. ಕೊಂ. ರಾಮತುಳಸಿ. ಸಂ. ಅಜಕ, ಗಂಭೀರಮ್, ತೀಕ್ಷ್ಣಮೂಣು, ಗಂಧಪಣೆಜ್ಜಕ.

ಉಪಯೋಗ: ಔಷ: ವಾತಕ್ಕೂ ಜ್ವರಕ್ಕೂ ನಾರುವ ಹುಣ್ಣುಗಳಿಗೂ ಒಳ್ಳೇದು.

**Ocimum canum,** *Sims.*—O. album, *Roxb.*—O. americanum, *Jacq.*—(Order Labiatæ.)

*Tam.* Gañjāmkōrai. *Tel.* Kukkatuḷasi. *Can.* Nāyituḷasi, rāmatuḷasi. *Tu.* Nāyitoḷači. *Mal.* Kāttu-rāmatuḷasi. *Kon.* Rāmatuḷasi. *San.* Ājaka, gambhīram, tīkshṇamāṇu, gandhapaṇirjjaka.

## 284. ನಾರುಂಬೆಳೆ, ಮವಲಂಗ, ಹೊಳೆನೆಕ್ಕಿ, ನೀರ್ವಾಲ ಮರ.

ತ. ಮಾವಿಲಿಂಗು, ಅದಿಚಾರಣಮ್. ತು. ತುದೆನೆಕ್ಕಿ. ಮ. ನೀರ್ವಾಲ್. ಸಂ. ಪಶುಗಂಧಾ, ಅಜಾಪಾ, ಶ್ವಸಹಾ.

ಹುಟ್ಟು: ಮಲಬಾರತೀರ, ಮೈಸೂರು. ಪುಷ್ಪ: ಮಾಘ, ಫಾಲ್ಗುಣ.

ಉಪಯೋಗ: ಔಷ: ಎಲೆಗಳು ಹೊಟ್ಟೆಗೆ ತಕ್ಕದ್ದು. ಚೆಕ್ಕೆಯ ಕಷಾಯ ನರಗಳ ಎಳತಕ್ಕೂ ಉದರವಾಯುವಿಗೂ, ಎಣ್ಣೆಯಲ್ಲಿ ಬೇಯಿಸಿ ಹಚ್ಚಿದರೆ ವಾತಕ್ಕೂ ಗುಣಕರ. ಚೆಕ್ಕೆ ನೀರಲ್ಲಿ ಗುದ್ದಿ, ಶುಂಠಿ, ಹಿಪ್ಪಲಿ, ಹಾಲು ಮತ್ತು ಎಳ್ಳೆಣ್ಣೆ ಕೂಡಿಸಿ ಲೇಪಿಸಿದರೆ, ನಂಜುನೀರು ಹೀರಿ, ಒಣಗಿ ಹೋಗುವದು. ಬೀಜಗಳನ್ನು ಅಕ್ಕಿಯೊಡನೆ ನೀರಲ್ಲಿ ಅರದು ಲೇಪ ಹಚ್ಚಿದರೆ, ಬಾವುಗಳು ಹಣ್ಣಾಗುವದಕ್ಕೆ ಒಳ್ಳೇದು. ಸಾಧಾ: ಕಾಯಿ ಗಾರೆಗೆ ಕೂಡಿಸಿ ಬಣ್ಣ ಹಾಕುವದರಲ್ಲಿ ಸಹ ಉಪಯೋಗವಾಗುತ್ತದೆ.

**Cratæva religiosa,** *Forst.*—C. Nurvala, *Ham.*—C. Roxburghii, *Br.*—(Order Capparideæ.)

*Tam.* Māvilingu, adičāraṇam. *Can.* Nārumbeḷe, mavalanga, hoḷenekki, nīrvāla-mara. *Tu.* Tudenekki. *Mal.* Nīrvāl. *San.* Pašugandhā, ajāpā, švasahā.

## 285. ನೀರುಗೋಳಿ, ಪುಳ್ಳಂಪುರಚಿ, ಪುಳ್ಳಂಪುಣಿಸೆ, ಹುಳಿಚಿಕ್ಕನ ಗಿಡ, ಹುಳಿಹುಣಿಚೆಯ ಗಿಡ (Yellow Wood Sorrel).

ತ. ಪುಳಿಯಾರೈ, ಅಡಾಚನಿ, ಚುಟಿಗಂ, ತೂಚಿಗಂ. ತೆ. ಪುಲಿಚಿಂತ, ಪುಲ್ಲಚೆಂಚಲಿ. ತು., ಮ. ಪುಳಿಯಾರಲ್. ಕೊಂ. ತೆಲ್‌ತುಪ್ಪಿ. ಹಿಂ. ಅಂರೂಲ್. ಸಂ. ಚಾಂಗೇರಿ, ಚುಕ್ರಿಕಾ, ಅಮ್ಲಲೋಣಿಕಾ.

ಹುಟ್ಟು: ಸಾಧಾರಣ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಎಲೆ ದಂಟು ಹೂವುಗಳಿಗೆ ತಂಪು ಗುಣ. ಅಜೀರ್ಣರೋಗಕ್ಕೂ ಅಶಕ್ತಿಗೂ ಸೇವಿಸುವರು. ಸಾಧಾ: ಪಲ್ಯಕ್ಕೆ ಒಳ್ಳೇ ಹುಳಿ; ಅದರ ರಸದಿಂದ ವಸ್ತ್ರದಲ್ಲಿಯ ಮಸಿಯ ಕಲೆಗಳನ್ನು ತೆಗಿಯಬಹುದು.

**Oxalis corniculata,** *Lin.*—O. pusilla, *Salisb.*—O. repens, *Thunb.*, *Jacq.*—(Order Geraniaceæ.)

*Tam.* Puḷiyārai, aḍāčani, čuṭigam, tūčigam. *Tel.* Puličinta, pullačeñčali. *Can.* Nīrugōḷi, puḷḷampurači, puḷḷampuṇise, huḷičikkana-giḍa, huḷihuṇičeya-giḍa. *Tu.*, *Mal.* Puḷiyāral. *Kon.* Teltuppi. *Hin.* Amrūl. *San.* Čāngēri, čukrikā, āmlalōṇikā.

### 286. ನೀರುಬ್ರಹ್ಮಿ, ಬ್ರಹ್ಮಿ (Thyme-leaved Gratiola).

ತ. ನೀರ್ಪಿರಮಿ, ಪಿರಮಿಯಪ್ಪೂಣ್ಡು. ತೆ. ಸಾಂಬ್ರಾಣಿಚೆಟ್ಟು. ಮ. ನೀರ್‍ಬ್ರಹ್ಮಿ. ಕೊಂ. ಬ್ರಹ್ಮಿ. ಹಿಂ. ಸಫೇತ್‍ಕಮ್ಮಿ. ಸಂ. ಶಿಷ್ಟಘ್ನ, ತೀವ್ರಾ.

**ಹುಟ್ಟು**: ನೀರುಳ್ಳ ಸ್ಥಳಗಳು. **ಪುಷ್ಪ**: ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ**: ಔಷ: ಬೇರು ದಂಟು ಎಲೆಗಳು ಮಲಮೂತ್ರಶೋಧನೆ ಮಾಡುವಂಥವು. ರಸವನ್ನು ನೆಲದ (ಅಂದರೆ ಕೆರೊಸೀನ್) ಎಣ್ಣೆಯೊಡನೆ ವಾತಕ್ಕೆ ತಿಕ್ಕುವರು.

**Herpestis Monniera,** *H. B. and K.*—Gratiola Monniera, *Lin.*—(Order Scrophularineæ.)

*Tam.* Nīrpirami, piramiyappūṇḍu. *Tel.* Sāmbrāṇičeṭṭu. *Can.* Nīrubrahmi, brahmi. *Mal.* Nīrbrahmi. *Kon.* Brahmi. *Hin.* Saphētkammi. *San.* Śishṭaghna, tīvrā.

### 287. ನೀರುಳ್ಳಿ, ಈರುಳ್ಳಿ, ಉಳ್ಳೀಗಡ್ಡೆ (Onion).

ತ. ಉಳ್ಳಿ, ಈರುಳ್ಳಿ, ವೆಂಗಾಯಮ್. ತೆ., ತು. ನೀರುಳ್ಳಿ. ಮ. ಈರುಳ್ಳಿ. ಕೊಂ. ಪಿಯಾವು. ಹಿಂ. ಪ್ಯಾಜ್. ಸಂ. ಉಗ್ರನಾಮಾ, ಝಲ್ಲರಿ, ಉಗ್ರಗಂಧಾ, ಪಲಾಂಡು.

**ಉಪಯೋಗ**: ಔಷ: ಕೆಂಡಗಳಲ್ಲಿ ಕಾಸಿದ ಗಡ್ಡೆಯ ಸೇಕ ಇಲ್ಲವೆ ಒತ್ತಡದಿಂದ ಕುರು ಬಾವುಗಳು ಹಣ್ಣಾಗುತ್ತವೆ. ಸಾಧಾ: ಇದರಿಂದ ಪಲ್ಯಕ್ಕೆ ಒಗ್ಗರಣೆ ಕೊಡುತ್ತಾರೆ. ಜೀರ್ಣಕ್ಕೆ ಅನುಕೂಲವಾಗಿದೆ.

**Allium Cepa,** *Lin.*—(Order Liliaceæ.)

*Tam.* Uḷḷi, īruḷḷi, vengāyam. *Tel., Tu.* Nīruḷḷi. *Can.* Nīruḷḷi, ēruḷḷi, uḷḷīgaḍe. *Mal.* Īruḷḷi. *Kon.* Piyāvu. *Hin.* Pyāj. *San.* Ugranāmā, jhallari, ugragandhā, palāṇḍu.

### 288. ನೀರ್ಲಕ್ಕಿ, ನಿರ್ಗುಂಡಿ, ನೊಚ್ಚಿ (Three-leaved Chaste Tree).

ತ. ನೀರ್ನೊಚ್ಚಿ. ತೆ. ನೀಲವಾವಿಲಿ. ತು. ಕರಿನೆಕ್ಕಿ. ಮ. ಕರುನೊಚ್ಚಿ. ಕೊಂ. ಕಾಳೊನಿಗುಂಡು. ಸಂ. ನೀಲನಿರ್ಗುಂಡಿ, ಕೃಷ್ಣನಿರ್ಗುಂಡಿ.

**ಹುಟ್ಟು**: ಕೊಂಕಣತೀರ, ದಖ್ಖಣ. **ಪುಷ್ಪ**: ಚೈತ್ರ, ವೈಶಾಖ.

**ಉಪಯೋಗ**: ಔಷ: ಬಿಸಿ ಮಾಡಿದ ಎಲೆ ಚಿಗರುಗಳು ಉಳುಕಿಗೂ ರಕ್ತಗಟ್ಟಿಗೂ ವಾತಕ್ಕೂ ನಂಜಿಗೂ ಬಾವಿಗೂ ಉಪಯೋಗ. ನೀರಲ್ಲಿ ಅರದ ಎಲೆಗಳು ಆಹಿಕಜ್ವರಕ್ಕೆ ಒಳ್ಳೇದು. ಬೇರು ಶ್ರೋಣಿತವಾತಕ್ಕೆ ಗುಣಕರ. ಎಲೆಗಳ ಕಷಾಯವನ್ನು ಹಾಕಿ ಕಾಸಿದ ಎಣ್ಣೆ ಬಾಲಗ್ರಹಕ್ಕೆ ಒಳ್ಳೇದು. ಕಾಯಿ ನರಗಳ ಮತ್ತು ತಲೆಯ ದೋಷಗಳಲ್ಲಿ ಉಪಯೋಗ.

**Vitex trifolia,** *Lin.*—V. ovata, *Thunb.*—(Order Verbenaceæ.)

*Tam.* Nīrnočči. *Tel.* Nīlavāvili. *Can.* Nīrlakki, nirguṇḍi, nočči. *Tu.* Karinekki. *Mal.* Karunočči. *Kon.* Kāḷo-niguṇḍu. *San.* Nīlanirguṇḍi, kṛishṇa nirguṇḍi.

## 289. ನೀಲ, ಶಿವಮಲ್ಲಿ ಗಿಡ.

ತ. ಶಿವನಾರ್ವೇಂಬು. ಮ. ಮಣಲಿ.

**ಹುಟ್ಟು**: ಬಂಜರು ಸ್ಥಳಗಳು. **ಪುಷ್ಪ**: ಸ್ವಲ್ಪಕಡಿಮೆ ಇಡೀ ವರುಷ.

**ಉಪಯೋಗ**: ಔಷ: ಎಲೆ ಹೂ ಚಿಗುರುಗಳಿಗೆ ತಂಪು ಗುಣ. ಅವುಗಳ ಕಷಾಯ ಕುಷ್ಠಕ್ಕೂ ಅಸಾಧ್ಯ ವ್ರಣಕ್ಕೂ ಬಾಣಂತಿಯ ಸಂಜಿಗೂ ಮಕ್ಕಳ ಕಜ್ಜಿಗೂ ಉಪಯೋಗ. ಬೇರು ಜಗಿದರೆ, ಹಲ್ಲುನೋವಿಗೂ ಬಾಯಗ್ರಕ್ಕೂ ಒಳ್ಳೇದು. ಸಮೂಲವನ್ನು ಅರದು ಬಾವಿಗೆ ಲೇಪಿಸುತ್ತಾರೆ.

**Indigofera aspalathoides,** *Vahl.*—I. aspalathifolia, *Roxb.*—Lespedeza juncea, *Wall.*—(Order Leguminosæ.)

*Tam.* Šivanārvēmbu. *Can.* Nīla, šivamalli-giḍa. *Mal.* Maṇali.

## 290. ನುಗ್ಗೆ, ಮೋಚಕ ಮರ (Drumstick or Horse-radish Tree).

ತ. ಮುರುಂಗ್ಯೆ, ಊಗಡನ್, ಚುಳಿಗ್ಯೆ, ಕರುಂಜನಮ್. ತೆ. ಮುನಗ, ಮೋಚಕಮು. ತು ನುಗೆ. ಮ. ಮುರಿಙ. ಕೊಂ. ಮತಿಂಗು. ಹಿಂ. ಸೇಗ್ವಾ, ಶಾಜ್ನ. ಸಂ. ಸನಾಮಕ, ಮೋಚಕ, ಹರಿತಪತ್ರ, ದ್ವಿತಿಗ್ರು.

**ಹುಟ್ಟು**: ತೋಟಗಳು. **ಪುಷ್ಪ**: ಪುಷ್ಯ, ಫಾಲ್ಗುಣ, ಜ್ಯೇಷ್ಠ, ಭಾದ್ರಪದ.

**ಉಪಯೋಗ**: ಔಷ: ಹಸಿ ಬೇರು ಪಕ್ಷವಾತಕ್ಕೂ ವಿಷಮಜ್ವರಕ್ಕೂ ಅಪಸ್ಮಾರಕ್ಕೂ ವಾತಕ್ಕೂ ಬೀಗಿಗೂ ಮೊಲ್ಲಾಗ್ರಕ್ಕೂ ಅಜೀರ್ಣರೋಗಕ್ಕೂ ಉಪಯೋಗ. ಬೇರಿನ ರಸದೊಡನೆ ಸಕ್ಕರೆ ಬೆರಿಸಿ ಮಾಡಿದ ಪಾನಕದಿಂದ ಸ್ವರಭಂಗ ಗುಣ. ಬೀಜದಲ್ಲಿ ಒಳ್ಳೇ ತರದ ಎಣ್ಣೆ ಸಿಕ್ಕುವದು; ಅದನ್ನು ವಾತಕ್ಕೂ ನೋವಿಗೂ ಹಚ್ಚುವರು. ಬೇರು ಎಲೆ ಚೆಕ್ಕೆಗಳು ಎಳವುರೋಗದಲ್ಲಿ ಉಪಯೋಗ. ಎಲೆಗಳ ರಸದೊಡನೆ ಸಣ್ಣ ಮೆಣಸನ್ನು ಅರದು, ಸ್ಥಿರತಪ್ಪಿದವರಿಗೆ ಹಣೆಗೂ ಕೆನ್ನೆಗಳಿಗೂ ಹಚ್ಚುವರು; ಉಪ್ಪಿನ ಸಂಗಡ ಮಕ್ಕಳ ಉದರವಾಯುವಿಗೆ ಕೊಡುವರು. ಎಲೆಗಳ ರಸದಿಂದ ಕುರುಗಳು ಹಣ್ಣಾಗುತ್ತವೆ. ಚೆಕ್ಕೆ ಸ್ವಲ್ಪ ಜೀರಿಗೇ ಸಂಗಡ ಗಂಜಿನೀರಲ್ಲಿ ಅರದು, ಬಾಯಿಹುಣ್ಣಿಗೂ ಹಲ್ಲುನೋವಿಗೂ ಉಪಯೋಗಿಸಬಹುದು. ಎಲೆಗಳನ್ನು ಬಾಡಿಸಿ ವ್ರಣಗಳಿಗೂ ಲಾಡಿಹುಳಕ್ಕೂ ಇಟ್ಟು ಕಟ್ಟುವರು. ಮರದ ಅಂಟು ಹಾಲಿನಲ್ಲಿ ಕಲಕಿಸಿ, ತಲೆನೋವಿನಲ್ಲಿ ಕಪಾಲಕ್ಕೆ ಹಚ್ಚುವರು; ಅದು ಕುರುಗಳಿಗೂ, ದದ್ದು ಮುಂತಾದ ಕಜ್ಜಿಗೂ ಸಹ ಆಗುತ್ತದೆ. ಒಣಗಿದ ಬೀಜ ತುಪ್ಪದಲ್ಲಿ ತೇದು ಹಚ್ಚಿದರೆ, ದೃಷ್ಟಿಮಾಂದ್ಯ ಇರುಳುಗಣ್ಣು ಸಹ ವಾಸಿ. ಚೆಕ್ಕೆಯ ರಸದ ಬಿಂದುಗಳನ್ನು ಕಿವಿಗೆ ಬಿಟ್ಟರೆ, ಹುಣ್ಣುಹುಳಗಳು

ಬಿದ್ದುಹೋಗುವವು. ಅಜೀರ್ಣರೋಗದಲ್ಲಿ ಚಿಕ್ಕೆಯ ರಸವನ್ನು ಮಜ್ಜಿಗೆ ಮತ್ತು ಉಪ್ಪು ಹಾಕಿ ಕುಡಿಯುವರು. ಸಾಧಾ: ಕೋಡು ಎಲೆ ಹೂವುಗಳು ಒಳ್ಳೇ ಪಲ್ಯ. ಎಣ್ಣೆ ಆಹಾರಕ್ಕೆ ಒಳ್ಳೇದು. ರಸದ ವಾಸನೆಗೆ ಸರ್ಪವು ಓಡಿಹೋಗುವದಂತೆ.

**Moringa pterygosperma,** *Gærtn.*—Guilandina Moringa, *Lin.*—M. oleifera, *Lam.*—Hyperanthera Moringa, *Vahl.*—M. zeylanica, *Pers.*, *Lam.*—(Order Moringeæ.)

*Tam.* Murungai, ūgaḍan, čuḷigai, karuñjanam. *Tel.* Munaga, mōčakamu. *Can.* Nugge, mōčaka-mara. *Tu.* Nurge. *Mal.* Muriṅa. *Kon.* Mašingu. *Hin.* Sēgvā, šājńa. *San.* Sanāmaka, mōčaka, haritapatra, dvišigru.

## 291. ನೆಗ್ಗಿಲುಮುಳ್ಳು, ನೆರಿಗಿಲು (Small Caltrops, Tribulus).

ತ. ನೆರುಂಜಿಲ್, ಅಚ್ಚುರಮ್, ತಿರಿಕಂಟಕಮ್. ತೆ. ಪಲ್ಲೇರು, ಚಿರಿಪಲ್ಲೇರು. ತು. ನೇಗಿಲ್‌ಮುಳ್ಳ್. ಮ. ನೆರಿಞ್ಞಿಲ್. ಕೊಂ. ನೆಗಲ್ಮುಳ್ಳು. ಮಹಾ. ಗೋಖರೂ. ಸಂ. ಆಕುರಾ, ವನಶೃಂಗಾಟ, ಸೂರ್ಯವರ್ಕ್ಕ.

**ಹುಟ್ಟು:** ಮಲಬಾರತೀರ, ತಿರುವಂಕೋಡು, ದಕ್ಷಿಣ. **ಪುಷ್ಪ:** ಇಡೀ ವರುಷ.

**ಉಪಯೋಗ:** ಔಷ: ಕಷಾಯ ಬೀಗಿಗೂ ಮೂತ್ರಕಟ್ಟಿಗೂ ಉಪಯೋಗ; ಮೂತ್ರಶೋಧಕ ಗುಣವುಳ್ಳದ್ದು. ಗಿಡದ ಬೂದಿಯನ್ನು ಬೀಗು ವಾತರೋಗಗಳುಳ್ಳವರಿಗೆ ತಿಕ್ಕುತ್ತಾರೆ. ಸೊಪ್ಪು ಕ್ರಿಮಿಗಾಗುತ್ತದೆ; ಬೀಜ ಬಲ ಕೊಡುವಂಥಾದ್ದು.

**Tribulus terrestris,** *Lin.*—(Order Zygophylleæ.)

*Tam.* Neruñjil, aččuram, tirikaṇṭakam. *Tel.* Pallēru, čiripallēru. *Can.* Neggilumuḷḷu, nerigilu. *Tu.* Nēgilumuḷḷu. *Mal.* Neriñil. *Kon.* Negalmuḷḷu. *Mah.* Gōkharū. *San.* Akurā, vanašṛingāṭa, sūryavarkka.

## 292. ನೆಲಕಡಲೆ, ಬೇರುಕಡಲೆ (Ground Nut, Manilla Nut).

ತ. ವೇರ್ಕಡಲೈ. ತೆ. ವೇರುಶನಗಲು. ತು. ನೆಲಕಡಲೆ. ಮ. ನೆಲಕಡಲಕ. ಕೊಂ. ನೆಲಗಡ್ಲೆ.

**ಹುಟ್ಟು:** ಕೃಷಿಗಿಡ. **ಪುಷ್ಪ:** ಜ್ಯೇಷ್ಠ.

**ಉಪಯೋಗ:** ಸಾಧಾ: ಈ ಗಿಡದ ಕೋಡುಗಳು ನೆಲದ ಅಡಿಗೆ ಹೋಗಿ ಅಲ್ಲಿ ಬೆಳೆದು ಪಕ್ವವಾಗುತ್ತವೆ. ಇವುಗಳಲ್ಲಿರುವ ಬೀಜಗಳನ್ನು ಹುರಿದು ತಿನ್ನುತ್ತಾರೆ. ಬೀಜದಿಂದ ಪಲ್ಯ ಮಾಡುವರು. ಬೀಜಗಳಲ್ಲಿ ಅರೆವಾಸಿ ಭಾರದಷ್ಟು ಎಣ್ಣೆ ಉಂಟು; ಅದು ದೀಪಕ್ಕೂ ಆಹಾರಕ್ಕೂ ಒಳ್ಳೇದು. ಇದಲ್ಲದೆ ಗಿಡದ ಸೊಪ್ಪು ದನಗಳಿಗೆ ಚಲೋ ಆಹಾರ. ಈ ಗಿಡವು ಬಹಳ ಪ್ರಯೋಜನವುಳ್ಳದ್ದಾದ್ದರಿಂದ ರಹಿತರು ಅದನ್ನು ನೆಟ್ಟು ಬೆಳಿಸಿದರೆ, ಅವರಿಗೆ ಲಾಭ ತಪ್ಪದು.

**Arachis hypogæa,** *Lin.*—A. Americana, *Tenor.*—A. Africana, *Lour.*—(Order Leguminosæ.)

*Tam.* Vērkaḍalai. *Tel.* Vērušanagalu. *Can.* Nelakaḍale, bērukaḍale. *Tu.* Nelakaḍale. *Mal.* Nelakaḍalaka. *Kon.* Nelagaḍle.

### 293. ನೆಲಕುಂಬಳ, ಗುಡ್ಡಗೆಣಸು.

ತ. ಫಲ್ಮೋದಿಕ. ತೆ. ನೇಲಗುಮ್ಮುಡು, ಭೂಚಕ್ರಗಡ್ಡ. ತು. ನೆಲಕುಂಬುಡ. ಮ. ಮೊತಲ್ಕಂಟ. ಕೊಂ. ಭುಂಯ್ಕುವಾಳೆ. ಸಂ. ವೃಷ್ಯವಲ್ಲಿ, ಕ್ಷೀರಕಂದಾ, ಶ್ರೇಷ್ಠಕಂದಾ, ವಿರಾರಿ.

**ಹುಟ್ಟು**: ದಕ್ಷಿಣ ಹಿಂದುಸ್ಥಾನ, ಬಂಗಾಳ. **ಪುಷ್ಪ**: ಜ್ಯೇಷ್ಠದಿಂದ ಭಾದ್ರಪದದ ವರೆಗೆ.

**ಉಪಯೋಗ**: ಔಷ: ಗಡ್ಡೆ ಮಲಭೇದಿ. ಅದರ ಕಷಾಯ ಕ್ಷಯರೋಗಿಗಳಿಗೆ ಒಳ್ಳೇದು; ಬೇರೆ ಔಷಧಜೀನಸುಗಳನ್ನು ಹಾಕಿ ಗಡ್ಡೆಯ ಲೇಹ್ಯ ಮಾಡಿಕೊಡುವರು. ಸಾಧಾ: ರೋಗಿಗಳು ತಿನ್ನುತ್ತಾರೆ; ಹೊಟ್ಟೆಗೆ ಭಾರವಾದದರಿಂದ ಆಹಾರಕ್ಕೆ ಅಷ್ಟು ತಕ್ಕದ್ದಲ್ಲ.

**Ipomæa digitata,** *Lin.*—Batatas paniculata, *Dec.*—Convolvulus paniculatus, *Lin.*—C. roseus, *Kunth.*—Ipomæa eriosperma, *Beauv.*—I. mauritiana, *Jacq.*—I. paniculata, *Br.*—(Order Convolvulaceæ.)

*Tam.* Phalmōdika. *Tel.* Nēlagummuḍu, bhūčakragaḍḍa. *Can.* Nelakumbaḷa, guḍḍageṇasu. *Tu.* Nelakumbuḍa. *Mal.* Motalkaṇta. *Kon.* Bhuyṅkuvāḷe. *San.* Vṛishyavalli, kshīrakandā, šrēshṭhakandā, virāri.

### 294. ನೆಲತಾಳೆ, ನೆಲದಾಳಿ.

ತ. ನಿಲಪ್ಪನೈ, ತಿರಕ್ಕತ್ತಾರು, ತಲತ್ತಾದು. ತೆ. ನೇಲತಾಡಿಚೆಟ್ಟು, ಮುಸಲಿ. ತು. ನೆಲಮುಂದ. ಮ. ನಿಲಪ್ಪನ. ಕೊಂ. ಭುಂಯಿಮಾಡ್ಡಿ. ಹಿಂ. ನಿಯಾಮುಸಿ. ಸಂ. ಭೂಮಿತಾಳ, ಭೂತ, ಬಹುಲವಲ್ಕಲ.

**ಹುಟ್ಟು**: ಸಾಧಾರಣ. **ಪುಷ್ಪ**: ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ**: ಔಷ: ಬೇರನ್ನು ಅಶಕ್ತಿಯುಳ್ಳವರಿಗೆ ಹಾಲಿನಲ್ಲಿ ಕೊಡಬಹುದು. ಎದೆನೋವು ಮತ್ತು ಅಸ್ಥಿಜ್ವರದಲ್ಲಿ ಉಪಯೋಗ. ಸಣ್ಣ ಹರಳ ಬೇರಿನ ಸಂಗಡ ಕಷಾಯ ಮಾಡಿ ಶೂಲರೋಗದಲ್ಲಿ ಸೇವಿಸುವರು. ಸಾಧಾ: ಜೇರು ಪುಷ್ಟಿ ಕೊಡುವಂಥಾದ್ದು.

**Curculigo orchioides,** *Gærtn.*—(Order Amaryllideæ.)

*Tam.* Nilappanai, tirakkattāru, talattādu. *Tel.* Nēlatāḍičettu, musali. *Can.* Nelatāḷe, neladāḷi. *Tu.* Nelamunda. *Mal.* Nilappana. *Kon.* Bhuṅyimāḍḍi. *Hin.* Niyāmusi. *San.* Bhūmitāḷa, bhūta, bahulavalkala.

### 295. ನೆಲತಾವರೆ, ಒರಲೆತಾವರೆ (Habenaria).

**ಹುಟ್ಟು**: ದಕ್ಷಿಣ ಕನ್ನಡದಲ್ಲಿ ಬಹಳ ಸಾಧಾರಣ, ಎಲ್ಲಾ ಕಾಡುಗುಡ್ಡೆಗಳಲ್ಲಿ. **ಪುಷ್ಪ**: ಶ್ರಾವಣ, ಭಾದ್ರಪದ.

**ಉಪಯೋಗ**: ಔಷ: ಇದರ ಗಡ್ಡೆ ಧಾತುಪುಷ್ಟಿಗಾಗಿ, ಅಂದರೆ ಅಸ್ವಸ್ಥದಲ್ಲಿ ಬಿದ್ದವರ ದೇಹಪುಷ್ಟಿಗಾಗಿ ಮೈಗೆ ಹಚ್ಚುವ ಎಣ್ಣೆಗೆ ಹಾಕುತ್ತಾರೆ.

**Habenaria rotundifolia,** *D.*—(Order Orchideæ.)

*Can.* Nela-tāvare, orale-tāvare.

### 296. ನೆಲನಾರಿಂಗ, ನೆಲಕಂಚಿ ಗಿಡ.

ಮ. ನಿಲನಾರಕಂ. ಕೊಂ. ಭುಂಯಿನಾರಿಂಗ.

**ಹುಟ್ಟು**: ಮಲಬಾರತೀರ, ತಿರುವಂಕೋಡು. **ಪುಷ್ಪ**: ಚೈತ್ರ, ವೈಶಾಖ.

**ಉಪಯೋಗ**: ಔಷ: ಬೇರು ಎಲೆಗಳು ಪಿತ್ತಕ್ಕೂ ವಾತಕ್ಕೂ ಅಜೀರ್ಣಕ್ಕೂ ಕಜ್ಜಿಗೂ ಉಪಯೋಗ. ಸಾಧಾ: ಸಾರು ಮಾಡುತ್ತಾರೆ.

**Naregamia alata,** *W. and A.*—Turræa alata, *Wight.*—(Order Meliaceæ.)

*Can.* Nelanāringa, nelakañči-giḍa. *Mal.* Nilanārakam. *Kon.* Bhuṅyināringa.

### 297. ನೆಲನೆಲ್ಲಿ, ಕಿರುನೆಲ್ಲಿ.

ತ. ನಿಲನೆಲ್ಲಿ. ತೆ. ನೇಲ ಉಸರಿಕ. ತು. ನೆಲನೆಲ್ಲಿ. ಮ. ಕೀರ್ಟಾನೆಲ್ಲಿ. ಕೊಂ. ಭುಂಯಾವಾಳಿ.

**ಹುಟ್ಟು**: ಸಾಧಾರಣ. **ಪುಷ್ಪ**: ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ**: ಔಷ: ಹಾಲಿನಲ್ಲಿ ಅರದು ಊತಿಗೂ ಅರಸಿನಮುಂಡಕ್ಕೂ ಕೊಡುತ್ತಾರೆ. ಕಷಾಯ ತಲೆನೋವಿಗಾಗುತ್ತದೆ.

**Phyllanthus maderaspatensis,** *Lin.*—(Order Euphorbiaceæ.)

*Tam.* Nilanelli. *Tel* Nēla-usarika. *Can.* Nelanelli, kirunelli. *Tu.* Nelanelli. *Mal.* Kīrṭānelli. *Kon.* Bhuṅyāvāḷi.

### 298. ನೆಲಪರಂಡೆ, ಗುಬ್ಬಿನಖ (Cheilanthus).

**ಹುಟ್ಟು**: ಮಳೆಗಾಲದಲ್ಲಿ ಎಲ್ಲೆಲ್ಲಿಯೂ ಬೆಳಿಯುವದು.

**ಉಪಯೋಗ**: ಸಾಧಾ: ಹೆಂಗಸರು ಕೈಮದರಂಗಿ ಸೊಪ್ಪನ್ನು ಅರೆಯುವಾಗ ಇದನ್ನು ಸಹ ಕೆಂಪು ಬಣ್ಣಕ್ಕಾಗಿ ಬೆರಸುವರು.

**Cheilanthus farinosa,** *Kaulf.*—(Order Filices.)

*Can.* Nela-paranḍe, gubbi-nakha.

### 299. ನೆಲಬೇವು, ಊರಕಿರಿಯಾತು.

ತ. ನಿಲವೇಂಬು, ವೇರ್‌ಕಿರಿಯಾತ್ತು. ತೆ. ನೇಲವೇಮು. ತು. ಕಿಯ್ರಾತ್. ಮ. ಕಿರಿಯಾತು, ನಿಲವೇಪು. ಕೊಂ. ಕಿರಾತು. ಹಿಂ. ಚರಾಯತ್, ಕಿಯ್ರಾತ್. ಸಂ. ಕುನಿಂಬ, ಮಹಾತೀತ, ನಾರ್ಯತಿಕ್ತ.

**ಹುಟ್ಟು**: ಮರಗಳ ಬುಡದಲ್ಲಿ. **ಪುಷ್ಪ**: ಕಾರ್ತಿಕದಿಂದ ಮಾಘದ ವರೆಗೆ.

**ಉಪಯೋಗ**: ಔಷ: ಕಹಿಯಾದ ಈ ಗಿಡವು ಹೊಟ್ಟೆಗೆ ಒಳ್ಳೇದು. ಅಜೀರ್ಣಕ್ಕೂ ಹೊಟ್ಟೇ ಅಕ್ರಮಕ್ಕೂ ಬಲಹೀನತ್ವಕ್ಕೂ ರಕ್ತಾತಿಸಾರ ಸನ್ನಿಗಳಿಗೂ ಅರು

ಚಿಗೂ ವರಿಸೇ ಜ್ವರಕ್ಕೂ ಪ್ರತ್ಯೇಕವಾಗಲೀ, ಬೇರೆ ಔಷಧಗಳ ಸಹಿತವಾಗಲೀ ಕೊಟ್ಟರೆ, ಒಳ್ಳೇ ಫಲಕರ.

**Andrographis paniculata,** *Nees.*—Justicia paniculata, *Burm.*—(Order Acanthaceæ.)

*Tam.* Nilavēmbu, vērkiriyāttu. *Tel.* Nēlavēmu. *Can.* Nelabēvu, ūrakiriyātu. *Tu.* Kiryātu. *Mal.* Kiriyātu, nilavēpu. *Kon.* Kirātu. *Hin.* Čarāyat, kiryāt. *San.* Kunimba, mahātīta, nāryatikta.

### 300. ನೆಲಮುಚ್ಚಳ, ನೆಲಮುಚ್ಚಿಲು, ಹಸ್ತಿಪಾದ (Elephant's Foot).

ತು. ನೆಲಮುಚ್ಚಳ. ಮ. ಆನೆಯಡಿ, ಆನೆಚೊವಡಿ. ಕೊಂ. ಮುಸಳಕೋಂಬು. ಸಂ. ಹಸ್ತಿಪಾದ, ವಿದುಲ.

ಈ ಗಿಡದ ಎಲೆಗಳು ನೆಲಕ್ಕೆ ಪೂರಾ ತಾಗಿಕೊಂಡಿರುತ್ತವೆ. ಹೂವು ಸಣ್ಣದು.

ಹುಟ್ಟು: ದಕ್ಷಿಣ ಕನ್ನಡ ಮತ್ತು ಮಲಬಾರದಲ್ಲಿ ಬಹಳ ಸಾಧಾರಣವಾಗಿ ಸಿಕ್ಕುತ್ತದೆ. ಪುಷ್ಪ: ಆಶ್ವೀಜ.

ಉಪಯೋಗ: ಔಷ: ಬೇರು ಮತ್ತು ಎಲೆಗಳನ್ನು ಕಷಾಯ ಮಾಡಿ ಮೂತ್ರ ಕೃಛ್ರಕ್ಕೆ ಕೊಡುತ್ತಾರೆ.

**Elephantopus scaber,** *Lin.*—(Order Compositæ.)

*Can.* Nelamuččaḷa, nelamuččilu, hastipāda. *Tu.* Nelamuččaḷa. *Mal.* Āne-yaḍi, āne-čovaḍi. *Kon.* Musaḷakōmbu. *San.* Hastipāda, vidula.

### 301. ನೆಲಮುಚ್ಚಳ (Gymnostachyum).

ಈ ಗಿಡಕ್ಕೆ ಹಳದಿ ಬಣ್ಣದ ಹೂವೂ ಕೆಂಪು ಬಣ್ಣದ ಆವರಿಕೆಯೂ ಇರುವದು; ಕಾಯಿ ಕೋಡು. ಇದನ್ನು ಹಸ್ತಿಪಾದವೆಂಬ ಮತ್ತೊಂದು ವಿಧದ ನೆಲಮುಚ್ಚಳದಿಂದ ವಿಶೇಷಿಸಬೇಕು.

ಹುಟ್ಟು: ನೆರಳಿನ ತಂಪಾದ ಜಾಗಗಳಲ್ಲಿ. ಪುಷ್ಪ: ಶ್ರಾವಣ, ಭಾದ್ರಪದ.

ಉಪಯೋಗ: ಔಷ: ಈ ಗಿಡದ ಬೇರನ್ನೂ ಕುರ್ಲೆ ಎಂಬ ಮದ್ದಿನ ಗಡ್ಡೆಯನ್ನೂ ನಿಂಬೆರಸದಲ್ಲಿ ಅರೆದು ನಾಲಿಗೆಗೆ ಹಚ್ಚಲು ಯಾವ ತರದ ಅಗ್ರವಿದ್ದರೂ ಪರಿಹಾರ.

**Gymnostachyum febrifugum,** *Benth.*—(Order Acanthaceæ.)

*Can.* Nelamuččaḷa.

### 302. ನೆಲಸಂಪಿಗೆ, ಉತ್ಪಲಹೂ, ಕಲ್ಲುಕೂವೆ, ಕುಮುದಗಡ್ಡೆ (Indian Crocus).

ತ. ನೇಪ್ಪಿರ್‍ಚಿನ್. ತೆ. ಭೂಚಂಪಕಮು. ಮ. ಚೆಂಚನೀರ್‍ಕಿಟಿಜಿ. ಕೊಂ. ಭುಯಿಂಚಾಂಪೆ.

ಹುಟ್ಟು: ತೋಟಗಳು. ಪುಷ್ಪ: ಫಾಲ್ಗುಣ, ಚೈತ್ರ.

**ಉಪಯೋಗ:** ಔಷ: ಗಿಡವನ್ನು ಒಣಗಿಸಿ ಪುಡಿ ಮಾಡಿ ಲೇಪಿಸಿದರೆ, ಘಾಯ ಗಳಿಗೆ ಒಳ್ಳೇದು. ಅದರ ಕಷಾಯ ಮಾಡಿ ಕುಡಿದರೆ, ರಕ್ತಗಟ್ಟಿದ್ದಲ್ಲಿ ಗುಣ. ಗಡ್ಡೆ ಸಾಧಾರಣ ಶೋಭೆಯಲ್ಲಿ ಉಪಯೋಗ. ಹೂವಿಗೆ ಪರಿಮಳ.

**Kæmpferia rotunda,** *Lin.*—K. longa, *Jacq.*—(Order Scitamineæ.)

*Tam.* Nērppičin. *Tel.* Bhūčampakamu. *Can.* Nelasampige, utpalabū, kallukūve, kumuda-gaḍḍe. *Mal.* Čeṅčinīrkiḻaṅu. *Kon.* Bhuyṅčampe.

## 303. ನೆಲಹಿಪ್ಪಲಿ, ಕೆರೆಹಿಪ್ಪಲಿ ಸೊಪ್ಪು.

ತ. ಪೊಡುದಳೈ, ತಲೈಬೋಡಂ. ತೆ. ಬೊಕ್ಕೆನ. ಮ. ಕಾಟ್ಟುತಿಪ್ಪಲಿ.

**ಹುಟ್ಟು:** ನೀರಿನ ಹತ್ತಿರ. **ಪುಷ್ಪ:** ಇಡೀ ವರುಷ.

**ಉಪಯೋಗ:** ಔಷ: ಚಿಗುರುಗಳು ಮಕ್ಕಳ ಅಜೀರ್ಣ ಅತಿಸಾರಗಳಿಗೆ ಉಪ ಯೋಗ. ಬಾಣಂತಿಗೂ ಕೊಡುತ್ತಾರೆ.

**Lippia nodiflora,** *Rich.*—Blairia nod., *Gært.*—Verbena capitata, *Forsk.*—V. nodifl., *Lin.*—Zapania nodifl., *Juss.*, *Pers.*—(Order Verbenaceæ.)

*Tam.* Poḍudaḷai, talaibōḍam. *Tel.* Bokkena. *Can.* Nelahippali, kere-hippali-soppu. *Mal.* Kāṭutippali.

## 304. ನೆಲಾವರೆ, ನೆಲಾವರಿಕೆ, ಸೊನಾಮುಖಿ ಗಿಡ (Tinnevelly Senna).

ತ. ನಿಲಾವಿರೈ, ನಿಲವಾಗೈ. ತೆ. ನೇಲಪೊನ್ನ. ಮ. ನಿಲವಾಕ. ಕೊಂ. ಸೋನಾಮಕ್ಕಿ. ಹಿಂ. ಸುನ್ನಾಮಕ್ಕಿ. ಸಂ. ಭೂಪದ್ಮ, ಭೂಮಿಹಾರಿ, ಸ್ಥಲೋತ್ಪಲ.

**ಹುಟ್ಟು:** ಮಲಬಾರತೀರ, ಗುಜರಾತು. **ಪುಷ್ಪ:** ಆಶ್ವೀಜದಿಂದ ಮಾರ್ಗಶಿರದ ವರೆಗೆ.

**ಉಪಯೋಗ:** ಔಷ: ಒಣ ಎಲೆಗಳು ಉತ್ತಮ ಜುಲಾಬಿನ ಔಷಧ. ಕಾಮಿಲೆ ಯಲ್ಲಿಯೂ ಮೂಲವ್ಯಾಧಿಯಲ್ಲಿಯೂ ಆಗಾಗ್ಯೆ ಉಪಯೋಗಿಸಬಹುದು. ಕಲ್ಕ ಮಾಡುವ ಕ್ರಮ ಹ್ಯಾಗಂದರೆ: ಒಣ ಎಲೆಗಳನ್ನು ತಣ್ಣೀರಲ್ಲಿ ಹಾಕಿ, ಪಾತ್ರೆ ಚನ್ನಾಗಿ ಮುಚ್ಚಿ, ೨೪ ತಾಸುಗಳ ಪರ್ಯಂತರ ಇಟ್ಟ ತರುವಾಯ ಆ ನೀರು ತೆಗದು ಉಪ ಯೋಗಿಸಬೇಕು. ಇದು ಸಾಧಾರಣ ರೀತಿಯಲ್ಲಿ ಮಾಡಿದ ಕಷಾಯಕ್ಕಿಂತ ಹೆಚ್ಚು ಫಲಕರವಾದ್ದು.

**Cassia angustifolia,** *Vahl.*—C. lanceolata, *Wall.*—Senna officinalis, *Roxb.*—(Order Leguminosæ.)

*Tam.* Nilāvirai, Nilavāgai. *Tel.* Nēlaponna. *Can.* Nelāvare, nelāvarike, sonāmukhi-giḍa. *Mal.* Nilavāka. *Kon.* Sōnāmakki. *Hin.* Sunnāmakki. *San.* Bhūpadma, bhūmihāri, sthalōtpala.

### 305. ನೆಲ್ಲಿ ಮರ (Gooseberry Tree, Awla Tree).

ತ. ನೆಲ್ಲಿಮರಮ್, ಆಮಲಕಮ್, ತಾತಿರಿ. ತೆ. ಉಸಿರಿಕ, ತ್ರಿಫಲಮು, ನೆಲ್ಲಿ, ಆಮಲಕಮು. ತು. ನೆಲ್ಲಿ. ಮ. ಆಮಲಕಮ್, ನೆಲ್ಲಿ. ಕೊಂ. ಆವಾಳೊ. ಹಿಂ. ಅಮ್ಲಿಕಾ, ಔಂಲಾ. ಮಹಾ. ಆವಳಾ. ಸಂ. ಧಾತ್ರಿ, ಆಮ್ರಫಲಂ, ಆದಿಫಲ, ಆಮಾಮಲಕಂ.

**ಹುಟ್ಟು**: ತೀರಪ್ರಾಂತಗಳು, ದಕ್ಷಿಣ. **ಪುಷ್ಪ**: ಚೈತ್ರದಿಂದ ಕಾರ್ತಿಕದ ವರೆಗೆ.

**ಉಪಯೋಗ**: ಔಷ: ನೆಲ್ಲಿಚಟ್ಟು ತಂಪು ಗುಣವುಳ್ಳದ್ದು; ಪಿತ್ತಶಮನ, ಜ್ವರಕ್ಕೆ ಮತ್ತು ಬಹು ಮೂತ್ರಕ್ಕೆ ಉಪಯೋಗ. ಎಲೆಗಳ ಕಲ್ಕನೀರು ಉರಿಗಣ್ಣಿಗೆ ಒಳ್ಳೇದು. ಒಣಗಿದ ಚಟ್ಟು ಮಲಶೋಧನೆ ಮಾಡುತ್ತದೆ; ಅದರ ಕಷಾಯ ಜ್ವರಕ್ಕೂ, ಸಕ್ಕರೆಯೊಡನೆ ತಲೆಗಿರಿತಕ್ಕೂ ಕೊಡುತ್ತಾರೆ. ಹಸಿ ಎಲೆಗಳು ಮೊಸರಿನ ಸಂಗಡ ಅತಿಸಾರಕ್ಕೆ ಉಪಯೋಗ. ಬೇರಿನ ಚಕ್ಕೆ ಬಾಯಿಹುಣ್ಣಿಗೂ ಹೊಟ್ಟೆಯೊಳಗಣ ಅಗ್ರಕ್ಕೂ ವ್ರಣಗಳನ್ನು ತೊಳೆಯುವದಕ್ಕೂ ಉಪಯೋಗ. ಮರದ ಚಕ್ಕೆಯ ರಸ ಅತಿಸಾರಕ್ಕೂ ಅರಸಿನ ಮುಂಡಿಗೆಗೂ ಕೊಡುವರು. ಚಿಗುರುಗಳನ್ನು ಮಜ್ಜಿಗೆಯಲ್ಲಿ ಅರದು ಕೊಟ್ಟರೆ, ಅಜೀರ್ಣ ಗುಣ. ಸಾಧಾ: ಕಾಯಿ ತಿಂದು, ಉಪ್ಪಿನಕಾಯಿ ಮಾಡಿ, ಪಲ್ಯದಂತೆ ಬಳಿಸಿ, ಲೇಹ್ಯ ಸಹ ಮಾಡುತ್ತಾರೆ. ಚಕ್ಕೆ ಚರ್ಮ ಹದ ಮಾಡುವದಕ್ಕೂ ಬಣ್ಣಕ್ಕೂ ಬರುತ್ತದೆ. ಮರ ಕೆಲಸಕ್ಕೆ ಒಳ್ಳೇದು. ಬಾವೀ ನೀರನ್ನು ಶುದ್ಧ ಮಾಡಲಿಕ್ಕೆ ಗೆಲ್ಲುಗಳನ್ನು ಅದರೊಳಗೆ ಹಾಕುವರು; ಮರದ ಚೌಕ ಮಾಡಿ ಬಾವಿಯ ತಳಕ್ಕೆ ಇಡುವರು.

**Phyllanthus Emblica**, *Lin.*—Emblica officinalis, *Gært.*—(Order Euphorbiaceæ.)

*Tam.* Nellimaram, āmalakam, tātiri. *Tel.* Usirika, triphalamu, nelli, āmalakamu. *Can.* Nelli-mara. *Tu.* Nelli. *Mal.* Āmalakam, nelli. *Kon.* Āvāḷo. *Hin.* Amlikā, au*n*lā. *Mah.* Āvaḷā. *San.* Dhātri, āmraphalam, ādiphala, āmāmalakam.

### 306. ನೇರಲು, ನಾಯಿನೇರಳೆ, ನೀರಲೆ ಮರ (Jamoon, Black Plum).

ತ. ನಾವಲ್. ತೆ. ನೇರೇಡು. ತು. ನೇರೊಲ್. ಮ. ನಾವಲ್, ಕಿಳಕ್ಕನ್ಞೇರಲ್. ಕೊಂ., ಮಹಾ. ಜಾಂಬ್. ಹಿಂ. ಜಮ್ಮೂನ್. ಸಂ. ಬೃಹಸ್ಪತಿ, ಜಾಂಬವಮ್.

**ಹುಟ್ಟು**: ಸಾಧಾರಣ. **ಪುಷ್ಪ**: ಫಾಲ್ಗುಣ, ಚೈತ್ರ.

**ಉಪಯೋಗ**: ಔಷ: ಒಗರು ಗುಣ. ಬೇರಿನ ಕಷಾಯ ಅಜೀರ್ಣರೋಗಕ್ಕೆ ಆಗುತ್ತದೆ; ಚಕ್ಕೆಯದು ಕರುಳುಗಳ ಅಕ್ರಮಕ್ಕೂ ಕೆಟ್ಟ ಹುಣ್ಣುಗಳನ್ನು ತೊಳೆಯುವದಕ್ಕೂ ಉಪಯೋಗ; ಜ್ವರವಿರುವವರಿಗೆ ಸಹ ಕುಡಿಸುವರು. ಹಣ್ಣಿನ ರಸದಿಂದ ಮಾಡಿದ ಲೇಹ್ಯ ಹೊಟ್ಟೆಗೆ ಹಿತವಾದದ್ದು; ದೀರ್ಘಕಾಲದ ಜುಲಾಬಿಗೂ ಒಳ್ಳೇದು.

**Eugenia Jambolana**, *Lam.*—Syzigium Jambolanum, *Dec.*—Calyptranthes Jambolana, *Willd.*—(Order Myrtaceæ.)

*Tam.* Nāval. *Tel.* Nērēḍu. *Can.* Nēralu, nāyinēraḷe, nīrale-mara. *Tu.* Nēroḷu. *Mal.* Nāval, kiḻakkan-ńēral. *Kon.*, *Mah.* Jāmb. *Hin.* Jammūn. *San.* Bṛihaspati, jāmbavam.

### 307. ನೇಹಿ, ಬೆಟ್ಟಹೊನ್ನೆ ಮರ.

ತೆ. ನೆಮ್ಮಿಚೆಟ್ಟು, ವಂಜುಲಮು, ತಿನಿಶವೃಕ್ಷಮು.

ಹುಟ್ಟು: ದಕ್ಷಿಣ, ಅಯೋಧ್ಯ. ಪುಷ್ಪ: ಚೈತ್ರದಿಂದ ಆಷಾಢದ ವರೆಗೆ.

ಉಪಯೋಗ: ಔಷ: ಚಕ್ಕೆಯ ಹಗಿನು ಕರುಳುಗಳ ಅಕ್ರಮಕ್ಕೆ ಒಳ್ಳೇದು. ಸಾಧಾ: ಮರ ಕೆಲಸಕ್ಕೆ ಬರುತ್ತದೆ.

**Ougeinia dalbergioides**, *Benth.*—Dalbergia ougeinensis, *Roxb.*—(Order Leguminosæ.)

*Tel.* Nemmičeṭṭu, vañjulamu, tinišavṛikshamu. *Can.* Nēhi, beṭṭahonne-mara.

### 308. ಪಚ್ಚೆಹೆಸರು (Green Gram).

ತ. ಪಚ್ಚೈಪಯರು, ಮೂಂಗು. ತೆ. ಪಚ್ಚಪೆಸಲು. ತು. ಪದೆಂಗಿ. ಮ. ಚೆರುಪಯರು. ಕೊಂ. ಮೂಗು. ಹಿಂ. ಮೂಂಗ್. ಸಂ. ಮುದ್ಗ, ಕಾಂಭೋಜಿ, ಮಹಾಸಹಾ.

ಹುಟ್ಟು: ಕೃಷಿ ಗಿಡ. ಪುಷ್ಪ: ಮಾರ್ಗಶಿರ, ಪುಷ್ಯ.

ಉಪಯೋಗ: ಔಷ: ಪಾದರಸ ಉಪಯೋಗಿಸಿದವರಿಗೆ ಅಪಾಯ ಬರುವಲ್ಲಿಯೂ, ಮೈಲಿಗೆ ಹೊರಗೆ ಬಾರದೆ ಮೋಸ ಇರುವಲ್ಲಿಯೂ ಈ ಧಾನ್ಯದ ಕಷಾಯಕ್ಕೆ ಸಕ್ಕರೆ ಹಾಕಿ ಕುಡಿಯುತ್ತಾರೆ; ಹಾಲು ಹಾಕಿ ಕುಡಿದರೆ, ಪಿತ್ತ ಹರ. ಸಾಧಾ: ಒಳ್ಳೇ ಧಾನ್ಯ, ಮತ್ತು ಪಲ್ಯ. ಗಿಡ ದನಕ್ಕೆ ಒಳ್ಳೇ ಆಹಾರ.

**Phaseolus Mungo**, *Lin.*—Ph. Max, *Roxb.*—Ph. aureus, *Ham.*—Ph. hirtus, *Retz.*—(Order Leguminosæ.)

*Tam.* Paččaipayaru, mūṅgu. *Tel.* Paččapesalu. *Can.* Paččc-hesaru. *Tu.* Padeṅgi. *Mal.* Čerupayaru. *Kon.* Mūgu. *Hin.* Mūṅg. *San.* Mudga, kāmbhōji, mahāsahā.

### 309. ಪಡವಲ, ಪಟ್ಲ, ಅಡ್ಲ ಬಳ್ಳಿ (Snake Gourd).

ತ. ಪುಡೋಲ್, ಪುಡಲ್. ತೆ. ಪೊಟ್ಲಕಾಯಿ. ತು. ಪಟ್ಲಕಾಯಿ. ಮ. ಪಟೋಲಮ್. ಕೊಂ. ಪಡ್ಡೂಲ.

ಉಪಯೋಗ: ಸಾಧಾ: ಕಾಯಿ ಬೀಜ ಸಹ ಪಲ್ಯ ಮಾಡಿ ತಿನ್ನುತ್ತಾರೆ.

**Trichosanthes anguina**, *Lin.*—(Order Cucurbitaceæ.)

*Tam.* Puḍōl, puḍal. *Tel.* Poṭlakāyi. *Can.* Paḍavala, paṭla, aḍla-baḷḷi. *Tu.* Paṭlakāyi. *Mal.* Paṭōlam. *Kon.* Paḍḍūla.

### 310. ಪತಂಗ, ಸಪ್ಪಂಗ, ಪತಂಗದ ಮರ (Sappan Wood Tree).

ತ. ವರ್ತಂಗಿ. ತೆ. ಬುಕ್ಕಪುಚೆಟ್ಟು, ಬಕಾರುಚೆಕ್ಕ. ತು. ಚಪ್ಪಂಗ. ಮ. ಚಪ್ಪಙಮ್. ಕೊಂ. ಸಪ್ಪಂಗು. ಸಂ. ರಕ್ತಮುಕ್ತ.

ಹುಟ್ಟು: ತೀರಪ್ರಾಂತಗಳು. ಪುಷ್ಪ: ಫಾಲ್ಗುಣದಿಂದ ವೈಶಾಖದ ವರೆಗೆ.

ಉಪಯೋಗ: ಔಷ: ಮರದ ತಿರುಳು ಬೇರೆ ಔಷಧಗಳ ಸಂಗಡ ಕಠಿಣ ಜ್ವರಕ್ಕೆ ಕೊಡುತ್ತಾರೆ. ಸಾಧಾ: ಮರ ಬಣ್ಣಕ್ಕೆ ಬಹಳ ಉಪಯೋಗ.

**Cæsalpinia Sappan**, *Lin.*—(Order Leguminosæ.)

*Tam.* Vartangi. *Tel.* Bukkapučeṭṭu, bakāručakka. *Can.* Patanga, sappanga, patangada-mara. *Tu.* Čappanga. *Mal.* Čappanam. *Kon.* Sappangu. *San.* Raktamukta.

## 311. ಪನ್ನೇರಳು, ಬಿಳಿ ಹೂವಿನ ಲಕ್ಕಿ ಮರ.

ತ. ಪನ್ನೀರ್ಮರಮ್. ತೆ. ಪನ್ನೀರುಪುಷ್ಪಚೆಟ್ಟು. ಮ. ರಾವುಪೂ. ಕೊಂ. ಪನ್ನೀರಜಾಂಬ.

ಹುಟ್ಟು: ತೋಟಗಳು. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಸಾಧಾ: ಸುಗಂಧದ ಹೂ. ತಿರುವಂಕೋಡಿನಲ್ಲಿ ಇಂಥ ಮರಗಳು ಹೂಬಿಡುವ ಕಾಲದಲ್ಲಿ ರಾತ್ರಿ ಇಬ್ಬನಿ ಬೀಳುವಾಗ ಅವುಗಳ ಮೇಲೆ ಸೆಲ್ಲೆವಸ್ತ್ರ ಹಾಸಿ, ಬೆಳಿಗ್ಯೆ ಹಿಂಡಿ, ಈ ಪ್ರಕಾರ ದೊರಕುವ ಪರಿಮಳದ ನೀರನ್ನು ಮಾರುತ್ತಾರೆ.

**Guettarda speciosa,** *Lin.*—Cadamba jasminiflora, *Sonner.*—Jasminum hirsutum, *Willd.*—Nyctanthes hirsuta, *Lin.*—(Order Rubiaceæ.)

*Tam.* Pannīrmaram. *Tel.* Pannīrupushpačeṭṭu. *Can.* Pannēraḷu, biḷī-hūvina lakki-mara. *Mal.* Rāvupū. *Kon.* Pannīrajāmba.

## 312. ಪಪ್ಪಂಗಾಯಿ, ಪಂಗಿ, ಗೊಪ್ಪೆ, ಪೊಪ್ಪಾಯ, ಪರಂಗಿ ಮರ (Papaw Tree).

ತ. ಪಪ್ಪಾಯಿ, ಪಪ್ಪಳಿ. ತೆ. ಬೊಪ್ಪಯಿ, ಮದನಆನಪಚೆಟ್ಟು. ತು. ಬಪ್ಪಂಗಾಯಿ. ಮ. ಕರ್ಮೋಸ್, ಕಪ್ಪಳಂ, ಪಪ್ಪಾಯಮ್. ಕೊಂ. ಪೊಪ್ಪಾಯಿಫಳ.

ಹುಟ್ಟು: ತೋಟಗಳು. ಪುಷ್ಪ: ಗಂಡು ಮರ ಇಡೀ ವರುಷ ಹೂಬಿಡುವದು.

ಉಪಯೋಗ: ಔಷ: ಮರದ ಸೊನೆ ಕ್ರಿಮಿರೋಗಕ್ಕೆ ಬಹಳ ಒಳ್ಳೇದು; ಕೊಟ್ಟರೆ, ತಕ್ಕ ಪಥ್ಯ ಮಾಡಬೇಕು. ಬೀಜಗಳ ಪುಡಿಯಿಂದ ಮೈ ತಿಕ್ಕಿದರೆ, ತುರಿಕಜ್ಜಿ ಗುಣ. ಸೊನೆ ವ್ರಣಗಳಿಗೆ ಸಹ ಆಗುತ್ತದೆ. ಸಾಧಾ: ಕಾಯಿ ತಿಂದು, ಪಲ್ಯ, ಉಪ್ಪಿನ ಕಾಯಿ ಸಹ ಮಾಡುತ್ತಾರೆ. ಹಣ್ಣಿನ ರಸವು ಮಾಂಸವನ್ನು ಬಹಳ ಮೃದು ಮಾಡುತ್ತದೆ. ಎಲೆಗಳನ್ನು ಗಿವಿಚಿದ ನೀರು ವಸ್ತ್ರ ತೊಳಿಯಲಿಕ್ಕೆ ಆಗುತ್ತದೆ. ಚರ್ಮದ ಕಲೆಗಳನ್ನು ಕಾಯಿಯ ರಸದಿಂದ ತೆಗಿಯಬಹುದಂತೆ. ಕಲಿಜದ ರೋಗಕ್ಕೆ ಹಸಿ ಕಾಯಿಯ ರಸವನ್ನು ಕ್ರಮದಲ್ಲಿ ಕೊಟ್ಟರೆ, ಗುಣಕರ.

**Carica Papaya,** *Lin.*—Papaya Carica, *Gært.*—P. communis, *Poir.*—P. vulgaris, *Lam.*—(Order Pastifloreæ.)

*Tam.* Pappāyi, pappaḷi. *Tel.* Boppayi, madana-ānapačeṭṭu. *Can.* Pappangāyi, pangi, goppe, poppāya, parangi-mara. *Tu.* Bappangāyi. *Mal.* Karmōsu, kappaḷam, pappāyam. *Kon.* Poppāyiphaḷa.

### 313. ಪರಲೇ, ಇಟ್ಟೇವು, ಇಬ್ಬನೇ ಗಿಡ (Clerodendron).

ತ. ಪೆರುಗಿಲೆ. ತೆ. ಬಸವನಪಾದು. ತು. ಇಟ್ಟೈ. ಮ. ಪೆರಗು, ವತ್ತಪೆರಿವಲ್ಲಂ.

**ಹುಟ್ಟು**: ಸಾಧಾರಣ. **ಪುಷ್ಪ**: ಮಳೆಗಾಲ.

**ಉಪಯೋಗ**: ಬೇರಿನ ಸಿಪ್ಪೆಯನ್ನು ಅರದು ತೆಂಗಿನ ಎಣ್ಣೆಯ ಸಂಗಡ ಬಿಸಿ ಮಾಡಿ ಮಕ್ಕಳ ಕಜ್ಜಿಗೆ ಹಚ್ಚುವದು ಒಳ್ಳೇದು.

**Clerodendron infortunatum**, *Gært.*—C. viscosum, *Vent.*—C. cordatum, *Don.*—Volkameria infortunata, *Roxb.*—(Order Verbenaceæ.)

*Tam.* Perugile. *Tel.* Basavanapādu. *Can.* Paralē, iṭṭēvu, ibbanē-giḍa. *Tu.* Iṭṭai. *Mal.* Peragu, vattaperivallam.

### 314. ಪರ್ಪಾಟಕ.

ತ. ಪರ್ಪಾಟಕಮ್. ತೆ. ಪರ್ಪಾಟಕಮು. ತು. ಕೋರಪಂತಿ. ಮ. ಪರ್ಪಾಟಕಮ್. ಕೊಂ. ಪರ್ಪಾಟಕು. ಹಿಂ. ತಪ್‌ಝಾಡ್. ಸಂ. ಕವಚ, ಕುಂಡಲಿ, ಪರ್ಪಟಕಾ.

**ಉಪಯೋಗ**: ಔಷ: ಇದರ ಸಹಮೂಲವು ಎಣ್ಣೆಯೊಡನೆ ನಂಜಿಗೆ ಆಗುತ್ತದೆ. ಚಿಗುರು ಹೂವುಗಳ ಕಷಾಯವನ್ನು ಜ್ವರವುಳ್ಳವರಿಗೆ ಬೆವರು ಬರುವ ಹಾಗೆ ಕೊಡುವರು. ಬೇರಿಗೆ ಪರಿಮಳ ಉಂಟು.

**Mollugo stricta**, *Lin.*—Pharnaceum strictum, *Spreng.*—(Order Ficoideæ.)

*Tam.* Parpāṭakam. *Tel.* Parpāṭakamu. *Can.* Parpāṭaka. *Tu.* Kōrapanti. *Mal.* Parpāṭakam. *Kon.* Parpāṭaku. *Hin.* Tapjhāḍ. *San.* Kavača, kuṇḍali, parpaṭakā.

### 315. ಪಾಡಾವಳಿ ಬಳ್ಳಿ.

ತ. ಪಾಡಾ. ತು. ತಿಪಲೆ. ಮ. ಪಾಟಕ್ಕಿಟಙ್. ಕೊಂ. ಪಾಡಾವಳಿ. ಸಂ. ಪಾಠಾ.

**ಉಪಯೋಗ**: ಔಷ: ಬೇರನ್ನು ಮಜ್ಜಿಗೆಯಲ್ಲಿ ರಕ್ತಾತಿಸಾರಕ್ಕೂ ಮೂಲವ್ಯಾಧಿಗೂ ಉದರವಾಯುವಿಗೂ ಕೊಡುತ್ತಾರೆ. ಎಲೆಗಳನ್ನು ನೀರಲ್ಲಿ ಗಿವಿಚಿ, ೧೦ ನಿಮಿಷ ಇಟ್ಟ ತರುವಾಯ ಕಣ್ಣು ಮುಚ್ಚಿ ಅದರ ಮೇಲೆ ಹಾಕಿದರೆ, ಉರಿ ಗುಣ.

**Cyclea Burmanni**, *Miers.*—Clypea Burmanni, *W. and A.*—Rhaptomeris Burmanni, *Miers.*—(Order Menispermaceæ.)

*Tam.* Pāḍā. *Can.* Pāḍāvaḷi-baḷḷi. *Tu.* Tipale. *Mal.* Pāṭakkiṭaṇu. *Kon.* Pāḍāvaḷi. *San.* Pāṭhā.

### 316. ಪಾತಾಳಗರುಡ, ಗರುಡಪಾತಾಳ ಗಿಡ.

ತ. ಕೀರಿಪ್ಪೂಣ್ಡು. ತು. ಪಾತಾಳಗರಡೆ. ಮ. ಅವಿಲ್‌ಪೊರಿ. ಕೊಂ. ಗರ್ಡಪಾತಾಳಿ. ಸಂ. ಸರ್ಪಾರಿಃ, ಗರುಡಪುಟ, ಪಾತಾಳಭೇದಿ.

**ಹುಟ್ಟು**: ಮಲಬಾರತೀರ, ತಿರುವಂಕೋಡು. **ಪುಷ್ಪ**: ಶ್ರಾವಣ, ಭಾದ್ರಪದ.

ಇದರಲ್ಲಿ ಕೆಂಪು ಮತ್ತು ಬಿಳೇ ತರ ಉಂಟು; ಬಿಳೇದು ಉತ್ತಮ.

ಉಪಯೋಗ: ಔಷ: ಬೇರು ಸರ್ಪದ ವಿಷಕ್ಕೂ ಬಾಣಂತಿಯ ನಂಜಿಗೂ ಜಂತುವಿಷಕ್ಕೂ ಕುಷ್ಠರೋಗಕ್ಕೂ ನಂಜುಳ್ಳ ಹುಣ್ಣುಗಳಿಗೂ ಉಪಯೋಗ. ಹೊಟ್ಟೇ ಹುಳಗಳಿಗೂ ಸ್ವಲ್ಪ ಕೊಡಬಹುದು; ಮತ್ತು ಹುಚ್ಚುನಾಯಿಯ ವಿಷ ಹರ.

**Ophiorrhiza Mungos,** *Lin.*—(Order Rubiaceæ.)

*Tam.* Kīrippūṇḍu. *Can.* Pātāḷagaruḍa, garuḍapātāḷa-giḍa. *Tu.* Patāḷagaraḍe. *Mal.* Avilpori. *Kon.* Garḍapātāḷi. *San.* Sarpāri, garuḍaputa, pātāḷabhēdi.

## 317. ಪಾದರೀ, ಪುರುಳಿ ಮರ (Trumpet Flower).

ತ. ಪಾದಿರಿಮರಮ್, ಅಪ್ಪು, ಕಾನವಿರುಕ್ಕಮ್. ತೆ. ಕಲಿಗೊಟ್ಟು. ತು. ಪುರುಳಿ. ಮ. ಪಾತಿರಿಮರಮ್. ಸಂ. ಪಾಟಲಿ.

ಹುಟ್ಟು: ಮಲಬಾರತೀರದ ಕಾಡುಗಳು. ಪುಷ್ಪ: ವೈಶಾಖದಿಂದ ಆಷಾಢದ ವರೆಗೆ.

ಉಪಯೋಗ: ಔಷ: ಚೆಕ್ಕೆ ಹೂವುಗಳಿಂದ ಜ್ವರವುಳ್ಳವರಿಗೆ ತಂಪು ಪಾನಕ ಮಾಡುವರು. ಎಲೆಗಳ ಕಷಾಯ ಕರುಳುಸಂಬಂಧವಾದ ಗುಲ್ಮರೋಗದಲ್ಲಿ ಗುಣ ಕರ. ಸಾಧಾ: ಮರ ಕೆಲಸಕ್ಕೆ ಬರುತ್ತದೆ; ಹೂ ರಮ್ಯ.

**Stereospermum chelonoides,** *Dec.*—Bignonia chelonoides, *Lin. f.*—B. caudata, *Miq.*—Heterophragma chelonoides, *Dalz.*—(Order Bignoniaceæ.)

*Tam.* Pādirimaram, appu, kānavirukkam. *Tel.* Kaligoṭṭu. *Can.* Pādarī, puruḷi-mara. *Tu.* Puruḷi. *Mal.* Pātirimaram. *San.* Pāṭali.

## 318. ಪಾದೆಮುಳ್ಳು ಗಿಡ.

ತು. ಆಟೂರ, ಪಾದೆಮುಳ್ಳು. ಮ. ಪಾರಮುಳ್ಳ್.

ಹುಟ್ಟು: ನೀರುಳ್ಳ ಸ್ಥಳಗಳು.

ಉಪಯೋಗ: ಔಷ: ಬಾಲಗ್ರಹವೆಂಬ ಎಳವುರೋಗವುಳ್ಳ ಮಕ್ಕಳನ್ನು ಇದರ ಸಹಮೂಲದ ಕಷಾಯದಲ್ಲಿ ಮೀಸುತ್ತಾರೆ.

**Polycarpæa corymbosa,** *Lam.*—P. indica, *Lam.*—Celosia cor., *Roxb.*—Lahaya cor., *R. S.*—(Order Caryophylleæ.)

*Can.* Pādemuḷḷu-giḍa. *Tu.* Aṭūra, pādemuḷḷu. *Mal.* Pāramuḷḷu.

## 319. ಪಾರಿಜಾತ ಮ[illegible] .nthes).

ತ. ಚೂದಂ, ಪವಳಮಲ್ಲಿಗೈ. ತೆ. ಪಗಡಮಲ್ಲೆ, ಶ್ವೇತ[illegible]ಸ, ಕ್ರಿಷ್ಟಿ. ಮ. ಮಜಪೂಮರಮ್. ಕೊಂ. ಪಾರಿಜಾತಕ. ಸಂ. ಪಾರಿಜಾತ.

ಹುಟ್ಟು: ತೋಟಗಳು. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಚಿಕ್ಕ ಬಾಯಿಹುಣ್ಣಿಗೆ ಉಪಯೋಗ. ಹೂಗಳನ್ನು ಬಟ್ಟಿ ಹಾಕಿ ತೆಗಿಯುವ ನೀರು ಕಣ್ಣುರೋಗಕ್ಕೆ ಆಗುತ್ತದೆ.

**Nyctanthes arbor-tristis**, *Lin.*—N. Pariatica, *Adans.*—Parilium arbor-tristis, *Gært.*—Scabrita scabra, *Lin.*—S. triflora, *Lin.*—(Order Oleaceæ.)

*Tam.* Čūdam, pavaḷamalligai. *Tel.* Pagaḍamalle, švētasurasa, krishṭi. *Can.* Pārijāta-mara. *Mal.* Manapūmaram. *Kon.* Pārijātaka. *San.* Pārijāta.

## 320. ಪಾವಟೆ, ಸೂಳೆಬೊಟ್ಟು ಗಿಡ (Pavetta).

ತ. ಪಾವಟ್ಟೈ. ತೆ. ಪಾಪಟ, ಪಾಪಿರಿ, ಪಾಪಿಡಿ. ಮ. ಪಾಟ್ಟ, ಪಾವಟಕೊಡಿ. ಸಂ. ಕಾಕಚ್ಛೇದಿ.

ಹುಟ್ಟು: ಮಲಬಾರ ಚೋಳಮಂಡಲ ತೀರಗಳು. ಪುಷ್ಪ: ಚೈತ್ರ, ವೈಶಾಖ.

ಉಪಯೋಗ: ಔಷ: ಬೇರು ಕರುಳುಗಳ ಅಕ್ರಮಕ್ಕೆ, ಎಲೆಗಳ ಒತ್ತಡ ಮೂಲವ್ಯಾಧಿಗೆ ಆಗುತ್ತದೆ. ಬೇರನ್ನು ಅರದು ಶುಂಠಿ ಸೇರಿಸಿ ಗಂಜಿನೀರಲ್ಲಿ ಕೊಟ್ಟರೆ, ಬೀಗಿಗೆ ಉಪಯೋಗ. ಸಾಧಾ: ಕಾಯಿಯಿಂದ ಉಪ್ಪಿನಕಾಯಿ ಮಾಡುತ್ತಾರೆ. ಎಲೆಗಳು ಗೊಬ್ಬರ.

**Pavetta indica**, *Lin.*—P. alba, *Vahl.*—Ixora paniculata, *Lam.*—I. Pavetta, *Roxb.*—(Order Rubiaceæ.)

*Tam.* Pāvaṭṭai. *Tel.* Pāpaṭa, pāpiri, pāpiḍi. *Can.* Pāvaṭe, sūḷeboṭṭu-giḍa. *Mal.* Pāṭṭa, pāvaṭakoḍi. *San.* Kākaččhēdi.

## 321. ಪುಂಡಿಸೊಪ್ಪು, ಕೆಂಪು ಪುಂಡ್ರಿಕೆ ಗಿಡ (Roselle, Red Sorrel).

ತ. ಶಿವಪ್ಪುಕಾಯ್ಚುರೈ. ತೆ. ಸೀಮಗೋಗು, ಎರ್ರಗೊಂಕಾಯ. ತು. ಪುಂಡಿತಪ್ಪು. ಮ. ಪುಳಿಚೀರ.

ಹುಟ್ಟು: ನಟ್ಟು ಬೆಳಿಸುವದು. ಪುಷ್ಪ: ಆಶ್ವೀಜದಿಂದ ಮಾರ್ಗಶಿರದ ವರೆಗೆ.

ಉಪಯೋಗ: ಸಾಧಾ: ಒಳ್ಳೇ ನಾರು ಉಂಟು. ಎಲೆ ಮತ್ತು ಕಾಯಿ ಪಲ್ಯ.

**Hibiscus Sabdariffa**, *Lin.*—(Order Malvaceæ.)

*Tam.* Šivappukāyčurai. *Tel.* Sīmagōgu, erragoṅkāya. *Can.* Puṇḍisoppu, kempu-punḍrike-giḍa. *Tu.* Puṇḍitappu. *Mal.* Puḷičīra.

## 322. ಪುತ್ರಜೀವ (Wild Olive).

ತ. ಕರುಪಿಲ್ಲೈ. ತೆ. ಪುತ್ರಜೀವಿ, ಕುದುರುಜೀವಿ. ಕೊಂ. ಪುತ್ರಜಬ್ಬೇಮಣಿ. ಸಂ. ಮಾವು, ಪುತ್ರಜೀವಕಃ, ಸುತಜೀವಃ.

ಹುಟ್ಟು: ಕೊಂಕಣ ಚೋಳಮಂಡಲ ತೀರಗಳು. ಪುಷ್ಪ: ಫಾಲ್ಗುಣ, ಚೈತ್ರ.

ಉಪಯೋಗ: ಸಾಧಾ: ಅಲಂಕಾರದ ಮರ. ಗಟ್ಟಿಯಾದ ಮರವು ಒಳ್ಳೇ ಕೆಲಸಕ್ಕೆ ಬರುತ್ತದೆ. ಎಲೆಗಳು ದನಗಳಿಗೆ ಆಹಾರ. ಬೀಜಗಳಿಂದ ಕುತ್ತಿಗೆಗೆ ಮಾಲೆ ಮಾಡಿ ಹಾಕಿಕೊಳ್ಳುವರು.

**Putranjiva Roxburghii,** *Wall.*—Nageia Putr., *Ham.*—(Order Euphorbiaceæ.)

*Tam.* Karupilai. *Tel.* Putrajīvi, kudurujīvi. *Can.* Putrajīva. *Kon.* Putrajibbēmaṇi. *San.* Māvu, putrajīvaka*h*, sutajīva*h*.

### 323. ಪುರುಷರತ್ನ ಸೊಪ್ಪು.

ತ. ಓರಿಲೈತ್ತಾಮರೈ. ತೆ. ಪುರುಷರತ್ನಮು, ಮಗಲಿಂಗಮು. ಮ. ಓರಿಲತ್ತಾಮರ. ಕೊಂ. ಪುರುಷರತ್ನ. ಸಂ. ಪುರುಷರತ್ನಮ್, ಏಕಪತ್ರಿ.

ಹುಟ್ಟು: ಸಾಧಾರಣ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಕಷಾಯ ಮೂತ್ರರೋಗಕ್ಕೂ ಕರುಳುಗಳ ಅಕ್ರಮಕ್ಕೂ ಒಳ್ಳೇದು. ಚಿಗುರುಗಳಿಗೆ ಎಣ್ಣೆ ಸೇರಿಸಿ ತಲೆಗೆ ತಂಪು ಲೇಪ ಮಾಡುವರು. ಸಹಮೂಲವನ್ನು ಹಾಲಿನಲ್ಲಿ ಅರದು ಗಾಳಿಸಿ, ಬಿಸಿ ಮಾಡಿ, ಸಕ್ಕರೆ ಹಾಕಿ ಕುಡಿಯವದು ಬಲ ಹೀನರಿಗೆ ಒಳ್ಳೇದು.

**Ionidium suffruticosum,** *Ging.*—I. enneaspermum, *Dec.*—Viola suffruticosa, *Roxb.*—Viola frutescens, *Roth.*—(Order Violaceæ.)

*Tam.* Ōrilaittāmarai. *Tel.* Purusharatnamu, magaliṅgamu. *Can.* Purusharatna-soppu. *Mal.* Ōrilattāmara. *Kon.* Purusharatna. *San.* Purusharatnam, ēkapatri.

### 324. ಪುಷ್ಕರಮೂಲ (Costus).

ತ. ಕೋಷ್ಟಮ್. ತೆ. ಕಾಶ್ಮೀರಮು, ಬೊಮ್ಮಕಚ್ಚಿಕ, ಭಂಗಲ್‌ಕೋಷ್ಟ. ತು. ಕೋರಿಕೊಟ್ಟು. ಮ. ಚನ್ನಕ್ಕೂವ, ನರುಂಚನ, ಪುಷ್ಕರಮೂಲಮ್. ಸಂ. ಪುಷ್ಕರ, ಕಾಶ್ಮೀರ, ಸುಬಂಧುಃ.

ಹುಟ್ಟು: ನೀರುಳ್ಳ ಸ್ಥಳಗಳು. ಪುಷ್ಪ: ಆಷಾಢದಿಂದ ಭಾದ್ರಪದದ ವರೆಗೆ.

ಉಪಯೋಗ: ಔಷ: ಬೇರಿನ ಕಷಾಯ ಜ್ವರಕ್ಕೆ ಕೊಡುವರು. ಇದಲ್ಲದೆ ಬೇರೆ ಬೇರೆ ಔಷಧಗಳಿಗೆ ಸೇರಿಸುವದುಂಟು. ಗುಣ ಪಿತ್ತ ಶಮಿಸುವಂಥಾದ್ದು.

**Costus speciosus,** *Sm.*—C. arabicus, *Lin.*—Banksia speciosa, *Kœn.*—Hellenia grandiflora, *Retz.*—(Order Scitamineæ.)

*Tam.* Kōshṭam. *Tel.* Kāšmīramu, bommakaččika, bhaṅgalkōshṭa. *Can.* Pushkaramūla. *Tu.* Kōrikoṭṭu. *Mal.* Čannakkūva, naruṅčana, pushkaramūlam. *San.* Pushkara, kāšmīra, subandhu*h*.

### 325. ಪುಷ್ಪಕಾಸೀಸ, ಕ್ರಿಮಿನಾಶಿನಿ (Indian Sundew).

ಹುಟ್ಟು: ಮಳೆಗಾಲದಲ್ಲಿ ಮೈದಾನುಗಳಲ್ಲಿ ಸಿಕ್ಕುತ್ತದೆ.

ಉಪಯೋಗ: ಔಷ: ಘಾಯವಾದರೆ, ಇದರ ರಸ ಹಚ್ಚಲು ರಕ್ತಪ್ರವಾಹ ನಿಲ್ಲುವದು. ಕಣ್ಣಿನ ರೆಪ್ಪೆ ಬೀಳುವ ರೋಗಕ್ಕೆ ಅಂಜನ ಮಾಡುತ್ತಾರೆ. ಸಾಧಾ:

ಎಲೆಗಳಲ್ಲಿರುವ ರೋಮಗಳಲ್ಲಿ ಒಂದು ವಿಧದ ಅಂಟು ಇದೆ. ಕ್ರಿಮಿಗಳು ಇದರ ಮೇಲೆ ಎರಗಿದರೆ, ಅಂಟಿಕೊಂಡು ಸಾಯುವವು. ಇವುಗಳ ರಸ ಹೀರಿ ಗಿಡವು ಬೆಳಿಯುತ್ತದೆ.

**Drosera indica**—(Order Droseraceæ).

*Can.* Pushpakāsīsa, kriminā̆šini.

### 326. ಪೆಟ್ಲುತುರುವೆ, (ಶ್ರೀಮುದ್ರಿ ಗಿಡ?).

ತ., ತೆ. ತುತ್ತಿ.

**ಉಪಯೋಗ:** ಔಷ: ಕಫ ಮುಂತಾದ ಶ್ಲೇಷ್ಮದೋಷಗಳಿಗೆ ಈ ಗಿಡವು ಒಳ್ಳೇದು. ಬೇರಿನ ಕಷಾಯ ಜ್ವರಕ್ಕೆ ಆಗುತ್ತದೆ. ಕಷಾಯದಿಂದ ಸೇಕ ಕೊಡುವದುಂಟು.

**Sida mauritiana,** *Herit.(?)*—S. planifolia, *Cav.*—Abutilon mauritianum, *Medic.*—(Order Malvaceæ.)

*Tam., Tel.* Tutti. *Can.* Pēṭluturuve, (šrīmudri-giḍa?).

### 327. ಪೇನಾರಿ, ಭಾತಾಳ ಮರ.

ತ. ಕುದಿರೈಪ್ಪಿಡುಕ್ಕನ್, ಪೀನಾತ್ತಮರಮ್. ತು. ಪೀನಾರಿ ಮರ. ಮ. ಪೊಟ್ಟಕಾವಳಮ್, ಪೀನಾರಿ ಮರಮ್.

**ಹುಟ್ಟು:** ಘಟ್ಟಗಳು. **ಪುಷ್ಪ:** ಫಾಲ್ಗುಣ.

**ಉಪಯೋಗ:** ಔಷ: ಚೆಕ್ಕೆ ಎಲೆಗಳು ಮಲಮೂತ್ರಶೋಧನೆಗೂ ಮೈಬೆವರುವ ಹಾಗೆಯೂ ಉಪಯೋಗ. ಕಾಯಿಗಳ ಕಷಾಯಕ್ಕೆ ಒಗರು ಗುಣ. ಚೆಕ್ಕೆಯ ಪುಡಿ ಉರಿಗೆಂಡಗಳ ಮೇಲೆ ಹಾಕಿ ಹೊಗೆ ಕೊಟ್ಟರೆ, ಬಾಲಗ್ರಹವೆಂಬ ಎಳವುರೋಗಕ್ಕೆ ಉಪಯೋಗ. ಮರದ ಕಷಾಯದ ಸಂಗಡ ಎಣ್ಣೆ ಬೇಯಿಸಿ ವಾತಕ್ಕೆ ಲೇಪಿಸುವರು. ಸಾಧಾ: ಮರವು ಪತ್ತೇಮಾರಿಯ ಕೂವೆಮರಗಳಿಗೂ ಬೇರೆ ಕೆಲಸಕ್ಕೂ ಆಗುತ್ತದೆ. ಬೀಜವನ್ನು ಹುರಿದು ತಿನ್ನುವರು, ಅದರ ಎಣ್ಣೆ ಸಹ ಮಾಡಬಹುದು. ಕಾಯಿಯ ಸಿಪ್ಪೆ ಬಣ್ಣ ಹಾಕುವದರಲ್ಲಿ ಉಪಯೋಗ.

**Sterculia fœtida,** *Lin.*—(Order Sterculiaceæ.)

*Tam.* Kudiraippiḍukkan, pīnātta-maram. *Can.* Pēnāri, bhātāḷa-mara. *Tu.* Pināri-mara. *Mal.* Poṭṭakāvaḷam, pīnāri-maram.

### 328. ಫಂಕೀ, ವಜ್ರದ ನೀಲಿ ಗಿಡ.

ತ. ಕಾಟಕೊರಿಞ್ಞಾಲ್. ತೆ. ಪೆಂಪಲಿ. ಮ. ಕೊರಿಞ್ಞಾಲ್.

**ಹುಟ್ಟು:** ಸಾಧಾರಣ. **ಪುಷ್ಪ:** ಶ್ರಾವಣ, ಭಾದ್ರಪದ.

**ಉಪಯೋಗ:** ಔಷ: ಬೇರು ದಂತಮೂಲಗಳ ಬಾವಿಗೂ ಅಗ್ರಕ್ಕೂ ಆಗುತ್ತದೆ. ಅದರ ಕಷಾಯ ಅಜೀರ್ಣಕ್ಕೂ, ಕಲ್ಕವನ್ನು ವಾಂತಿ ನಿಲ್ಲಿಸುವದಕ್ಕೂ ಕೊಡುವರು. ಬೇರು ಜಜ್ಜಿ ತೆಂಗಿನ ಹಾಲಿನಲ್ಲಿ ಬೇಯಿಸಿ, ಕುಷ್ಠಕ್ಕೆ ಲೇಪಿಸುವದುಂಟು. ಗಿಡದ ರಸ ಜೇನಿನ ಸಮೇತ ಮೊಡವೆಗಳಿಗಾಗುತ್ತದೆ.

**Tephrosia purpurea,** *Pers.*—T. galegoides, *Grah.*—T. lanceæfolia, *Link.*—T. lanceolata, *Grah.*—Galega cœrulea, *Rottl.*—G. Colonila, *Ham.*—G. lanceæfolia, *Roxb.*—G. purpurea, *Lin.*—G. sericea, *Ham.*—G. tinctoria, *Lam.*—(Order Leguminosæ.)

*Tam.* Kāṭakoriṅil. *Tel.* Vempali. *Can.* Phaṅkī, vajrada-nīli-giḍa. *Mal.* Koriṅil.

## 329. ಫರೆಂಗಿ ಈಚಲ ಮರ (African Oil Palm).

ಮಂಗಳೂರಿನ ಜರ್ಮನ್ ಮಿಶ್ಯನೆರಿಗಳು ಅಫ್ರಿಕ ಖಂಡದಿಂದ ಈ ಮರದ ಬೀಜವನ್ನು ತರಿಸಿ, ಸಸಿ ಮಾಡಿ ಬೆಳಿಸಿದ್ಧಾರೆ. ಅದು ರೂಪದಲ್ಲಿ ಊರ ಈಚಲ ಮರಕ್ಕೆ ಸರಿ ಕಾಣುವದರಿಂದ ಮೇಲಿನ ಹೆಸರನ್ನು ಕೊಟ್ಟಿದ್ಧೇವೆ. ಬಹು ಪ್ರಯೋಜನವುಳ್ಳ ಈ ಮರವು ನಮ್ಮ ತೀರದಲ್ಲಿ ಪ್ರಬಲವಾದರೆ, ಸರ್ವರಿಗೆ ಲಾಭಕರವಾದೀತು. ಈ ಮರಕ್ಕೆ ೪೦ ರಾತ್ಲು ತನಕ ಭಾರವೂ ೬೦೦-೮೦೦ರ ತನಕ ಕಾಯಿಗಳೂ ಉಳ್ಳ ಗೊಂಚಲು ಆಗುತ್ತದೆ. ಕಾಯಿ ಬೇಯಿಸಿದರೆ, ಆಹಾರಕ್ಕೆ ತಕ್ಕದೊಂದು ತರದ ಬೆಣ್ಣೆ ದೊರಕುತ್ತದೆ; ಅದರಿಂದ ಸಾಧಾರಣವಾಗಿ ವ್ಯಾಪಾರದಲ್ಲಿ ಹೆಸರುಗೊಂಡ ಎಣ್ಣೆ ಮಾಡುವರು. ಅದು ಮುಖ್ಯವಾಗಿ ಸಾಬೂನಿಗೆ ಉಪಯೋಗ. ಬೀಜದ ಎಣ್ಣೆ ಸಹ ಆಗುತ್ತದೆ. ಅದು ದೀಪಕ್ಕೆ ಒಳ್ಳೇದು; ಅಫ್ರಿಕದಲ್ಲಿ ವಾತರೋಗಿಗಳು ಅದನ್ನು ಮೈಗೆ ಹಚ್ಚಿಕೊಳ್ಳುತ್ತಾರೆ.

**Elæis guineensis,** *Jacq.*—Palma spinosa, *Mill.*—(Order Palmeæ.)

*Can.* Pharengi-īčala-mara.

## 330. ಫರೆಂಗಿಮೆಣಸಿನಕಾಯಿ, ಕೆಂಪು ಮೆಣಸು (Spanish Pepper, Chilli).

ತ. ಮಿಳಗಾಯ್. ತೆ. ಮಿರಪಕಾಯಿ. ತು. ಪರೆಂಗಿಮುಣ್ಚಿ. ಮ. ಉಪ್ಪೇರಿಪರಂಕಿ, ಕಪ್ಪಮುಳಕ್, ಪರೆಂಗಿಮುಳಕ್. ಕೊಂ. ಮಿರಸಾಂಗ. ಹಿಂ. ಲಾಲ್ಮಿರ್ಚ.

ಇದರಲ್ಲಿ ಬೇರೆ ಬೇರೆ ತರಗಳು ಅವೆ.

**ಉಪಯೋಗ:** ಔಷ: ಹಸಿ ಕಾಯಿ ಅಗ್ನಿದೀಪಕವಾದದ್ದು. ಬಾರ್ಕಿನ ಸಂಗಡ ಕಾಯಿ ವಿಷಮಜ್ವರಕ್ಕೂ ಆಹಿಕಜ್ವರಕ್ಕೂ ಬೀಗಿಗೂ ಉಪಯೋಗ. ಅದರ ಕಷಾಯವನ್ನು ಮುಕ್ಕುಳಿಸಿದರೆ, ಗಂಟ್ಲುನೋವಿಗೆ ಒಳ್ಳೇದು. ಇದಲ್ಲದೆ ಬೇರೆ ಔಷಧಗಳ ಸಂಗಡ ಶ್ರೋಣಿತವಾತಕ್ಕೂ ಪಕ್ಷವಾತಕ್ಕೂ ಉದರವಾಯುವಿಗೂ ಕೆಂಪಿ ಎಂಬ ರೋಗಕ್ಕೂ, ಪೋಲ್ಟೀಸಿಗೂ ಸಹ ಆಗುತ್ತದೆ. ಸಾಧಾ: ಸಂಬಾರಜೀನಸು. ಎಳೇ ಮೆಣಸಿನ ಉಪ್ಪಿನಕಾಯಿ ಮಾಡುತ್ತಾರೆ.

**Capsicum frutescens,** *Lin.*—(Order Solanaceæ.)

*Tam.* Miḷagāy. *Tel.* Mirapakāyi. *Can.* Pharengi-meṇasinakāyi, kempu-meṇasu. *Tu.* Parengimuṇči. *Mal.* Upperiparaṅki, kappamuḷakụ, parengimuḷakụ. *Kon.* Mirasānga. *Hin.* Lālmirči.

## 331. ಫಿಂಡಿಸೊಪ್ಪು, ಹೊಲದ ಪುಂಡ್ರಿಕೆ ಗಿಡ (Hibiscus Hemp).

ತ. ಪುಳಿಚ್ಚಕೀರೈ, ಕಾಚ್ಚುರೈ. ತೆ. ಗೊಂಗೂರ, ಗುಳುಗುಚೆಟ್ಟು, ಕರ್ಣಿಕಾರಮು. ಮ. ಕಾಟ್ಟುವೆಳ್ಳೂರನ್.

**ಹುಟ್ಟು:** ತೋಟಗಳು. **ಪುಷ್ಪ:** ಜ್ಯೇಷ್ಠ, ಆಷಾಢ.

**ಉಪಯೋಗ:** ಸಾಧಾ: ಎಲೆಗಳು ಪಲ್ಯ. ಗಿಡಕ್ಕೆ ಒಳ್ಳೇ ನಾರು ಉಂಟು.

**Hibiscus cannabinus,** *Lin.*—H. Wightianus, *Wall.*—(Order Malvaceæ.)

*Tam.* Puḷiččakīrai, kāččurai. *Tel.* Gongūra, guḷugučeṭṭu, karṇikāramu. *Can.* Phiṇḍisoppu, holada-puṇḍrike-giḍa. *Mal.* Kāṭṭuveḷḷūran.

## 332. ಬಂಗಿ, ಭಂಗಿ, ಕುಸುವು ಗಿಡ (Hemp).

ತ. ಪಂಗಿ, ಕಂಜಾ, ಮದಮತ್ತಗಮ್. ತೆ. ಗಂಜಾಯಿ, ಜಡಗಾಂಜ. ತು. ಬಂಗಿ. ಮ. ಕಂಚಾವು. ಕೊಂ. ಭಾಂಗಿ. ಹಿಂ. ಗಾಂಜಾ. ಸಂ. ವಿಜಯಾ, ಸಿದ್ಧಪತ್ರಿ, ಅಲಾತ.

**ಹುಟ್ಟು:** ನಟ್ಟು ಬೆಳಿಸುವದು. **ಪುಷ್ಪ:** ಇಡೀ ವರುಷ.

**ಉಪಯೋಗ:** ಔಷ: ಈ ಗಿಡದ ಗುಣ ಅಮಲು ಉಳ್ಳದ್ದು; ಅದರ ಪ್ರಯೋಗದಲ್ಲಿ ಜಾಗ್ರತೆ ಅವಶ್ಯವು. ಹೆಚ್ಚಿನ ಪ್ರಯೋಗದಿಂದ "ಅಂಗಿ ಕೊಟ್ಟು ಬಂಗಿ ಸೇದಿ ಮಂಗನಾದ" ಎಂಬಂತೆ ಬುದ್ಧಿಹಾನಿಯಾಗುವದು. ವೈದ್ಯಶಾಸ್ತ್ರದ ಪ್ರಕಾರ ಬೀಗು ರೋಗವುಳ್ಳವರು ಸ್ವಲ್ಪ ಸೇದಬಹುದು. ಎಲೆಗಳನ್ನು ಚನ್ನಾಗಿ ತೊಳದು ಪುಡಿ ಮಾಡಿ ಹುರಿದು ಪಾನಕ ಮಾಡಿದರೆ, ರಕ್ತಭೇದಿಗೂ ಅತಿಸಾರಕ್ಕೂ ಅಜೀರ್ಣಕ್ಕೂ ಒಳ್ಳೇ ಔಷಧ; ಸೆಳವು ನಿವಾರಕ ಗುಣ. ಸಾಧಾ: ನಾರು ಉತ್ತಮ; ಬೀಜದಿಂದ ಒಳ್ಳೇ ಎಣ್ಣೆ ತೆಗಿಯುವರು.

**Cannabis sativa,** *Lin.*—C. indica, *Lam.*—(Order Urticaeæ.)

*Tam.* Pangi, kañjā, madamattagam. *Tel.* Gañjāyi, jaḍagāñja. *Can.* Bangi, bhangi, kusuvu-giḍa. *Tu.* Bangi. *Mal.* Kañčāvu. *Kon.* Bhāngi. *Hin.* Gāñjā. *San.* Vijayā, siddhapatri, alāta.

## 333. ಬಂದದ ಮರ, ಬಂಥ, ಹಿಗೆಬಂಥ, ತುಮಕೀ, ಒಳ್ಳೆ ತೂಪ್ರ ಮರ (Gaub Tree).

ತ. ತುಂಬಿ, ಪನಿಚ್ಚೈಕಾಯ್. ತೆ. ತುಮಿಕಿಚೆಟ್ಟು, ತಿಂದುಕಿ. ತು. ಬಂದದ ಮರ. ಮ. ಪನಿಚ್ಚಿಮರಮ್. ಕೊಂ. ಬಂದಾರೂಕು. ಸಂ. ತೂವರೀ, ದಂತಶಠ.

**ಹುಟ್ಟು:** ಪಶ್ಚಿಮತೀರ, ಬಂಗಾಲ. **ಪುಷ್ಪ:** ಫಾಲ್ಗುಣ, ಚೈತ್ರ.

**ಉಪಯೋಗ:** ಔಷ: ಕಾಯಿಾ ರಸ ಘಾಯ ಉಳುಕುಗಳಿಗೆ ಹಚ್ಚುವರು. ಅದು ಅತಿಸಾರಕ್ಕೂ ಅಜೀರ್ಣರೋಗಕ್ಕೂ ಬಹು ಒಳ್ಳೇದು. ಬೀಜಗಳ ಎಣ್ಣೆ ಮಲ ಭೇದಿ; ಅದು ಉರಿಗೂ, ಶುಂಠೀ ಮತ್ತು ಜೀರಿಗೇ ಸಂಗಡ ಬೀಗಿಗೂ ಉಪಯೋಗ. ಚೆಕ್ಕೆಯ ಕಷಾಯ ವ್ರಣಗಳಿಗೂ, ಎಲೆಗಳ ಕಷಾಯ ಕಣ್ಣುರೋಗಕ್ಕೂ ಆಗುವದು. ಚೆಕ್ಕೆಯ ಪುಡಿ ಗಂಜಿ ಮತ್ತು ತೆಂಗಿನ ಹಾಲಿನೊಡನೆ ಉಷ್ಣಜ್ವರದಲ್ಲಿ ಪಾನಕ. ಅದರ ಕಷಾಯವನ್ನು ಜೇನುತುಪ್ಪ ಹಾಕಿ ಹೊಟ್ಟೆನೋವಿಗೆ ಕೊಡುವರು; ಅದರ ಸಾರು ಹೊಟ್ಟೇ ಅಕ್ರಮದವರಿಗೆ ಪಥ್ಯ. ಸಾಧಾ: ಕಾಯಿ ತಿಂದು, ಚಿಗುರುಗಳ ತಂಬಳಿ ಮಾಡುವರು. ಕಾಯಿಯ ರಸಕ್ಕೆ ಅಂಟುಂಟು; ದೋಣಿಗಳಲ್ಲಿ ನೀರು ತಟ್ಟದ ಹಾಗೆ ಅದನ್ನು ಲೇಪಿಸಿ, ಮಿಾನಿನ ಬಲೆಗಳನ್ನು ಅದರಲ್ಲಿ ಒದ್ದೆ ಮಾಡುವರು. ಚೆಕ್ಕೆಯ ಕಷಾಯ ಸಮಗಾರರು ಚರ್ಮ ಹದ ಮಾಡುವದಕ್ಕೆ ಪ್ರಯೋಗಿಸುವರು.

**Diospyros Embroypteris,** *Pers.*—D. glutinosa, *Roxb.*, *Kœn.*—Embryopteris glutenifera, *Roxb.*—E. peregrina, *Gært.*—Garcinia malabarica, *Desr.*—(Order Ebenaceæ.)

*Tam.* Tumbi, paniččaikkāy. *Tel.* Tumikičeṭṭu, tinduki. *Can.* Bandada-mara, bantha, higebantha, tumakī, oḷḷe tūpra-mara. *Tu.* Bandada-mara. *Mal.* Paničči-maram. *Kon.* Bandārūku. *San.* Tūvarē, dantaśaṭha.

## 334. ಬಕುಳ, ರೆಂಜೆ, ಪಗಡೆ ಮರ (Mimusops).

ತ. ವಕುಳಮ್, ಮಗಿಬಿಮರಮ್. ತೆ. ಪೊಗಡ, ವಕುಳ, ಕೇಸರವೃಕ್ಷಮು. ತು. ರೆಂಜೆ ಮರ. ಮ. ಮಕುರ, ಎಲಞಿ, ಮಕಿರಮರಮ್, ಎರಿಞಿ. ಕೊಂ. ವೊವಳಿರೂಕು. ಹಿಂ. ಮುಲ್ಸರಿ. ಸಂ. ಬಕುಳವಮ್, ಸಿಂಹಕೇಶರ, ಅನಂಗಕಾ.

**ಹುಟ್ಟು:** ತೀರಗಳು. **ಪುಷ್ಪ:** ಫಾಲ್ಗುಣ, ಚೈತ್ರ.

**ಉಪಯೋಗ:** ಔಷ: ಚೆಕ್ಕೆಗೆ ಒಗರು ಗುಣ; ಜ್ವರದಲ್ಲಿ ಉಪಯೋಗ. ಬೇರನ್ನು ಸಿರ್ಕದಲ್ಲಿ ಅರದು ಮುಖದ ಬಾವಿಗೆ ಹಚ್ಚಬಹುದು. ಚೆಕ್ಕೆಯ ಕಷಾಯ ಮುಕ್ಕುಳಿಸಿದರೆ, ಹಲ್ಲುನೋವಿಗೂ ಉಗುಳುರೋಗಕ್ಕೂ ಒಳ್ಳೇದು. ಸಾಧಾ: ಶೃಂಗಾರದ ಮರ. ಬೀಜದಿಂದ ಬಣ್ಣಗಾರರಿಗೆ ಉಪಯೋಗವುಳ್ಳ ಒಳ್ಳೇ ಎಣ್ಣೆ ದೊರಕುತ್ತದೆ. ಹೆಂಗಸರು ಹೂವುಗಳನ್ನು ಸುರಿದು ಮುಡಿದುಕೊಳ್ಳುವರು; ಅವುಗಳಿಂದ ಪರಿಮಳದ ನೀರು ಸಹ ಮಾಡುವರು. ಹಣ್ಣು ತಿನ್ನುತ್ತಾರೆ.

**Mimusops Elengi,** *Lin.*—(Order Sapotaceæ.)

*Tam.* Vakuḷam, magiḷa-maram. *Tel.* Pogaḍa, vakuḷa, kēsaravṛikshamu. *Can.* Bakuḷa, reńje, pagaḍe-mara. *Tu.* Reńje-mara. *Mal.* Makura, elańi, makiramaram, erińi. *Kon.* Vovaḷi-rūku. *Hin.* Mulsari. *San.* Bakuḷam, si*m*ha-kēśara, anańgakā.

### 335. ಬಚಾರಿ, ಕಲ್ಬಾಗಿ, ಬಿಲ್ವಾರದ ಮರ.

ತ. ವಾಕೈ. ತೆ. ಚಿಂದುಗಚೆಟ್ಟು, ತೆಲಸು. ಮ. ವಾಕ. ಸಂ. ಶಿರೀಷ, ಕುರವಕ, ಮುಸ್ತಿ.

**ಹುಟ್ಟು**: ಮಲಬಾರ ಚೋಳಮಂಡಲ ತೀರಗಳು. **ಪುಷ್ಪ**: ವೈಶಾಖ, ಜ್ಯೇಷ್ಠ.

**ಉಪಯೋಗ**: ಔಷ: ಚಕ್ಕೆಯ ರಸ, ಲಿಂಬೆರಸ, ಹಸಿ ಅರಸಿನ ರಸ ಸಹ ತೆಂಗಿನ ಎಣ್ಣೆಯಲ್ಲಿ ಕಾಸಿ, ಕೆಟ್ಟ ಹುಣ್ಣುಗಳಿಗೂ ಕುಷ್ಠಕ್ಕೂ ಹಚ್ಚುವರು. ಸಾಧಾ: ಮರವು ಗಟ್ಟಿಯಾದದ್ದು, ಅಚ್ಚುಮರ ಮುಂತಾದ ಕೆಲಸಕ್ಕೆ ಬಹು ಒಳ್ಳೇದು. ಸರಕಾರದ ಅಪ್ಪಣೆ ವಿನಹ ಮರ ಕಡಿಯಕೂಡದು.

**Albizzia odoratissima,** *Benth.*—Acacia odoratissima, *Willd.*—A. lomatocarpa, *Dec.*—Mimosa marginata, *Lam.*—M. odoratissima, *Lin.*—(Order Leguminosæ.)

*Tam.* Vākai. *Tel.* Čindugačettu, telasu. *Can.* Bačāri, kalbāgi, bilvāradamara. *Mal.* Vāka. *San.* Širīsha, kuravaka, musti.

### 336. ಬಚ್ಚಂಗಾಯಿ, ಕಲ್ಲಂಗಡಿ, ಕಾಲೆಂಗ ಬಳ್ಳಿ (Water Melon).

ತ. ಕೊಮ್ಮಟ್ಟಿ, ವತ್ತಾಕ್ಕು. ತೆ. ದರ್ಬೂಜಿ. ತು. ಬಚ್ಚಂಗಯಿ. ಮ. ವತ್ತಕ್ಕ. ಕೊಂ. ಬಚ್ಚಂಗ. ಹಿಂ. ಕರ್ಬೂಜ್.

**ಹುಟ್ಟು**: ತೋಟಗಳು. **ಪುಷ್ಪ**: ಪುಷ್ಯ, ಮಾಘ.

**ಉಪಯೋಗ**: ಸಾಧಾ: ಕಾಯಿ ತಿನ್ನುತ್ತಾರೆ; ಬಾಯಾರಿಕೆ ನಿಲ್ಲಿಸುತ್ತದೆ. ಎಳತಾಗಿದ್ದರೆ, ಪಲ್ಯ. ಮಿಶ್ರ ದೇಶದಲ್ಲಿ ಕೆಡಲಿಕ್ಕಿರುವ ಕಾಯಿಯ ನೀರಿಗೆ ಸಕ್ಕರೆ ಮತ್ತು ಗುಲಾಬು ನೀರು ಸೇರಿಸಿ, ಉಷ್ಣ ಜ್ವರಕ್ಕೆ ಕೊಡುವರು.

**Citrullus vulgaris,** *Schrad.*—Cucumis citrullus, *Dec.*—Cucurbita citrullus, *Lin.*—(Order Cucurbitaceæ.)

*Tam.* Kommatti, vattākku. *Tel.* Darbūji. *Can.* Baččangāyi, kallangaḍi, kālenga-baḷḷi. *Tu.* Baččangayi. *Mal.* Vattakka. *Kon.* Baččanga. *Hin.* Karbūj.

### 337. ಬಚ್ಚಲೆ ಸೊಪ್ಪು, ನುಚ್ಚುಗೋಳೀ ಪಲ್ಯ, ದೊಡ್ಡ ಗೋಣಿ ಸೊಪ್ಪು (Purslane).

ತ. ಪಚಿರಿ, ಪಯಿರಿ, ಮೂಕ್ಕಿಲಿ, ಪಚಲೈ, ತಿಣ್ಡಿ.

**ಹುಟ್ಟು**: ನದೀ ತೀರಗಳು. **ಪುಷ್ಪ**: ಶ್ರಾವಣ, ಭಾದ್ರಪದ.

**ಉಪಯೋಗ**: ಔಷ: ಗಿವಿಚಿದ ಎಲೆಗಳು ಕೆಂಪಿರೋಗಕ್ಕೂ, ಅವುಗಳ ಕಷಾಯ ಮೂತ್ರಕಟ್ಟಿಗೂ ರಕ್ತಭೇದಿಗೂ ಉಪಯೋಗ.

**Portulaca quadrifida,** *Lin.*—P. meridiana, *Lin.*, *Roxb.*—P. geniculata, *Royle.*—Illecebrum verticillatum, *Burm.*—(Order Portulaceæ.)

*Tam.* Pačiri, payiri, mūkkili, pačalai, tinḍi. *Can.* Baččale-soppu, nuččugōḷi-palya, dodda-gōṇi-soppu.

### 338. ಬಜೆ ಗಿಡ, ನಾರು ಬೇರು (Sweet Flag).

ತ. ವಶಂಬು, ಚಟಕ್ಕೋದನ್, ಚಟಿನಮ್. ತೆ. ವಸ, ವಡಜ. ತು. ಬಜೆ. ಮ. ವಯಂಪು. ಕೊಂ. ಏಖಂಡ. ಮರಾ. ವೇಖಂಡ. ಸಂ. ವಚಾ, ವಿಜಯಾ, ಜಟಿಲಾ, ಖರಸಾರ.

**ಹುಟ್ಟು**: ನೀರುಳ್ಳ ಸ್ಥಳಗಳು. **ಪುಷ್ಪ**: ವೈಶಾಖ, ಜ್ಯೇಷ್ಠ.

**ಉಪಯೋಗ**: ಔಷ: ಮಕ್ಕಳ ಮಂದಾಗ್ನಿ ಎಂಬ ಅಜೀರ್ಣಕ್ಕೂ ಅತಿಸಾರಕ್ಕೂ ಶ್ವಾಸಕಾಸಕ್ಕೂ ದೀರ್ಘ ಕಾಲದ ಕಫಕಟ್ಟಿಗೂ ಗುಣಕರ; ಮಕ್ಕಳನ್ನು ಬೇರಿಸ ಕಷಾಯದ ನೀರಲ್ಲಿ ಮಿಾಸಿದರೆ, ಬಾಲಗ್ರಹ ಗುಣ; ಬಹಳ ಬಿಸಿ ನೀರಲ್ಲಿ ಮಿಾಸಬಾರದಷ್ಟೆ. ಗಿಡದ ದಂಟು ದ್ವಿಯಾಹಿಕ ಜ್ವರದಲ್ಲಿ ಒಳ್ಳೇ ಉಪಯೋಗ. ಸಾಧಾ: ಬೇರು ಸಂಬಾರ ಜೀನಸು. ಎಲೆಗಳು ಪರಿಮಳಕ್ಕೂ ಚರ್ಮ ಹದ ಮಾಡುವದಕ್ಕೂ ಉಪಯೋಗ. ದಂಟು ನುಸಿಗಳ ನಾಶಕ.

**Acorus calamus,** *Lin.*—A. Griffithii, *Schott.*—A. Belangeri, *Schott.*—(Order Aroideæ.)

*Tam.* Vašambu, čaṭakkōdan, čaṭinam. *Tel.* Vasa, vaḍaja. *Can.* Baje-giḍa, nāru-bēru. *Tu.* Baje. *Mal.* Vayampu. *Kon.* Ēkhaṇḍa. *Mah.* Vēkhaṇḍa. *San.* Vačā, vijayā, jaṭilā, kharasāra.

### 339. ಬಟಾಣಿ, ಬಟ್ಟಗಡಲೆ (Garden Pea).

ತ. ಪಟಾಣಿ. ತೆ. ಗುಂಡುಶನಗಲು. ತು. ಬಟಾಣಿ. ಮ. ಪಟ್ಟಾಣಿಪಯರು. ಕೊಂ. ಬಟ್ಟಣೆ.

**ಉಪಯೋಗ**: ಸಾಧಾ: ಕಾಳಿನಿಂದ ಪಲ್ಯ ಮಾಡುವರು.

**Pisum sativum,** *Lin.*—(Order Leguminosæ.)

*Tam.* Paṭāṇi. *Tel.* Gunḍušanagalu. *Can.* Baṭāṇi, baṭṭagaḍale. *Tu.* Baṭāṇi. *Mal.* Paṭṭāṇi-payaru. *Kon.* Baṭṭaṇe.

### 340. ಬಡ ಗಿಡ.

**ಉಪಯೋಗ**: ಔಷ: ಕ್ರಿಮಿರೋಗಕ್ಕೂ ಕಾಮಿಲೆಗೂ ಇದರ ಸಹಮೂಲವನ್ನು ಉಪ್ಪಿನೊಡನೆ ಬೇಯಿಸಿ ಅರದು ಕೊಡುವರು.

**Phyllanthus Bada,** *Schold.(?)*—(Order Euphorbiaceæ.)

*Can.* Baḍa-giḍa.

### 341. ಬದನೆ, ಕಾಚಿ ಗಿಡ (Brinjal, Egg Plant, Aubergine).

ತ. ಕತ್ತರಿ, ವಳುದಳೈ. ತೆ. ವಂಕಾಯಿ. ತು. ಬದನೆ. ಮ. ವಳುತಿನ, ಮುಳುಕುತಕಾಳಿ. ಕೊಂ. ವಾಯಿಂಗಣ. ಮಹಾ. ವಾಯಿಂಗೆ. ಹಿಂ. ಬೈಂಗನ್. ಸಂ. ಪೀತಫಲ, ಕುಲಿಂಚ.

**ಹುಟ್ಟು**: ನಟ್ಟು ಬೆಳಿಸುವದು. **ಪುಷ್ಪ**: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಕಾಯಿ ಸೂಜಿಯಿಂದ ಚುಚ್ಚಿ ಎಳ್ಳೆಣ್ಣೆಯಲ್ಲಿ ಹುರದು ಹಲ್ಲುನೋವಿಗೆ ಉಪಯೋಗಿಸುವರು. ಸಾಧಾ: ಒಳ್ಳೇ ಪಲ್ಯ.

**Solanum Melongena,** *Lin.*—S. incanum, *Lin.*—S. longum, *Roxb.*—Melongena tereta, *Mill.*—(Order Solanaceæ.)

*Tam.* Kattari, vaḷudalai. *Tel.* Vaṅkāyi. *Can.* Badane, kāči-giḍa. *Tu.* Badane. *Mal.* Vaḷutina, muḷukutakāḷi. *Kon.* Vāyiṅgaṇa. *Mah.* Vāyiṅge. *Hin.* Baiṅgan. *San.* Pītaphala, kuliriča.

## 342. ಬನಪು, ಹೆಬ್‌ಹುಲುವೆ, ಕರಿಮತ್ತಿ, ಮತ್ತಿ ಮರ.

ತ. ಆನೆಮಿನ್, ಕರಿಮರ್ದು, ಮಥಿ. ತೆ. ನಳ್ಳಮಡ್ಡಿ, ಇನ್ನುಮಡ್ಡಿ. ತು. ಬನುಪು. ಮ. ಮರ್ದು, ಕರಿಮರ್ದು. ಮಹಾ. ಸಾಜೊ.

ಹುಟ್ಟು: ಕಾಡುಗಳು. ಪುಷ್ಪ: ಆಷಾಢ.

ಉಪಯೋಗ: ಸಾಧಾ: ಒಳ್ಳೇ ಕೆಲಸಕ್ಕೆ ಬರುವ ಮರ. ಸರಕಾರದ ಅಪ್ಪಣೆ ಇಲ್ಲದೆ ಮರವನ್ನು ಕಡಿಯಕೂಡದು.

**Terminalia tomentosa,** *Bedd.*—T. alata, *Roth.*—Pentaptera tomentosa, *Roxb.*—(Order Combretaceæ.)

*Tam.* Ānemin, karimardu, mathi. *Tel.* Naḷḷamaddi, innumaddi. *Can.* Banapu, hebhuluve, karimatti, matti-mara. *Tu.* Banupu. *Mal.* Mardu, karimardu. *Mah.* Sājo.

## 343. ಬಲರಕ್ಕಸೀ, ಬಲರಾಕ್ಷಸಿ ಗಿಡ.

ತ. ಪೇರಾಮುಟ್ಟೆ, ಆವಿಬತ್ತಂ. ತೆ. ಮುತ್ತುಪಲಾಗಮು.

ಹುಟ್ಟು: ದಿಂಡಿಗಲ್ಲು, ಚೋಳಮಂಡಲ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಜ್ವರದಲ್ಲಿ ಇದರ ಬೇರಿನ ಪಾನಕವು ಒಳ್ಳೇದು.

**Pavonia odorata,** *Willd.*—P. sidoides, *Horn.*—H. odoratus, *Roxb.*—(Order Malvaceæ.)

*Tam.* Pērāmuṭṭe, āvibattam. *Tel.* Muttupalāgamu. *Can.* Balarakkasī, balarākshasi-giḍa.

## 344. ಬಲಿಗೆ, ಬಲ್ಲಗಿ, ಕಿರ್ಬಲ್ಲಿ ಮರ.

ತ., ಮ. ಪುಟ್ಟನ್‌ಕಳ್ಳಿ. ತು. ಕರ್ಬಲಾಯಿ.

ಹುಟ್ಟು: ಘಟ್ಟಗಳ ಮೇಲೆ, ಲಂಕಾದ್ವೀಪದ ಘಟ್ಟಗಳಲ್ಲಿ.

ಉಪಯೋಗ: ಮರ ಗಟ್ಟಿ, ಕೆಲಸಕ್ಕೆ ಬರುತ್ತದೆ; ಊರಕೋಲು ಮಾಡುತ್ತಾರೆ.

Roy.

**Pœciloneuron indicum,** *Bedd.*—(Order Guttiferæ.)

palya, *dvm.*, *Mal.* Puṭṭankaḷḷi. *Can.* Balige, ballagi, kirballi-mara. *Tu.* Karbalāyi.

### 345. ಬಸವನಪಾದ, ಗೌರೀಹೂವು (Balsam).

ಹುಟ್ಟು: ಗದ್ದೆಗಳ ಬದಿಗಳಲ್ಲಿ. ಪುಷ್ಪ: ಮಳೆಗಾಲ.

ಉಪಯೋಗ: ಸಾಧಾ: ಅಲಂಕಾರದ ಹೂವು. ತೋಟಗಳಲ್ಲಿ ನೆಡುತ್ತಾರೆ.

**Impatiens Balsamina,** *Lin.*—(Order Geraniaceæ.)

*Can.* Basavanapāda, gaurī-hūvu.

### 346. ಬಸಳೆ.

*a)* ಬಿಳಿ ಬಸಳೆ (**Basella**).

ತ. ವೆಳ್ಳವಚಳ್ಳೈ. ತೆ. ಅಲ್ಲುಬಚ್ಚಲಿ. ತು. ಬೊಲ್ದುಬಸಳೆ. ಮ. ವೆಳಬಶಳ. ಕೊಂ. ಧವಿ ವಾಳಿ. ಹಿಂ. ಪೋಯಿ. ಸಂ. ಅಪೋದಿಕಾ, ದಯಘ್ನೀ.

**Basella alba,** *Lin.*—(Order Chenopodiaceæ.)

*Tam.* Veḷḷapačaḷai. *Tel.* Allubaččali. *Can.* Biḷi-bāsaḷe-baḷḷi. *Tu.* Boldu-basale. *Mal.* Veḷabašaḷa. *Kon.* Dhavi-vāḷi. *Hin.* Poyi. *San.* Apōdikā, dayaghnē.

*b)* ಕೆಂಪು ಬಸಳೆ.

ತ. ಶಿವಪ್ಪುಬಚಳ್ಳೈ. ತೆ. ದುಂಪಬಚ್ಚಲಿ. ತು. ಕೆಂಪು ಬಸಲೆ. ಮ. ಚೊಗನ್ನಬಶಳ. ಕೊಂ. ತಾಂಬಡಿ ವಾಳಿ.

ಉಪಯೋಗ: ಔಷ: ಎಲೆಗಳ ರಸ ಕಫಕ್ಕೆ ಆಗುತ್ತದೆ; ಅವುಗಳನ್ನು ಬೆಣ್ಣೆಯ ಸಂಗಡ ಅರದು ಉರಿಗೆ ಹಚ್ಚುತ್ತಾರೆ. ಪಿತ್ತವಾಂತಿ ನಿಲ್ಲುವ ಹಾಗೆ ಕೆಂಪು ಬಸಳೆಯ ಬೇರಿನ ಕಷಾಯ ಮಾಡಿ ಕೊಡುತ್ತಾರೆ. ಸಾಧಾ: ಒಳ್ಳೇ ಪಲ್ಯ; ವಿಶೇಷವಾಗಿ ಕರುಳುಗಳ ರೋಗವಿರುವವರಿಗೆ ತಕ್ಕದ್ದು.

**Basella rubra,** *Lin.*—(Order Chenopodiaceæ.)

*Tam.* Šivappubačaḷai. *Tel.* Dumpabaččali. *Can.* Kempu-basaḷe. *Tu.* Kempu-basale. *Mal.* Čoganna-bašaḷa. *Kon.* Tāmbaḍi-vāḷi.

*c)* ಹಿರಿಬಸಳೆ, ದೊಡ್ಡ ಬಸಳೆಬಳ್ಳಿ.

ಮ. ಪಚಳ, ಪೊದಿಕ.

ಹುಟ್ಟು: ನಟ್ಟು ಬೆಳಿಸುತ್ತಾರೆ. ಪುಷ್ಪ: ಪುಷ್ಯದಿಂದ ಫಾಲ್ಗುಣದ ವರೆಗೆ.

ಉಪಯೋಗ: ಸಾಧಾ: ಪಲ್ಯ; ಕೆಂಪು ಬಣ್ಣಕ್ಕೆ ಆಗುತ್ತದೆ. ಒಣ ಎಲೆಗಳ ಚಾ ಮಾಡುತ್ತಾರೆ. ಸೀಗೇ ಗುಣ; ಇದರ ಬೋಂಪು ಹಚ್ಚಿಕೊಂಡು ಮಿಂದರೆ, ಉಷ್ಣದ ತಲೆನೋವು ಗುಣ; ನಿದ್ರೆ ಸಹ ಬರುವದು.

**Basella cordifolia,** *Willd.*—(Order Chenopodiaceæ.)

*Can.* Hiribasaḷe, doḍḍa-basaḷe-baḷḷi. *Mal.* Pačaḷa, podika.

*d)* ಕಾಡು ಬಸಳೆ (**Bryophyllum**).

**ಹುಟ್ಟು**: ಕಾಡುಗಳಲ್ಲಿ.

**ಉಪಯೋಗ**: ಔಷ: ಇದರ ದಪ್ಪವಾದ ಎಲೆಯ ಪದರನ್ನು ಸುಲಿದು ತೆಗೆದು ಎಲೆಯನ್ನು ಘಾಯಗಳ ಮೇಲೆ ಇಟ್ಟರೆ, ಬೇಗ ಗುಣವಾಗುವದು.

**Bryophyllum calycinum,** *Salisb.*—(Order Crassulaceæ.)

*Can.* Kāḍu-basaḷe.

### 347. ಬಸುರಿ, ಜುವ್ವಿ ಮರ (Wave-leaved Fig Tree).

ತ. ಇಚಿ, ಕಲ್ಲಿಚಿ. ತೆ. ಜಟಿನಿ, ಗರ್ದಭಾಂಡೆ, ಕಲಜುವ್ವಿ. ಮ. ಚುವನ್ನ ಆಲ್, ಇತ್ತಿ, ಚಕಿಲ. ಸಂ. ಕನೀನಿಕಾ, ಗೃಹಾದ್ವಾರಪಾರ್ಶ್ವೇ.

**ಹುಟ್ಟು**: ಕೊಂಕಣ, ಮಲಬಾರ. **ಪುಷ್ಪ**: ಫಾಲ್ಗುಣ, ಚೈತ್ರ.

**ಉಪಯೋಗ**: ಔಷ: ಇದರ ಚೆಕ್ಕೆಯನ್ನು ಹಾಲಿನಲ್ಲಿ ಅರದು ಉದರಶೂಲೆಯಲ್ಲಿ ಕುಡಿಯುವರು. ಸಾಧಾ: ಬೇರು ಬಣ್ಣಕ್ಕೆ ಆಗುತ್ತದೆ. ಅದರ ಸಿಪ್ಪೇ ನಾರಿನಿಂದ ಬಿಲ್ಲಿನ ಹಗ್ಗ ಮಾಡುತ್ತಾರೆ.

**Ficus Tsiela,** *Roxb.*—F. amplissima, *Smith.*—Urostigma pseudo-Tsiela, *Miq.*—(Order Urticaceæ.)

*Tam.* Iči, kalliči. *Tel.* Jaṭini, gardabhāṇḍe, kalajuvvi. *Can.* Basuri, juvvi-mara. *Mal.* Čuvanna-āl, itti, čakila. *San.* Kanīnikā, gṛihādvārapāršvē.

### 348. ಬಾರ್ಕಿನ ಮರ (Peruvian Bark, Cinchona).

"ಕ್ವಯ್ನನ್" ಎಂಬ ವಿಶೇಷ ಜ್ವರದೌಷಧವಾಗುವಂಥ ಈ ಮರವನ್ನು ಸರಕಾರದವರು ಅಮೇರಿಕ ಖಂಡದಿಂದ ತರಿಸಿ ನೀಲಗಿರಿಗಳಲ್ಲಿ ನಟ್ಟು ಬೆಳಿಸಿದರು. ಈಗ ಅದು ಸಿಂಹಳ ದ್ವೀಪ, ಪಂಜಾಬ, ಕೊಡಗು ಸೀಮೆ, ಮಹಾಬಲೇಶ್ವರ ಮುಂತಾದ ಕಡೆಗಳಲ್ಲಿಯೂ ತಕ್ಕಷ್ಟು ದೊರೆಯುತ್ತದೆ. ನೀಲಗಿರಿಗಳಲ್ಲಿ ಇದರಿಂದ ಜ್ವರಕ್ಕೆ ಗುಣವುಳ್ಳ ಔಷಧವನ್ನು ಮಾಡಿ ಅಗ್ಗವಾಗಿ ಮಾರುತ್ತಾರೆ. "ಕ್ವಯ್ನನ್" ಎಂಬದು ಜ್ವರಕ್ಕೆ ಮಾತ್ರವಲ್ಲದೆ ಅತಿಸಾರಕ್ಕೂ ಅಜೀರ್ಣರೋಗಕ್ಕೂ ಕಠಿಣ ಕೆಮ್ಮಿಗೂ ಕೆಂಪಿರೋಗಕ್ಕೂ ಕಣ್ಣುರೋಗಕ್ಕೂ ಉಪಯೋಗ.

**Cinchona succirubra,** *Wedd.*—C. calisaya, *Wedd.*—(Order Rubiaceæ.)

*Can.* Bārkina-mara.

### 349. ಬಾಳೆ ಗಿಡ (Plantain or Banana Tree).

ತ. ವಾಳೈ, ಅರಂಬೈ, ಅರೇಚಿಗಮ್. ತೆ. ಅರಟಿ, ಕದಳಮು, ತತಚ್ಛದಮು. ತು. ಬಾರೆ. ಮ. ವಾಟಿ. ಕೇಳಿ. ಹಿಂ. ಕೇಲಿ. ಸಂ. ಕದಲಿ, ದೀರ್ಘಪತ್ರ, ಅಳಬೂ, ವೃಷಪುಷ್ಪ.

**ಉಪಯೋಗ**: ಔಷ: ಬೇರನ್ನು ಜಜ್ಜಿ ಹಾಲಿನ ಸಂಗಡ ಕುಡಿದರೆ, ಶಿರೋ

ಭ್ರಮಣ ಗುಣ; ಅದರ ರಸ ಮೂತ್ರಭೇದಿ. ಹೊಟ್ಟೆಯೊಳಗಣ ಬಾವಿಗೆ ಇದರ ಕಾಯಿ ಹಿಟ್ಟಿನಿಂದ ಮಾಡಿದ ಅಂಬಲಿ ಹಿತಕರ. ಎಲೆಗಳು ತಂಪಾಗಿರುವದರಿಂದ ಉರಿತದ ಶಮನಕ್ಕಾಗಿ ಕಟ್ಟುತ್ತಾರೆ. ದಿಂಡಿನ ರಸವು ರಕ್ತಭೇದಿಗೂ ವಾಂತಿಗೂ ಉಪಯೋಗ. ಹೂವಿನ ರಸ ಮಕ್ಕಳ ಅಗ್ರಕ್ಕೆ ಒಳ್ಳೇದು. ಸಾಧಾ: ಕಾಯಿ, ಹಣ್ಣು, ನಾರು, ದಿಂಡು, ಗಡ್ಡೆ, ಹೂ, ಹಾಳೆ, ಇವುಗಳ ಉಪಯೋಗ ಎಲ್ಲರಿಗೂ ಗೊತ್ತದೆ.

**Musa paradisiaca,** *Lin.*—M. sapientum, *Lin.*—(Order Scitamineæ.)

*Tam.* Vāḷai, arambai, arēčigam. *Tel.* Araṭi, kadaḷamu, tataččhadamu. *Can.* Bāḷe-giḍa. *Tu.* Bāre. *Mal.* Vāḻa. *Kon.* Kēḷi. *Hin.* Kēli. *San.* Kadali, dīrghapatra, aḷabū, vṛishapushpa.

## 350. ಬಿಕ್ಕೆಗಿಡ, ಕಂಬಿಮೆನ.

ತ. ಕಂಬಿಲಿಪಿಶಿನ್. ತೆ. ಚಿತ್ತಮತ್ತ, ಮಂಚಿಬಿಕ್ಕಿ.

ಇದರ ಹೂವುಗಳು ಮುಂಜಾನೆ ಬಿಳೀ ಇದ್ದು, ಸಂಜೆಯ ಹೊತ್ತಿಗೆ ಹಳದಿಯಾಗುತ್ತವೆ.

**ಹುಟ್ಟು:** ದಕ್ಷಿಣ ಕನ್ನಡ, ಮಹಾರಾಷ್ಟ್ರ. **ಪುಷ್ಪ:** ಚೈತ್ರ, ವೈಶಾಖ.

**ಉಪಯೋಗ:** ಔಷ: ಇದರ ಚಿಗುರುಗಳಿಂದ ಹಳದಿ ಬಣ್ಣದ ಅಂಟು ಸುರಿಯುವದು. ಈ ಅಂಟನ್ನು ಹುಣ್ಣುಗಳಿಗೆ ಹಚ್ಚಿದರೆ, ಹುಳಕು ಹೋಗುವದು.

**Gardenia gummifera,** *Lin.*—(Order Rubiaceæ.)

*Tam.* Kambilipišin. *Tel.* Čittamatta, mañčibikki. *Can.* Bikke-giḍa, kambimena.

## 351. ಬಿದಿರು, ಬಿದುರು, ಗಳ (Common Prickly Bamboo).

ತ. ಮೂಂಗಿಲ್, ಅಂಬಲ್. ತೆ. ವೆದುರು. ತು. ಬೆದ್ರ್. ಮ. ಮೂಂಗಿಲ್. ಕೊಂ. ವಾಸೊ. ಹಿಂ. ಭಾಸಾ. ಸಂ. ತೇಜನ, ನವಾಗ್ರಗಂಧಾ, ಬಹುಪಲ್ಲವ.

**ಹುಟ್ಟು:** ಘಟ್ಟಗಳು. ಪುಷ್ಪ ಬಂದರೆ ಸಾಯುತ್ತದೆ.

**ಉಪಯೋಗ:** ಔಷ: ಚೆಕ್ಕೆ ನಂಜಿಗೂ, ಎಲೆಗಳು ಮಕ್ಕಳ ಕ್ರಿಮಿರೋಗಕ್ಕೂ ಸ್ತ್ರೀಯರ ಮುಟ್ಟುದೋಷಕ್ಕೂ ಆಗುತ್ತವೆ. ಹೆಣ್ಣು ಬಿದಿರಿನಿಂದ ಮಾಡುವ ತವಕ್ಷೀರವೆಂಬ ಹುಡಿ ಪಕ್ಷವಾತದೋಷ, ಉದರವಾಯು, ವಿಷ, ಇವುಗಳಲ್ಲಿ ಉಪಯೋಗ. ಸಾಧಾ: ಬಿದಿರು ವಿಧ ವಿಧವಾದ ಪ್ರಯೋಗಕ್ಕೆ ಬರುತ್ತದೆ. ಬಿದಿರಿನ ತಿರುಳು* ಎಳತಾದರೆ, ಪಲ್ಯ ಮತ್ತು ಉಪ್ಪಿನಕಾಯಿ ಮಾಡುತ್ತಾರೆ. ಅಜೀರ್ಣರೋಗಿಗಳಿಗೆ ಅದರ ಪಲ್ಯ ಒಳ್ಳೇದಾಗಿದೆ. ಬೀಜ ಅಟ್ಟು ಕಡಬು ಮಾಡಿ ಇಲ್ಲವೆ ಬೇಯಿಸಿ ಕೆಲವರು ತಿನ್ನುವರು.

**Bambusa arundinacea,** *Willd.*—B. Arundo, *Klein.*—B. orientalis, *Nees.*—B. spinosa, *Roxb.*—A. Bambos, *Lin.*—(Order Gramineæ.)

* ಕನ್ನಡ: ಅಣಿಲೆ. ತು. ಕಣಿಲೆ. ಕೊಂ. ಕೀರ್ಲು. *Can.* Aṇile. *Tu.* Kaṇile. *Kon.* Kīrlu.

*Tam.* Mūṅgil, āmbal. *Tel.* Veduru. *Can.* Bidiru, biduru, gaḷa. *Tu.* Bedru. *Mal.* Mūṅgil. *Kon.* Vāso. *Hin.* Bhāsā. *San.* Tējana, navāgragandhā, bahupallava.

### 352. ಬಿಲಿಂಬಿ ಮರ (Bilimbi Tree).

ತ. ಪಿಲಿಂಬಿ, ಪಿಲಿಂಚಿ, ಕುಚ್ಚಿತಮರತಕ್ಕಾ. ತು. ಬಿಂಬುಲಿ. ಮ. ವಿಲುಂಬಿ, ವಿಲಿಂಬಿ. ಕೊಂ. ಬಿಂಬಲ. ಹಿಂ. ತಮರುಂಗ್.

**ಉಪಯೋಗ:** ಸಾಧಾ: ಕಾಯಿಪಲ್ಯ, ಉಪ್ಪಿನಕಾಯಿ ಸಹ ಮಾಡಿ ಇದರ ಕಾಯಿ ಬಳಿಸುತ್ತಾರೆ. ಅದರ ರಸದಿಂದ ವಸ್ತ್ರದ ಕಲೆಗಳನ್ನು ತೆಗಿಯಬಹುದು. ಅದನ್ನು ಸಕ್ಕರೆಯೊಡನೆ ಬೇಯಿಸಿ ತಂಪಾದ ಪಾನಕ ಮಾಡುವರು.

**Averrhoa Bilimbi,** *Lin.*—(Order Geraniaceæ.)

*Tam.* Pilimbi, piliñci, kuccitamaratakāy. *Can.* Bilimbi-mara. *Tu.* Bimbuli. *Mal.* Vilumbi, vilimbi. *Kon.* Bimbala. *Hin.* Tamaruṅg.

### 353. ಬಿಲಿ ಮರ.

ತ. ಪೂಮರಂ, ಬೆಲ್ಲಿಮರಂ.

**ಹುಟ್ಟು:** ನೀಲಗಿರಿಗಳು. **ಪುಷ್ಪ:** ಪುಷ್ಯದಿಂದ ಫಾಲ್ಗುಣದ ವರೆಗೆ.

**ಉಪಯೋಗ:** ಸಾಧಾ: ಹೂ ರಮ್ಯ. ಚೆಕ್ಕೆಯಿಂದ ಒಳ್ಳೇ ನಸ್ಯ (ನಸಿಪುಡಿ) ಮಾಡುತ್ತಾರೆ.

**Rhododendron arboreum,** *Smith.*—Rh. puniceum, *Roxb.*—(Order Ericaceæ.)

*Tam.* Pūmaram, bellimaram. *Can.* Bili-mara.

### 354. ಬಿಳಿ ಗಂಧಗಿರಿ, ನೊಗೆ ಮರ (Toon Tree, White Cedar).

ತ. ತೂನ್. ಮ. ಮಡಗಿರಿವೆಂಬು, ದೇವದಾರುಂ.

**ಉಪಯೋಗ:** ಔಷಧ: ಚೆಕ್ಕೆಯ ಕಷಾಯ ಹೊಟ್ಟೆಯ ಅಕ್ರಮಕ್ಕೆ ಉಪಯೋಗ. ಸಾಧಾ: ಮರ ಕೆಲಸಕ್ಕೆ ಬರುತ್ತದೆ. ಅದಕ್ಕೆ ಪರಿಮಳ ಉಂಟು.

**Cedrela Toona,** *Roxb.*—Cedr. hexandra, *Wall.*—(Order Meliaceæ.)

*Tam.* Tūn. *Can.* Biḷi-gandhagiri, noge-mara. *Mal.* Maḍagiri-vembu, dēvadārum.

### 355. ಬಿಳೀ ಅಭ್ರಾಂಗ ಗಿಡ.

ತ. ಕಡಮ್ಬು, ವಿಚಾಲಮ್. ತು. ಅಬ್ರೋಣಿ. ಮ. ಕೊಟ್ಟಕ್ಕ. ಕೊಂ. ಚಿವಾರಿ.

**ಹುಟ್ಟು:** ತೋಟ ಅಡವಿಗಳು. **ಪುಷ್ಪ:** ಶ್ರಾವಣ, ಭಾದ್ರಪದ.

ಉಪಯೋಗ: ಔಷ: ಎಲೆಗಳ ಕಷಾಯ ಅಜೀರ್ಣಕ್ಕೂ ಸೀತಜ್ವರಕ್ಕೂ ಉಪಯೋಗ; ಕಕ್ಕೆಕೋಲು ಸಹ ಸೇರಿಸಿ ಮಾಡಿದ ಕಷಾಯ ಕುಡಿದರೆ, ರಕ್ತಭೇದಿಗೆ ಒಳ್ಳೇದು; ಸಿರ್ಕ ಕೂಡಿಸಿ ಮುಕ್ಕುಳಿಸಿದರೆ, ಬಾಯಿಹುಣ್ಣಿಗಾಗುತ್ತದೆ. ಸಾಧಾ: ಎಲೆಯ ಸಾರು ಮಾಡುತ್ತಾರೆ.

**Grewia microcos,** *Lin.*—G. affinis, *Lindl.*—G. ulmifolia, *Roxb.*—Microcos Mala, *Ham.*—M. paniculata, *Lin.*—M. Stauntoniana, *Don.*—(Order Tiliaceæ.)

*Tam.* Kadambu, vičālam. *Can.* Biḷī-abhrāṅga-giḍa. *Tu.* Abrōṇi. *Mal.* Koṭṭakka. *Kon.* Čivāri.

### 356. ಬಿಳೇ ಕುಂಬಳ, ಬೂದಿಕುಂಬಳ ಬಳ್ಳಿ (White Gourd or Pumpkin).

ತ. ಕಲ್ಯಾಣಪೂಚುಣಿ, ಪರಂಗಿಕಾಯಿ. ತೆ. ಬೂದಿಗುಮ್ಮಡಿ. ತು. ಕರುಕುಂಬುಡ. ಮ. ಕುಂಬಳಮ್. ಕೊಂ. ಕುವಾಳೆ. ಸಂ. ಕೂಷ್ಮಾಂಡ.

ಹುಟ್ಟು: ತೋಟಗಳು. ಪುಷ್ಪ: ಆಶ್ವೀಜ, ಕಾರ್ತಿಕ.

ಉಪಯೋಗ: ಔಷ: ವಿಷ ತಿಂದವರಿಗೆ ಈ ಕಾಯಿಯನ್ನು ಹೆರದು ಹಿಂಡಿದ ನೀರನ್ನು ಕುಡಿಸುತ್ತಾರೆ. ಕ್ಷಯರೋಗಿಗಳಿಗೆ ಇದರ ಲೇಹ್ಯ ಮಾಡಿ ಕೊಡುವರು. ಸಾಧಾ: ಕಾಯಿ ಪಲ್ಯ.

**Cucurbita Pepo,** *Dec.*—(Order Cucurbitaceæ.)

*Tam.* Kalyāṇapūčuṇi, paraṅgikāyi. *Tel.* Būdigummaḍi. *Can.* Biḷē-kumbaḷa, būdikumbaḷa-baḷḷi. *Tu.* Karukumbuḍa. *Mal.* Kumbaḷam. *Kon.* Kuvāḷe. *San.* Kūshmāṇḍa.

### 357. ಬಿಳೇ ಗಣಜಲಿ, ಬಿಳೇ ಕೊಮ್ಮೆ, ಕೆಂಚಿಗೆ ಗಿಡ.

ತ. ಚುವೇದಮೂಲಮ್, ಚಾರಣೈ, ತಲೈವಿರಿಚ್ಚಾನ್. ತೆ. ಗಲಿಜೇರು. ತು., ಕೊಂ. ಪಾಷಾಣಭೇದಿ. ಮ. ಚಾರಣ, ಸಾರಣ. ಸಂ. ವರ್ಷಾಭೂ.

ಹುಟ್ಟು: ತೀರಪ್ರಾಂತಗಳೂ ಬಂಗಾಳವೂ. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಬೇರು ಮಲಭೇದಿ. ಅದರ ಕಷಾಯ ಜ್ವರಕ್ಕೂ ಶೂಲರೋಗಕ್ಕೂ, ಸಹಮೂಲದ ಕಷಾಯ ಎಣ್ಣೆಯಲ್ಲಿ ಬೇಯಿಸಿ ಕಾಲು ಬಾರದ ಮಕ್ಕಳಿಗೂ ಎಲ್ಲಾ ತರದ ವಾತರೋಗಕ್ಕೂ ಉಪಯೋಗವುಳ್ಳದ್ದು. ಸಾಧಾ: ಪರಿಮಳವಿರುವದರಿಂದ ಚಟ್ಣಿ ತಂಬಳಿ ಮಾಡುತ್ತಾರೆ.

**Trianthema pentandra,** *Lin.*—T. obcordata, *Wall.*—(Order Ficoideæ.)

*Tam.* Čuvēdamūlam, čāraṇai, talaiviriččān. *Tel.* Galijēru. *Can.* Biḷē-gaṇajali, biḷē-komme, keñčige-giḍa. *Tu., Kon.* Pāshāṇabhēdi. *Mal.* Čāraṇa, sāraṇa. *San.* Varshābhū.

### 358. ಬಿಳೀ ಜಾಲೀ ಮರ (Panicled Acacia).

ತ. ಪಟ್ಟೈಚ್ಚಾರಾಯಂ, ವೇಳ್ವೇಲ್. ತೆ. ತೆಲ್ಲತುಮ್ಮ. ಮ. ಚೆಂಗರಿ(ವೆಂಗಾರಿ)ಞಾಲಿ.

**ಹುಟ್ಟು:** ಹೆಚ್ಚಾಗಿ ಚೋಳಮಂಡಲ ದಕ್ಷಿಣಗಳು. **ಪುಷ್ಪ:** ಜ್ಯೇಷ್ಠದಿಂದ ಶ್ರಾವಣದ ವರೆಗೆ.

**ಉಪಯೋಗ:** ಸಾಧಾ: ಅಲಂಕಾರದ ಮರ. ಚೆಕ್ಕೆಯಿಂದ ನಾರು ತೆಗಿಯುವರು; ಮರ ಕೆಲಸಕ್ಕೆ ಬರುತ್ತದೆ.

**Acacia leucophlæa,** *Willd.*—A. alba, *Willd.*—Mimosa alba, *Rottl.*—M. leucophlæa, *Roxb.*—(Order Leguminosæ.)

*Tam.* Paṭṭaiččārāyam, vēḷvēlu. *Tel.* Tellatumma. *Can.* Biḷē-jālī-mara. *Mal.* Čengari(veṅgāri)ñāli.

### 359. ಬಿಳೀ ಜೋಳ (Great Millet or Cholum).

ತ. ಚೋಳಮ್, ಚೊನ್ನಲ್. ತೆ. ಜೊನ್ನಲು. ತು. ಜೋಳ. ಮ. ಚೋಳಮ್. ಕೊಂ. ಜೋಳು.

**ಹುಟ್ಟು:** ದಕ್ಷಿಣ ಚೋಳಮಂಡಲಗಳಲ್ಲಿ ನಟ್ಟು ಬೆಳಿಸುತ್ತಾರೆ.

**ಉಪಯೋಗ:** ಸಾಧಾ: ಬೀಜ ಮನುಷ್ಯರಿಗೂ, ದಂಟು ದನಗಳಿಗೂ ಒಳ್ಳೇ ಆಹಾರ.

**Sorghum vulgare,** *Pers.*—Andropogon Sorghum, *Brot.*, *Roxb.*—Holcus Sorghum, *Lin.*—(Order Gramineæ.)

*Tam.* Čōḷam, čonnal. *Tel.* Jonnalu. *Can.* Biḷē-jōḷa. *Tu.* Jōḷa. *Mal.* Čōḷam. *Kon.* Jōḷu.

### 360. ಬಿಳೀ ತಾವರೆ, ಬಿಳ್ಳೇ ನೈದಿಲೆ (White Water Lily or Lotus).

ತ. ವೆಳ್ಳಾಂಬಲ್, ಇಂದಿರವಾಚಂ. ತೆ. ಅಲ್ಲಿಕಾಡ. ತು. ತಾಮರೆಪೂ. ಮ. ವೆಳ್ಳಾನ್ಪಲ್, ನೀರಾಂಪಲ್. ಕೊಂ. ಧವೆಸಾಳಕ. ಸಂ. ಸೀತೋತ್ಪಲ.

**ಹುಟ್ಟು:** ಕೆರೆಗಳು.

**ಉಪಯೋಗ:** ಸಾಧಾ: ಗಡ್ಡೆ ಮತ್ತು ಬೀಜ ತಿನ್ನುತ್ತಾರೆ. ಅಲಂಕಾರದ ಹೂ.

**Nymphæa stellata,** *Willd.*—(Order Nymphæaceæ.)

*Tam.* Veḷḷāmbal, indiravāčam. *Tel.* Allikāḍa. *Can.* Biḷē-tāvare, biḷē-naidile. *Tu.* Tāmarepū. *Mal.* Veḷḷānpal, nīrāmpal. *Kon.* Dhave-sāḷaka. *San.* Sītōtpala.

### 361. ಬಿಳೀ ನೆಕ್ಕಿ, ಕರ್ಲಕ್ಕಿ, ಲಕ್ಕಿ ಗಿಡ (Five-leaved Chaste Tree).

ತ. ವೆಣ್ಣೊಚ್ಚಿ, ಚಿಂದುವಾರಮ್, ನಿಕ್ಕುಂಡಿ. ತೆ. ತೆಲ್ಲವಾವಿಲಿ, ಸಿಂಧುವಾರಮು. ತು. ನೆಕ್ಕಿ. ಮ. ಇಂದ್ರಾಣಿ, ವೆಣ್ಣೊಚ್ಚಿ. ಕೊಂ. ನಿಗುಂಡು. ಮಹಾ. ನಿರ್ಗುಂಡ. ಸಂ. ನಿರ್ಗುಂಡಿ.

**ಹುಟ್ಟು**: ದಕ್ಷಿಣ ಹಿಂದುಸ್ಥಾನ, ಬಂಗಾಳ. **ಪುಷ್ಪ**: ಚೈತ್ರದಿಂದ ಜ್ಯೇಷ್ಠದ ವರೆಗೆ.

**ಉಪಯೋಗ**: ಔಷ: ವಾತದಿಂದ ಸಂದುಗಳಲ್ಲಿ ಆಗುವಂಥ ಉರಿಬಾವಿಗೆ ಈ ಗಿಡದ ಎಲೆಗಳನ್ನು ಬಿಸಿ ಮಾಡಿ ಕಟ್ಟಿದರೆ, ಗುಣ; ಉಳುಕುಗಳಿಗೆ ಸಹ ಕಟ್ಟುವರು. ಬೇರಿನ ಕಷಾಯ ಆಹಿಕಜ್ವರಕ್ಕೂ ವಿಷಮಜ್ವರಕ್ಕೂ ಕ್ರಿಮಿರೋಗಕ್ಕೂ ಬಾವಿಗೂ ಆಗುತ್ತದೆ. ಎಲೆಯ ಕಷಾಯದಲ್ಲಿ ಬಾಣಂತಿಯರು ಮಿಾಯುತ್ತಾರೆ; ಅದರ ರಸದ ಲೇಪ ಕೇಶವೃದ್ಧಿಗೆ ಆಗುತ್ತದೆ. ಒಣಗಿದ ಕಾಯಿ ಕ್ರಿಮಿಗೂ, ಒಣ ಎಲೆಗಳ ಬತ್ತಿ ಸೇದಿದರೆ ತಲೆನೋವಿಗೂ ಕಫಕ್ಕೂ ಒಳ್ಳೇದು. ಎಲೆಯ ಕಷಾಯ ದೃಷ್ಟಿಮಾಂದ್ಯಕ್ಕೂ, ಬೇರು ಮತ್ತು ಗಂಜಿನೀರಿನ ಸಂಗಡ ವ್ರಣಗಳಿಗೂ ಉಪಯೋಗ.

**Vitex Negundo**, *Lin.*—V. paniculata, *Lam.*—(Order Verbenaceæ.)

*Tam.* Veṇṇočči, činduvāram. *Tel.* Tellavāvili, sindhuvāramu. *Can.* Biḷē-nekki, karlakki, lakki-giḍa. *Tu.* Nekki. *Mal.* Indrāṇi, veṇṇočči. *Kon.* Niguṇḍu. *Mah.* Nirguṇḍa. *San.* Nirguṇḍi.

### 362. ಬಿಳೇ ಬೋವು, ಜಾಲಾರಿ ಮರ (Lac Tree).

ತ. ತಲೂರ. ತೆ. ಜಾಲಾರಿಚೆಟ್ಟು, ಹಿಂಸ್ರಾ. ಮ. ಕರಿಮರುತು.

**ಹುಟ್ಟು**: ಘಟ್ಟಗಳ ಕಾಡು. **ಪುಷ್ಪ**: ಫಾಲ್ಗುಣ, ಚೈತ್ರ.

**ಉಪಯೋಗ**: ಸಾಧಾ: ಮರವು ಕೆಲಸಕ್ಕೂ ಕಟ್ಟಿಗೆಗೂ ಬಹಳ ಉಪಯೋಗ.

**Shorea Talura**, *Roxb.*—Vatica laccifera, *W. et A.*—(Order Dipterocarpeæ.)

*Tam.* Talūra. *Tel.* Jālāričeṭṭu, hiṁsrā. *Can.* Biḷē-bōvu, jālāri-mara. *Mal.* Karimarutu.

### 363. ಬಿಳೇ ಮುಂದಾರ, ಬಿಳಿ ಕಂಚಿವಾಳದ ಗಿಡ.

ತ. ಕೊಕ್ಕುಮಂದಾರೈ. ಮ. ವೆಳುತ್ತಮಂದಾರಮ್. ಕೊಂ. ಧವೆ ಮಂದಾರು.

**ಹುಟ್ಟು**: ತೋಟಗಳಲ್ಲಿ ಅಲಂಕಾರಕ್ಕೆ ಬೆಳಿಸುವರು. **ಪುಷ್ಪ**: ಇಡೀ ವರುಷ.

**ಉಪಯೋಗ**: ಔಷ: ಬೇರಿನ ಕಷಾಯ ಎಣ್ಣೆಯೊಡನೆ ಗುಳ್ಳೆಗಳಿಗೆ ಲೇಪ. ಹೂ ಮೆಣಸಿನ ಸಂಗಡ ಅರದು, ತಲೆನೋವಾದರೆ, ಕಪಾಲಕ್ಕೆ ಹಚ್ಚುವರು. ಚೆಕ್ಕೆ ನಂಜಿಗೆ ಆಗುತ್ತದೆ.

**Bauhinia acuminata**, *Lin.*—(Order Leguminosæ.)

*Tam.* Kokku-mandārai. *Can.* Biḷē-mandāra, biḷi-kañčivāḷada-giḍa. *Mal.* Veḷutta-mandāram. *Kon.* Dhave-mandāru.

### 364. ಬಿಳೇ ಸೂಲಿ, ಬಿಳೇ ಹೂಲಿ, ಬಿಳಿ ಹಿಂಡಿ ಗಿಡ.

ತ. ಚಿರುಬೂಳೈ, ಉಳಿಞ್ಞೈ. ತೆ. ಪೆಂಡಿದೊಂಡ. ಮ. ಚಿರುಪೂಳ, ಪಿಂಡಿಕುಂಡ. ಸಂ. ಆದಾನಪಾಕಿ, ಶತಕಾಭೇದಿ.

**ಹುಟ್ಟು:** ತಂಪು ಸ್ಥಳಗಳು. **ಪುಷ್ಪ:** ಆಶ್ವೀಜದಿಂದ ಮಾರ್ಗಶಿರದ ವರೆಗೆ.

**ಉಪಯೋಗ:** ಔಷ: ಬೇರು ಕುರು ಮುಂತಾದ ಬಾವಿನ ಕೀವನ್ನು ಮೇಲೆ ತರುವದಕ್ಕೆ ಲೇಪಿಸುವರು; ಅದರ ಕಷಾಯ ಮೂತ್ರಕಟ್ಟಿಗಾಗುತ್ತದೆ.

**Ærua lanata,** *Juss.*—Achyranthes lanata, *Lin.*—A. villosa, *Forsk.*—Illecebrum lanatum, *Lin.*—(Order Amarantaceæ.)

*Tam.* Čirubūḷai, uḷiñai. *Tel.* Peṇḍidoṇḍa. *Can.* Biḷē-sūli, biḷē-hūli, biḷi-hiṇḍi-giḍa. *Mal.* Čirupūḷa, piṇḍikuṇḍa. *San.* Ādānapāki, šatakābhēdi.

### 365. ಬೀಟಿ ಮರ (Blackwood or Rosewood Tree).

ತ. ಎರುವಡಿ, ಇಟ್ಟಿ. ತೆ. ಜಿಟಂಗಿ, ಇಟ್ಟಿಗಿ. ಮ. ವೀಟ್ಟಿ. ಕೊಂ. ಬೀಟೀರೂಕು.

**ಹುಟ್ಟು:** ಕೊಂಕಣ, ಮಲಬಾರ, ಚೋಳಮಂಡಲ ತೀರಗಳು. **ಪುಷ್ಪ:** ಚೈತ್ರದಿಂದ ಜ್ಯೇಷ್ಠದ ವರೆಗೆ. ಮರ ಕಡಿಯಲಿಕ್ಕೆ ಸರಕಾರದ ಅಪ್ಪಣೆ ಬೇಕು.

**ಉಪಯೋಗ:** ಔಷ: ಬೀಜದ ಎಣ್ಣೆ ಸಂಜಿಗೆ ಆಗುತ್ತದೆ. ಸಾಧಾ: ಮರ ಕೆಲಸಕ್ಕೆ ಬಹಳ ಒಳ್ಳೇದು.

**Dalbergia latifolia,** *Roxb.*—Dalbergia emarginata, *Roxb.*—(Order Leguminosæ.)

*Tam.* Eruvaḍi, iṭṭi. *Tel.* Jiṭangi, iṭṭigi. *Can.* Bīṭi-mara. *Mal.* Vīṭṭi. *Kon.* Bīṭī-ruku.

### 366. ಬೆಂಡೆಕಾಯಿ ಗಿಡ (Esculent Okra, Edible Hibiscus).

ತ., ಮ. ವೆಣ್ಡ. ತೆ. ಬೆಂಡಕಾಯ. ತು. ಬೆಂಡೆಕಾಯಿ. ಕೊಂ. ಭೇಂಡ. ಮಹಾ. ಕೇಲ. ಹಿಂ. ಭೇಂಡಿ. ಸಂ. ಪಾಟಲಿ, ನೇತ್ರಾಕ್ಷ್ಕೋತನ.

**ಹುಟ್ಟು:** ನಟ್ಟು ಬೆಳಿಸುವರು. **ಪುಷ್ಪ:** ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ:** ಔಷ: ಮೂತ್ರಭೇದಿ ಗುಣ. ಎಲೆ ಕಾಯಿಗಳನ್ನು ಜಜ್ಜಿ ಬಾವು ಕುರುಗಳಿಗೆ ಹಚ್ಚುವದು ಒಳ್ಳೇದು. ಹಸಿ ಕಾಯಿ ಬೇಯಿಸಿ ಬಾಯಲ್ಲಿ ಅದರ ಹಬೆ ತೆಕ್ಕೊಂಡರೆ, ಸ್ವರಭಂಗವೂ ಗಂಟ್ಲಿನ ಬೇರೆ ಅಕ್ರಮಗಳೂ ಶಮನ. ಸಾಧಾ: ಕಾಯಿ ಒಳ್ಳೇ ಪಲ್ಯ. ಗಿಡಕ್ಕೆ ಬಲವುಳ್ಳ ನಾರು ಉಂಟು. ಹಸಿ ಕಾಯಿಯಿಂದ ಉಪ್ಪಿನಕಾಯಿ ಮಾಡುವದುಂಟು. ಬೇರಿನ ಅಂಟನ್ನು ಬಣ್ಣಕ್ಕೆ ಸೇರಿಸುತ್ತಾರೆ.

**Hibiscus esculentus,** *Lin.*—H. longifolius, *Roxb.*—Abelmoschus esculentus, *Mœnch.*—(Order Malvaceæ.)

*Tam.*, *Mal.* Veṇḍa. *Tel.* Beṇḍakāya. *Can.* Beṇḍekāyi-giḍa. *Tu.* Beṇḍekāyi. *Kon.* Bhēṇḍa. *Mah.* Kēla. *Hin.* Bhēṇḍi. *San.* Pāṭali, nētrāšcōtana.

## 367. ಬೆಂಡೇಕ, ಬಿಳಂದು, ನಂದಿ ಮರ (Benteak).

ತ., ತೆ., ಮ. ವೆಂತೇಕ್ಕು.

ಹುಟ್ಟು: ಘಟ್ಟಗಳು. ಪುಷ್ಪ: ವೈಶಾಖ, ಜ್ಯೇಷ್ಠ.

ಉಪಯೋಗ: ಸಾಧಾ: ಮರ ಕೆಲಸಕ್ಕೆ ಆಗುತ್ತದೆ.

**Lagerstrœmia lanceolata,** *Wall.*—L. microcarpa, *Wight.*—(Order Lythraceæ.)

*Tam.*, *Tel.*, *Mal.* Ventēkku. *Can.* Beṇḍēka, biḷandu, nandi-mara.

## 368. ಬೆಣ್ಣೆಗರುಗ ಗಿಡ.

ತೆ. ಗೂಬತಡ, ಮುತ್ತವಪುಲಗ. ಮ. ವಟ್ಟೂರಮ್. ಸಂ. ಸಮಂಗಾ.

ಹುಟ್ಟು: ನಟ್ಟು ಬೆಳಿಸುವರು. ಪುಷ್ಪ: ಶ್ರಾವಣದಿಂದ ಮಾರ್ಗಶಿರದ ವರೆಗೆ.

ಉಪಯೋಗ: ಸಾಧಾ: ಗಿಡಕ್ಕೆ ಒಳ್ಳೇ ನಾರು ಉಂಟು.

**Sida rhomboidea,** *Roxb.*—S. rhombifolia, *Lin.*—(Order Malvaceæ.)

*Tel.* Gūbataḍa, muttavapulaga. *Can.* Beṇṇegaruga-giḍa. *Mal.* Vaṭṭūram. *San.* Samangā.

## 369. ಬೆತ್ತ (Rattan Cane Palm).

ತ. ಪಿರಂಬು, ವಾನೀರಮ್. ತೆ. ಪೇಮು, ಪೇಪ, ವೇತಸಮು. ತು. ಸೂರೊಲ್, ತೂರೊಳು ಬೆತ್ತ. ಮ. ಚೂರಲ್ವಳ್ಳಿ, ವೇತ್ರಮ್, ನಿರ್ವಣಿ. ಕೊಂ. ಬೇತ. ಸಂ. ವೇತಸಮ್, ದೀರ್ಘವಲ್ಲಿ, ಸಮಕ್ಷಿಕಾ, ಲತಾವಂಶಃ.

ಉಪಯೋಗ: ಸಾಧಾ: ಚಿಗುರುಗಳು ಪಲ್ಯ. ಕಾಯಿ ಸಹ ತಿನ್ನುತ್ತಾರೆ. ಬೆತ್ತವು ಬೇರೆ ಬೇರೆ ಕೆಲಸಕ್ಕೆ ಬರುತ್ತದೆ.

**Calamus Rotang,** *Lin.*—(Order Palmeæ.)

*Tam.* Pirambu, vānīram. *Tel.* Pēmu, pēpa, vētasamu. *Can.* Betta. *Tu.* Sūrol, tūroḷu-betta. *Mal.* Čūralvaḷḷi, vētram, nirvaṅi. *Kon.* Bēta. *San.* Vētasam, dīrghavalli, samakshikā, latāva*m*ša*h*.

## 370. ಬೆಲಪತ್ರೆ, ಕುಂಬಳ, ಬಿಲ್ವ, ಬೆಲ್ಲವತ್ತ, ಬೆಳವಿನ ಮರ, ಬೇಲದ ಮರ (Bael Tree).

ತ. ವಿಲ್ವಮ್, ಅಲುವೀಕಮ್. ತೆ. ಬಿಲ್ವಮು, ಮಾರೇಡುಚೆಟ್ಟು, ಮಾಲೂರಮು, ಶ್ರೀಫಲಮು, ಶಾಂಡಿಲ್ಯಮು. ತು. ಬೆಲ್ಲಪತ್ರೆ. ಮ. ಕೂವಳಂ, ಮಾವಿಲಾವು, ವಿಲ್ವಂ. ಕೊಂ. ಬೆಲ್ಲಾಫಲ. ಹಿಂ. ಸಿರೀಫಲ್, ಬೇಲ್. ಮಹಾ. ಬೇಲಾ. ಸಂ. ಮಹಾಕಪಿತ್ಥ, ಅಡೋಲಮ್, ಗೋಹರೀತಕೀ, ನೀಲಮಲ್ಲಿಕಾ.

**ಹುಟ್ಟು**: ಪಶ್ಚಿಮ ಪೂರ್ವ ತೀರಗಳು, ಬಂಗಾಳ. **ಪುಷ್ಪ**: ವೈಶಾಖ.

**ಉಪಯೋಗ**: ಔಷ: ಜ್ವರ ಬಾರದೆ ಅಶಕ್ತಿಯೂ ಅದೀಪನವೂ ಮಾತ್ರ ಇರುವ ಅತಿಸಾರಕ್ಕೆ ಹಣ್ಣಿನ ಪಾನಕವು ಅಮೂಲ್ಯ ಔಷಧವಾಗಿರುತ್ತದೆ. ಕಾಯಿ ಒಣಗಿಸಿದರೆ, ಅದಕ್ಕೆ ಬಹಳ ಒಗರು ಗುಣವದೆ. ಹಣ್ಣು ತಿಂದರೆ, ಮಲಶೋಧನೆಯಾಗುವದು. ಬೇರಿನ ಸಿಪ್ಪೆಯ ಕಷಾಯ ಜ್ವರಕ್ಕೂ, ಮರದ ಚೆಕ್ಕೆಯದು ಗುಂಡಿಗೆಬಡಿಯೋಣಕ್ಕೂ, ಎಲೆಗಳದು ಶ್ವಾಸಕಾಸಕ್ಕೂ ಕೊಡುವದುಂಟು; ಎಲೆಗಳ ಒತ್ತಡ ಕಣ್ಣುರೋಗದಲ್ಲಿ ಉಪಯೋಗ. ಹೂವುಗಳ ದ್ರಾವಕ ವಿಷ ಹರ. ಸಾಧಾ: ಹಣ್ಣಿನ ಸಿಪ್ಪೆ ಬಣ್ಣಕ್ಕೆ ಆಗುತ್ತದೆ. ಬೀಜಗಳ ಎಣ್ಣೆ ಸುಣ್ಣಕ್ಕೆ ಸೇರಿಸುವದು ಒಳ್ಳೇದು.

**Ægle Marmelos,** *Corr.*—Cratæva M., *Lin.*—Feronia pellucida, *Roth.*—(Order Rutaceæ.)

*Tam.* Vilvam, aluvīkam. *Tel.* Bilvamu, mārēḍučeṭṭu, mālūramu, šriphalamu, šāṇḍilyamu. *Can.* Belapatre, kumbaḷa, bilva, bellavatta, beḷavina-mara, bēlada-mara. *Tu.* Bellapatre. *Mal.* Kūvaḷam, māvilāvu, vilvam. *Kon.* Bellāphala. *Hin.* Sīphal, bēl. *Mah.* Bēlā. *San.* Mahākapittha, āčōlam, gōharītakī, nīla-mallikā.

## 371. ಬೆಲ್ಲೋಟ್ಟಿ ಗಿಡ (Mussænda).

ತು. ಬೊಳ್ಳೆತಪ್ಪು. ಮ. ವೆಳ್ಳಿಲ. ಕೊಂ. ಬೆಲ್ಲೊಟಿ.

**ಹುಟ್ಟು**: ಮಲಬಾರತೀರ, ಘಟ್ಟ ಸೀಮೆಗಳು. **ಪುಷ್ಪ**: ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ**: ಔಷ: ಬೇರನ್ನು ನೀರಿನಲ್ಲಿ ಅರದು ಉರಿಗಣ್ಣಿಗೂ, ಎಲೆ ಮತ್ತು ಕಾಯಿೂ ರಸ ದೃಷ್ಟಿಮಾಂದ್ಯಕ್ಕೂ ಉಪಯೋಗಿಸುತ್ತಾರೆ. ಕಡ್ಡಿಗಳ ಕಷಾಯ ಮಕ್ಕಳ ಕೆಮ್ಮಿಗೆ ಆಗುತ್ತದೆ. ಸಾಧಾ: ಎಲೆಗಳನ್ನು ಬೇಯಿಸಿದರೆ ಸೀಗೆ.

**Mussænda frondosa,** *Lin.*—M. flavescens, *Ham.*—M. formosa, *Lin.*—M. zeylanica, *Burm.*—(Order Rubiaceæ.)

*Can.* Bellōṭṭi-giḍa. *Tu.* Boḷḷetappu. *Mal.* Veḷḷila. *Kon.* Belloṭi.

## 372. ಬೆಳ್ಳುಳ್ಳಿ (Garlic).

ತ., ಮ. ವೆಳ್ಳುಳ್ಳಿ. ತೆ. ತೆಲ್ಲಗಡ್ಡ, ವೆಲ್ಲುಳ್ಳಿ. ತು. ಬೊಳ್ಳುಳ್ಳಿ. ಕೊಂ. ಲಸುಣ. ಹಿಂ. ಲಸುನ್. ಸಂ. ಅರಿಷ್ಟಃ, ಗೃಂಜನ, ಲಶುನ, ಶ್ವೇತಕಂದ.

**ಉಪಯೋಗ**: ಔಷ: ಬಾಹ್ಯಚಿಕಿತ್ಸೆಯಾಗಿ ನಂಜು ಹರ. ನೀರಲ್ಲಿಯಾಗಲೀ ಹಾಲಿನಲ್ಲಿಯಾಗಲೀ ಕಾಸಿ ಕುಡಿದರೆ, ಜೀರ್ಣಕ್ಕೆ ಒಳ್ಳೇದು; ಶ್ವಾಸಕೋಶದ ಅಸ್ವಸ್ಥ, ಬಲಹೀನತೆ, ಜ್ವರ, ಮೂಲವ್ಯಾಧಿ, ಶ್ವಾಸಕಟ್ಟು, ಕಫೋದ್ರೇಕ, ಇವುಗಳಿಗೂ ಗುಣಕರ; ಸಣ್ಣ ಹುಳಗಳನ್ನು ಹೊರಡಿಸುವದು. ಸಾಧಾ: ಒಗ್ಗರಣೆ ಕೊಡಲಿಕ್ಕೆ ಉಪಯೋಗ.

**Allium sativum,** *Lin.*—(Order Liliaceæ.)

*Tam., Mal.* Veḷḷuḷḷi. *Tel.* Tellagaḍḍa, velluḷḷi. *Can.* Beḷḷuḷḷi. *Tu.* Boḷḷuḷḷi. *Kon.* Lasuṇa. *Hin.* Lasun. *San.* Arishṭbah, griṅjana, lašuna, švētakanda.

## 373. ಬೇಲದ ಮರ, ದಂತಶಠ, ಗ್ರಾಹ ಮರ (Elephant or Wood Apple).

ತ. ವಿಳಾಮರಮ್, ವಿಳಾಕಪಿತ್ತಮ್, ವೆಳ್ಳಿಲ್. ತೆ. ವೆಲಗ, ಕಪಿತ್ಥಮು. ಮ. ವಿಳಾವ್. ಕೊಂ. ಬೆಲಪತ್ರಿಫಲ. ಸಂ. ಕಪಿತ್ಥ, ಗೋಪಕರ್ಣ, ಫಲಸುಗಂಧಿ, ಸಂಗ್ರಾಹಿ.

**ಹುಟ್ಟು:** ಮಲಬಾರ ಚೋಳಮಂಡಲ ತೀರಗಳು. **ಪುಷ್ಪ:** ಫಾಲ್ಗುಣ.

**ಉಪಯೋಗ:** ಔಷ: ಅಂಟು ಜೇನಿನೊಡನೆ ಅತಿಸಾರಕ್ಕೂ ಅಜೀರ್ಣರೋಗಕ್ಕೂ ಆಗುತ್ತದೆ. ಎಲೆಗಳನ್ನು ಮಕ್ಕಳ ಕರುಳುಗಳ ಅಕ್ರಮಕ್ಕೆ ದೀಪನವಾಗಿ ಕೊಡುವರು. ಸಾಧಾ: ಕಾಯಿ ತಿನ್ನುವರು, ಪಾನಕ ಮಾಡುವರು. ಕಾಯಿಯ ಬುರುಡೆ ಮಾಡುತ್ತಾರೆ. ಮರ ಕೆಲಸಕ್ಕೆ ಒಳ್ಳೇದು. ಅಂಟು ಬಣ್ಣಕ್ಕೂ ಸುಣ್ಣಕ್ಕೂ ಮಸಿಗೂ ಥಳಥಳಕ್ಕೂ ಆಗುತ್ತದೆ.

**Feronia Elephantum,** *Corr.*—Cratæva Vallanga, *Kœn.*—(Order Rutaceæ.)

*Tam.* Viḷāmaram, viḷākapittam, veḷḷil. *Tel.* Velaga, kapitthamu. *Can.* Bēlada-mara, dantašaṭha, grāha-mara. *Mal.* Viḷāvu. *Kon.* Belapatriphala. *San.* Kapittha, gōpakarṇa, phalasugandhi, saṅgrāhi.

## 374. (ಒಳ್ಳೇ) ಬೇವಿನ ಮರ (Neem or Margosa Tree).

ತ. ವೇಂಬು, ಅರುಳುರುದಿ, ಚಂಗುಮರು. ತೆ. ವೇಪ, ನಿಂಬಮು. ತು. ಕೈಬೇವು. ಮ. ನಿಂಬಮ್, ವೇಪ್ಪು, ರಾಜವೇಪ್ಪು. ಕೊಂ. ಬೇವಾರೂಕು. ಹಿಂ. ನೀಮ್. ಸಂ. ರವಿಪ್ರಿಯ, ವೇಂಬಕ, ವ್ರಣಶೋಧಕರಿ.

**ಹುಟ್ಟು:** ಮಲಬಾರತೀರ, ಬಂಗಾಳ. **ಪುಷ್ಪ:** ಚೈತ್ರದಿಂದ ಆಷಾಢದ ವರೆಗೆ.

**ಉಪಯೋಗ:** ಔಷ: ಚೆಕ್ಕೆಯ ಕಷಾಯ ಜ್ವರಕ್ಕೂ ವಾತಕ್ಕೂ ಬಾಣಂತಿಗೂ ಕುಷ್ಠರೋಗಕ್ಕೂ ಒಳ್ಳೇದು. ಎಲೆಗಳ ಲೇಪ ಇಲ್ಲವೆ ಒತ್ತಡ ಕಜ್ಜಿಗೂ ಇತರ ನಂಜಿಗೂ ಬಹಳ ಫಲಕರ. ಬೀಜಗಳ ಎಣ್ಣೆ ಕುಷ್ಠಕ್ಕೂ ವಾತಕ್ಕೂ ಪಕ್ಷವಾತಕ್ಕೂ ಕಠಿಣ ವ್ರಣಗಳಿಗೂ ತಲೆನೋವಿಗೂ ಹಚ್ಚುವರು. ಒಣಗಿದ ಎಲೆಗಳನ್ನು ಪುಡಿ ಮಾಡಿ ಅನುಲೇಪಕ್ಕೆ ಸೇರಿಸಿ, ನಂಜಿನ ಬಾವಿಗೆ ಕಟ್ಟಬಹುದು. ನಂಜಿನ ಮರದ ಅಂಟು ಉತ್ತೇಜಕ ಗುಣದ್ದು. ಸಾಧಾ: ಎಣ್ಣೆ ಬಣ್ಣಕ್ಕೂ ದೀಪಕ್ಕೂ ಉಪಯೋಗ. ಸುಲಿದ ಬೀಜದಿಂದ ನುಸಿ ಮುಂತಾದ ಹುಳಗಳ ನಾಶನ. ಅದನ್ನು ಕುಟ್ಟಿ ನೀರಲ್ಲಿ ಹಾಕಿ ಕೂದಲುಗಳನ್ನು ತೊಳೆಯುತ್ತಾರೆ. ಮರ ಕೆಲಸಕ್ಕೆ ಬರುತ್ತದೆ.

**Melia Azadirachta,** *Lin.*—M. indica, *Brandis.*—Azadirachta indica, *Juss.*—A. fraxinifolia, *Mœnch.*—(Order Meliaceæ.)

*Tam.* Vēmbu, aruḷurudi, čaṅgumaru. *Tel.* Vēpa, nimbamu. *Can.* (oḷḷē) Bēvina-mara. *Tu.* Keibēvu. *Mal.* Nimbam, vēppu, rājavēppu. *Kon.* Bēvārūku. *Hin.* Nīm. *San.* Ravipriya, vēmbaka, vraṇašōdhakari.

### 375. ಬೇಳು, ಆಕಾಶಬಳ್ಳಿ.

ತ. ಕೊತ್ತಾನ್, ಇಂದಿರವಲ್ಲಿ, ನಂದೈ. ತೆ. ಪಾಚಿತೀಗೆ. ತು. ಮುದೆಲ್‌ದಾಂತಿ ಬೂರು. ಮ. ಆಕಾಶವಳ್ಳಿ.

**ಹುಟ್ಟು:** ಮರಗಳಲ್ಲಿ. **ಪುಷ್ಪ:** ಕಾರ್ತಿಕ, ಮಾರ್ಗಶಿರ.

**ಉಪಯೋಗ:** ಔಷ: ಒಣಗಿಸಿ ಪುಡಿ ಮಾಡಿದ ಈ ಬಳ್ಳಿ ಒಣಶುಂಠಿ ಬೆಣ್ಣೇ ಸಮೇತ ವ್ರಣಗಳನ್ನು ಶುದ್ಧ ಮಾಡಲಿಕ್ಕಾಗುತ್ತದೆ. ಅದು ಎಳ್ಳೆಣ್ಣೆಯ ಸಂಗಡ ಕೇಶ ವೃದ್ಧಿಗೆ ಲೇಪಿಸುವರು. ಅದರ ರಸವನ್ನು ಸಕ್ಕರೇ ಸಂಗಡ ಉರಿಗಣ್ಣಿಗೆ ಪ್ರಯೋಗಿಸುವರು. ಸಾಧಾ: ಮಜ್ಜಿಗೆಗೆ ಹಾಕುತ್ತಾರೆ.

**Cassytha filiformis,** *Lin.*—(Order Laurineæ.)

*Tam.* Kottān, indiravalli, nandai. *Tel.* Pācitīge. *Can.* Bēḷu, ākāša-baḷḷi. *Tu.* Mudeluḏānti-būru. *Mal.* Ākāšavaḷḷi.

### 376. ಬೈನಿ, ಬೈನೆ, ಬಗನಿ, ಪೈನೆ ಮರ (Bastard Sago).

ತ. ಕೂಂದರ್ಪನೈ, ಆದಮ್, ತಾಲಮ್. ತೆ. ಚಿರುಗು, ಜಿರುಗು. ತು. ಈಂದ್, ಕಂಣಿದ ಮರ. ಮ. ಈರಂಪನ. ಕೊಂ. ಇಂದಾರೂಕು, ಬೈನಿರೂಕು. ಮಹಾ. ಬೆರ್ಲಿ. ಹಿಂ. ಈಂದ್.

**ಹುಟ್ಟು:** ಪಶ್ಚಿಮ ಪೂರ್ವ ತೀರಗಳು. **ಪುಷ್ಪ:** ಮಾರ್ಗಶಿರದಿಂದ ಫಾಲ್ಗುಣದ ವರೆಗೆ.

**ಉಪಯೋಗ:** ಸಾಧಾ: ಕಳ್ಳು ತೆಗಿಯುತ್ತಾರೆ. ಮಡಲುಗಳು ಆನೆಗಳಿಗೆ ಆಹಾರ. ಮರದ ಹಿಟ್ಟು ಒಳ್ಳೇ ಭೋಜ್ಯ. ಎಲೆಗಳ ಕಡ್ಡಿಗಳು ಬರೆಯುವದಕ್ಕೆ ಉಪಯೋಗ. ಒಳ್ಳೇ ನಾರು ಉಂಟು; ಮರವನ್ನು ಸೀಳಿ ಕೊರದು ದಂಬೆಗಳನ್ನು ಮಾಡುವರು.

**Caryota urens,** *Lin.*—(Order Palmeæ.)

*Tam.* Kūndarpanai, ādam, tālam. *Tel.* Čirugu, jirugu. *Can.* Baini, baine, bagani, paine-mara. *Tu.* Īndu, kaṇṇida-mara. *Mal.* Īrampana. *Kon.* Indārūku, bainirūku. *Mah.* Berli. *Hin.* Īnd.

### 377. ಬೈರಿ, ಜಗುರಿ, ಅರಂಜಿ ಮರ.

ತ. ನೆಟ್ಟಾವಿಲ್ಮರಮ್. ಮ. ಅರಂಜಿಲಿ. ಸಂ. ವಲ್ಕಲವೃಕ್ಷ.

**ಹುಟ್ಟು:** ಮಲಬಾರತೀರ, ಕೊಡಗು. **ಪುಷ್ಪ:** ಆಶ್ವೀಜ.

**ಉಪಯೋಗ:** ಔಷ: ಮರದ ಪುಡಿಯನ್ನು ರಕ್ತಾತಿಸಾರದಲ್ಲಿ ಅಂಬಲಿ ಮಾಡಿ ಕೊಡುವರು. ಸಾಧಾ: ಮರ ಕೆಲಸಕ್ಕೆ ಬರುತ್ತದೆ. ಚೆಕ್ಕೆಯ ಚೀಲ ಮಾಡಿ ಬಳಿಸಬಹುದು. ಅದಕ್ಕೆ ಒಳ್ಳೇ ನಾರು ಉಂಟು.

**Antiaris toxicaria,** *Leschen.*—A. saccidora, *Dalz.*—(Order Urticaceæ.)

*Tam.* Neṭṭāvilmaram. *Can.* Bairi, jaguri, arañji-mara. *Mal.* Aranjili. *San.* Valkalavṛiksha.

### 378. ಬೊಂಡುಳ, ಬುಡ್ಡೆಹಣ್ಣು ಗಿಡ (Cape Gooseberry, Brazil Cherry).

ತು. ಬೊಂಡೊಲಿ. ಮ. ನಿಟ್ಟಾಣಿಡುಣ, ಮೊಟ್ಟಾಂಪುಳಿ. ಕೊಂ. ಚಿರಿಪುಟ್ಲ.

**ಉಪಯೋಗ:** ಔಷ: ಎಲೆಗಳ ರಸ ಮಕ್ಕಳ ಹೊಟ್ಟೇ ಹುಳಕ್ಕೂ ಹೊಟ್ಟೇ ಅಕ್ರಮಕ್ಕೂ ಉಪಯೋಗ. ಸಾಧಾ: ಕಾಯಿ ತಿನ್ನಬಹುದು.

**Physalis peruviana,** *Lin.*—Ph. indica, *Lam.*—Ph. edulis, *Sims.*—Ph. pubescens, *Don.*—(Order Solanaceæ.)

*Can.* Bonḍuḷa, buḍḍe-haṇṇu-giḍa. *Tu.* Bonḍoli. *Mal.* Niṭṭāṅiḍuṅa, moṭṭām-puḷi. *Kon.* Čiripuṭla.

### 379. ಬೊಗರಿ, ಬದರಿ, ಬೋರೇ, ಬಾರೇ, ಎಗಚಿ, ಇಲಿಚಿ, ಎಲಚಿ, ಕರ್ಕಂಧು ಮರ (Jujube or Bhere Fruit Tree).

ತ. ಇಲಂದ್ಯೆ, ಕುಲ್ಲರಿ, ವೇತಿರಮ್. ತೆ. ರೇಗುಚೆಟ್ಟು, ಗಂಗರೇಗುಚೆಟ್ಟು, ಬದರಮು. ತ[illegible] ೩. ಮ. ಇಲಂತ, ಕೋಲಂ, ಮಲಂತುಡರ್, ಪರಿಂತುಡರ್, ಬದರಿ. ಕೊಂ. ಬೋರಿರೂಕ[illegible] ಮಧು, ಬದರಿ. [illegible]ಆಆ).

**ಹುಟ್ಟು:** ದಕ್ಷಿಣ ಹಿಂದುಸ್ಥಾನ, ಬಂಗಾಳ. **ಪುಷ್ಪ:** ಶ್ರಾ[illegible]ಕೊಂ. ಮ[illegible]ವ ಆಶ್ವೀಜದ ವರೆಗೆ.

**ಉಪಯೋಗ:** ಔಷ: ಚಿಕ್ಕ ಮಕ್ಕಳ ಕ್ರಿಮಿರೋಗಕ್ಕೆ ಕೊಡುತ್ತಾರೆ; ಅದಕ್ಕೆ ಒಗರು ಗುಣ. ಎಲೆಗಳನ್ನು ಬೇಯಿಸಿ ನಾಭಿಗೆ ಪ್ಲಾಸ್ತ್ರಿಯಾಗಿಟ್ಟರೆ, ಮೂತ್ರಸಿಕ್ಕು ಗುಣ. ಬೇರಿನ ರಸ ಹರಳೆಣ್ಣೆಯ ಸಂಗಡ ಹೊಟ್ಟೆಯ ದೋಷಕ್ಕೆ ಕೊಡುತ್ತಾರೆ. ಸಾಧಾ: ಹಣ್ಣು ತಿನ್ನಬಹುದು; ಮರದಿಂದ ಹಾವುಗೆ ಮಾಡುವರು. ಎಲೆಗಳು ನಯ ಮಾಡಲಿಕ್ಕಾಗುತ್ತವೆ. ಮರಕ್ಕೆ ಹ[illegible]ನು ಉಂಟು.

**Zizyphus Jujuba,** *Lam.*—Z. Mauritiana, *Wall.*—Z. Sororia, *Schult.*—Rhamnus Jujuba, *Lin.*—(Order Rhamneæ.)

*Tam.* Ilandai, kullari, vētiram. *Tel.* Rēgučeṭṭu, gaṅgarēgučeṭṭu, badaramu. *Can.* Bogari, badari, bōrē, bārē, egači, iliči, elači, karkandhu-mara. *Tu.* Bogori. *Mal.* Ilanta, kōlam, malantuḍar, parintuḍar, badari. *Kon.* Bōrirūku. *San.* Karkamadhu, badari.

### 380. ಬೋವು, ಬೋಗಿ, ಕಿರಲ್‌ಬೋಗಿ.

ತ. ಕರಂ, ಕೊಂಗು. ತು. ಬೋವು. ಮ. ಇರುಬೋಗಂ.

**ಹುಟ್ಟು:** ದಕ್ಷಿಣ ಕನ್ನಡ.

### 465. ಸನಾಡಿಕಾ, ಬಳೆವಡಕಿ ಗಿಡ (Spreading Hogweed).

ತ. ಮೂಕ್ಕಿರಟ್ಟೈ, ಕಡಿಯಿರತ್ತಮ್. ತೆ. ಅಟತಮಾಮಿಡಿ. ತು. ನೆಲಬಸಲೆ. ಮ. ತಮಿೞಾಮ, ತಲುತಾಮ.

**ಹುಟ್ಟು**: ಸಾಧಾರಣ. **ಪುಷ್ಪ**: ಇಡೀ ವರುಷ.

**ಉಪಯೋಗ**: ಔಷ: ಬೇರಿನ ಹುಡಿ ಮಲಭೇದಿ; ಅದರ ಕಷಾಯ ಕ್ರಿಮಿರೋಗಕ್ಕೆ ಕೊಡುತ್ತಾರೆ. ಪುಡಿಯಾಗಲಿ ಕಷಾಯವಾಗಲಿ ಉಬ್ಬಸಕ್ಕೆ ಒಳ್ಳೇದು; ಹೆಚ್ಚು ತಕ್ಕೊಂಡರೆ, ವಾಂತಿಯಾಗುವದು. ಸಾಧಾ: ಚಿಗುರಿನ ತಂಬಳಿ ಮಾಡುತ್ತಾರೆ.

**Bœrhaavia repens, var. diffusa,** *Lin.*—(Order Nyctagineæ.)

*Tam.* Mūkkiraṭṭai, kaḍiyirattam. *Tel.* Aṭatamāmiḍi. *Can.* Sanāḍikā, baḷe-vaḍaki-giḍa. *Tu.* Nelabasale. *Mal.* Tamiḻāma, taḷutāma.

### 466. ಸಪ್ಪಂಗ, ಪೊಪ್ಪಿಳಿ ಮರ.

ತ. ನುಣಾಮರಮ್. ತೆ. ಮೂಲುಗು. ತು. ಕಕ್ಕೆಕಾಯಿ. ಮ. ನೋಣಾಮರಮ್. ಕೊಂ. ಸಪ್ಪಂಗು. ಸಂ. ದಾರುಹರಿದ್ರಾ, ದಾರ್ವೀ, ಪೀತದಾರು, ಅಲಕ್ಷುಕಾ.

**ಹುಟ್ಟು**: ಮಲಬಾರತೀರ. **ಪುಷ್ಪ**: ಫಾಲ್ಗುಣ.

**ಉಪಯೋಗ**: ಔಷ: ಅತಿಸಾರಕ್ಕೂ ಕಣ್ಣುರೋಗಕ್ಕೂ ತಲೆನೋವಿಗೂ ಇದರ ಕಷಾಯ ಒಳಗೂ ಹೊರಗೂ ಉಪಯೋಗವಾಗುತ್ತದೆ. ಸಾಧಾ: ಹಳದಿ ಮತ್ತು ಕೆಂಪು ಬಣ್ಣಕ್ಕೆ ಆಗುತ್ತದೆ.

**Morinda umbellata,** *Lin.*—M. Padavara, *Juss.*—M. scandens, *Roxb.*—(Order Rubiaceæ.)

*Tam.* Nuṇāmaram. *Tel.* Mūlugu. *Can.* Sappaṅga, poppiḷi-mara. *Tu.* Kakkekāyi. *Mal.* Nōṇāmaram. *Kon.* Sappaṅgu. *San.* Dāruharidrā, dārvī, pītadāru, alakshukā.

### 467. ಸಬ್ಬಸಿಗೆ, ಸಲುಫ ಗಿಡ.

ತ. ಶದಕುಪ್ಪಿ. ತೆ. ಶತಕುಪಿ. ಮ. ಚತುಕುಪ್ಪ. ಹಿಂ. ಸುವಾ. ಸಂ. ಶತಪುಷ್ಪಿ, ಮಧುರಾ, ಚಾಮರಪುಷ್ಪಿಕಾ, ಮಿಶ್ರೇಯ.

**ಹುಟ್ಟು**: ನಟ್ಟು ಬೆಳಿಸುವದು. **ಪುಷ್ಪ**: ಮಾಘದಿಂದ ಫಾಲ್ಗುಣದ ವರೆಗೆ.

**ಉಪಯೋಗ**: ಔಷ: ಕಟ್ಟಿದ ಬೇರು ಮತ್ತು ಬೀಜಗಳನ್ನು ಬೇಯಿಸಿ, ವಾತಕ್ಕೂ ಸಂದುಬಾವಿಗೂ ಹಚ್ಚುವರು. ಬೀಜದ ಕಷಾಯ ಕಿಬ್ಬೊಟ್ಟೆಯ ನೋವಿಗೂ ಮಕ್ಕಳ ಶೂಲಕ್ಕೂ ಆಗುತ್ತದೆ. ಎಲೆಗೆ ಎಣ್ಣೆ ಹಚ್ಚಿ ಬಾಡಿಸಿ ಕುರುವಿನ ಕೀವು ಹೋಗುವ ಬಗ್ಯೆ ಕಟ್ಟುವರು. ಸಾಧಾ: ಪಲ್ಯ; ಮತ್ತು ಸಂಬಾರಜೀನಸು.

**Peucedanum graveolens,** *Benth.*—Anethum Sowa, *Roxb.*—(Order Umbelliferæ.)

*Tam.* Šadakuppi. *Tel.* Šatakupi. *Can.* Sabbasige, salupha-giḍa. *Mal.* Čatu-kuppa. *Hin.* Suvā. *San.* Šatapushpi, madhurā, čāmarapushpikā, mišrēya.

## 468. ಸಮುದ್ರಪಾಲ, ಸಮುದ್ರಸೋಗೆ, ಸಮುದ್ರಹಾಲೆ, ಸಮುದ್ರಬಳ್ಳಿ (Elephant Creeper).

ತ. ಪೇಯ್ಮುಚುಟ್ಟೈ, ಸಮುದ್ರಪ್ಪಾಲೈ, ಕಡರ್ಪಾಲೈ, ಚಮುತ್ತಿರಚೋಗಿ. ತೆ. ಸಮುದ್ರಪಾಲ. ಮ. ಸಮುದ್ರಜೋಗಮ್.

ಹುಟ್ಟು: ಮಲಬಾರತೀರ. ಪುಷ್ಪ: ಆಷಾಢ, ಶ್ರಾವಣ.

ಉಪಯೋಗ: ಔಷ: ನಂಜಿಗೂ ಹುಣ್ಣು ಹಣ್ಣಾಗುವದಕ್ಕೂ ಉಪಯೋಗ.

**Argyreia speciosa,** *Sweet.*—Convolvulus nervosus, *Burm.*—C. speciosus, *Lin. f.*—Ipomæa speciosa, *Pers.*—Lettsomnia nervosa, *Roxb.*—(Order Convolvulaceæ.)

*Tam.* Pēymučuṭṭai, samudrappālai, kaḍarpālai, čamuttiračōgi. *Tel.* Samudrapāla. *Can.* Samudrapāla, samudrasōge, samudrahāle, samudra-baḷḷi. *Mal.* Samudrajōgam.

## 469. ಸಮುದ್ರಫಲ.

ತ. ಸಮುದ್ರಪುಲ್ಲಾನಿ. ಮ. ಸಮುದ್ರಪೂ, ಸಂಸ್ಕರವಡಿ. ಕೊಂ. ಸಮುದ್ರಫಳ.

ಹುಟ್ಟು: ಮಲಬಾರ ಚೋಳಮಂಡಲ ತೀರಗಳು. ಪುಷ್ಪ: ವೈಶಾಖ.

ಉಪಯೋಗ: ಔಷ: ಬೇರು ತಂಪು ಗುಣ, ಮಲಶೋಧನೆ ಮಾಡುತ್ತದೆ. ಚಿಕ್ಕೆ ಜ್ವರಕ್ಕೆ ಆಗುತ್ತದೆ. ಕಾಯಿಯನ್ನು ಪುಡಿ ಮಾಡಿ ಬೇರೆ ಔಷಧಗಳ ಸಮೇತ ಸ್ವರಭಂಗಕ್ಕೂ ನಂಜಿಗೂ ಉಪಯೋಗಿಸಬಹುದು. ಮೂಗಿನಿಂದ ನೀರು ಇಳಿಯುವ ಹಾಗೆ ಇದರ ನಸ್ಯ ಹಾಕುವರು. ಬೀಜವನ್ನು ಪುಡಿ ಮಾಡಿ ಮೂಲವ್ಯಾಧಿಗೂ ಪಿತ್ತ ದೋಷಕ್ಕೂ ಸೇವಿಸುವರು. ಸಾಧಾ: ಸ್ವಚ್ಛ ಮಾಡುವ ಗುಣ; ಬೀಜಗಳನ್ನು ಮೀನುಗಳಿಗೆ ಮೋಹನವಾಗಿ ಹಾಕುತ್ತಾರೆ.

**Barringtonia recemosa,** *Blum.*—Eugenia racem., *Lin.*—Stravadia alba, *Pers.*—(Order Myrtaceæ.)

*Tam.* Samudrapullāni. *Can.* Samudraphala. *Mal.* Samudrapū, saṁskaravaḍi. *Kon.* Samudraphaḷa.

## 470. ಸಹದೇವಿ, ಕರೇಹಿಂಡಿ, ಗಾಯದೊಪ್ಪಲು (Ash-coloured Fleabane).

ತ. ನೈಚಟ್ಟಿ. ಮ. ಪಿರಿಞ್ಞಾ, ಪೂವಾಂಕುರುಂತಲ. ಕೊಂ. ಸಾಯಿದೇವಿ. ಸಂ. ಅರ್ಧಪ್ರಸಾದನ.

ಹುಟ್ಟು: ಪಶ್ಚಿಮ ಪೂರ್ವ ತೀರಗಳು, ಬಂಗಾಳ. ಪುಷ್ಪ: ಪುಷ್ಯದಿಂದ ಫಾಲ್ಗುಣದ ವರೆಗೆ.

ಉಪಯೋಗ: ಔಷ: ಕಣ್ಣುನೋವಿಗೆ ರಸದಿಂದ ಅಂಜನ ಮಾಡುತ್ತಾರೆ. ಜ್ವರದವರಿಗೆ ಬೆವರು ಬರುವ ಹಾಗೆ ಸಹಮೂಲದ ಕಷಾಯವನ್ನು ಕುಡಿಸುವರು.

**Vernonia cinerea,** *Less.*—Chrysocoma purpurea, *Forst.*—Ch. violacea, *Schumach.*—Conyza mollis, *Willd.*—C. cinerea, *Lin.*—(Order Compositæ.)

*Tam.* Naičiṭṭe. *Can.* Sahadēvi, karēbiṇḍi, gāyadoppalu. *Mal.* Piriñā, pūvāṅkuruntala. *Kon.* Sāyidēvi. *San.* Ardhaprasādana.

## 471. ಸಾಲಾಮಿಸ್ರಿ (Salep).

ತ., ತೆ. ಸಾಲಾಮಿಸ್ರಿ. ಮ. ಸಲಾಮಿಸ್ರಿ. ಕೊಂ. ಸಾಲಾಮಿಶ್ರಿ. ಹಿಂ. ಸಾಲೇಬ್‌ಮಿಸ್ರಿ.

ಉಪಯೋಗ: ಸಾಧಾ: ಹೆಚ್ಚಾಗಿ ನೀಲಗಿರಿಗಳಲ್ಲಿ ಸಿಕ್ಕುತ್ತದೆ. ಗಡ್ಡೆ ಪಥ್ಯಕರ ಮತ್ತು ಪುಷ್ಟಿಕರ ಆಹಾರ.

**Orchis latifolia,** *Lin.*—(Order Orchideæ.)

*Tam.*, *Tel.*, *Can.* Sālāmisri. *Mal.* Salāmisri. *Kon.* Sālāmišri. *Hin.* Sālēbmisri.

## 472. ಸಾಸಿವೆ, ಸಾಸುವೆ, ಸಾಸಿವೆ ಗಿಡ (Indian Mustard).

ತ. ಕಡುಗು. ತೆ. ಆವಾಲು. ತು. ದಾಸೆಮಿ. ಮ. ಕಡುಕ. ಕೊಂ. ಸಾಸಮ. ಹಿಂ. ರಾಯಾಂ. ಸಂ. ಸರ್ಷಪಃ, ರಕ್ತಜಾಜಿ, ದುಂದುಭ.

ಉಪಯೋಗ: ಔಷ: ಬೀಜದ ಹಿಟ್ಟು ಬ್ಲಿಸ್ತ್ರಿ ಎಂಬ ಚರ್ಮಸ್ಫೋಟಕವಾಗಿ ಉಪಯೋಗ. ತಣಸು ಹೋಗುವದಕ್ಕೆ ಅನುಲೇಪಿಸುವರು. ಸಾಸಿವೆಯಿಂದ ಒಳ್ಳೇ ಎಣ್ಣೆ ಆಗುತ್ತದೆ; ಇದನ್ನು ಬೇರೆ ಎಣ್ಣೆಯ ಸಂಗಡ ವಾತದ ನೋವಿಗೆ ಹಚ್ಚುವರು. ಸಾಧಾ: ಸಂಬಾರಜೀನಸು.

**Brassica juncea,** *Hook. f. and T.*—Sinapis juncea, *Lin.*—S. integrifolia, *Willd.*—(Order Cruciferæ.)

*Tam.* Kaḍugu. *Tel.* Āvālu. *Can.* Sāsive, sāsuve, sāsime-giḍa. *Tu.* Dāsemi. *Mal.* Kaḍuka. *Kon.* Sāsama. *Hin.* Rāyā*n*. *San.* Sarshapa*h*, raktajāji, dundubha.

## 473. ಸೀಗೆಣಸು, ಗೆಣಸುಗಡ್ಡೆ (Sweet Potato).

ತ. ಚರ್ಕರೈವಳ್ಳಿ, ವಳ್ಳಿಕಿಲಙ್ಗು. ತೆ. ಗೆನುಸು, ಚಿಲಗಡಮು, ಮೋಹನಮು. ತು. ಕೆರೆಂಗ್. ಮ. ಕಿಲಂಙ, ಚೀನಿಕ್ಕಿಲಂಙ, ಮಧುರಕ್ಕಿಲಂಙ, ವಳ್ಳಿಕ್ಕಿಲಂಙ. ಕೊಂ. ಚೀನಿಕಣಂಗ.

ಉಪಯೋಗ: ಸಾಧಾ: ಗಡ್ಡೆ ಒಳ್ಳೇ ಪಲ್ಯವಾಗಿದೆ; ಬೇಯಿಸಿ ತಿನ್ನುವರು.

**Ipomæa Batatas,** *Lamk.*—Batatas edulis, *Chois.*—Convolvulus Batatas, *Lin.*—C. edulis, *Thunb.*—C. esculentus, *Salisb.*—(Order Convolvulaceæ.)

*Tam.* Čarkaraivaḷḷi, vaḷḷi-kiḷaṅgu. *Tel.* Genusu, čilagaḍamu, mōhanamu. *Can.* Sīgeṇasu, geṇasu-gaḍḍe. *Tu.* Kereṅgu. *Mal.* Kiḷaṅṅa, čīnikkiḷaṅṅa, madhurakkiḷaṅṅa, vaḷḷikkiḷaṅṅa. *Kon.* Čīnikaṇaṅga.

## 474. ಸೀತಾಫಲ, ಅಮೃತಫಲ, ದುರಂಜಿ ಮರ (Custard Apple Tree or Sweet Sop).

ತ. ಆತ್ತಾಮರಮ್. ತೆ. ಸೀತಾಫಲಮು, ಗಂಡಗಾತ್ರಮು. ತು. ಅಮೃತಕಾಯಿ (ಅಮುಚಿಕಾಯಿ) ಮರ. ಮ. ಆತ್ತಚಕ್ಕ, ಚೀತಾರ್‌ಮರಮ್. ಹಿಂ. ಆತ. ಕೊಂ. ಅಂದಣಿರೂಕು. ಸಂ. ಶುಭಾ, ಸುದಾ.

**ಉಪಯೋಗ:** ಔಷ: ಎಲೆಗಳನ್ನು ಉಪ್ಪಿನ ಸಂಗಡ ಅರದು ಲೇಪಿಸಿದರೆ, ಕೆಟ್ಟ ಹುಣ್ಣುಗಳು ಹಣ್ಣಾಗುತ್ತವೆ. ಕಾಯಿ ಶುಂಠೀ ಸಮೇತ ಶಿರೋಭ್ರಮಣಕ್ಕೆ ಕೊಡುವರು. ಸಾಧಾ: ಹಣ್ಣು ತಿನ್ನಲಿಕ್ಕೆ ಒಳ್ಳೇದು; ಎಲೆಗಳಿಂದ ತಗಣಿ ಮುಂತಾದ ಹುಳಗಳ ನಾಶನ.

ಮುಳ್ಳುರಾಮಫಲ (Sour Sop, Anona muricata, *Lin.*). ಇದರ ಹಣ್ಣು ಬಹು ರುಚಿಯುಳ್ಳದ್ದು. ಅದನ್ನು ಕನ್ನಡ ಜಿಲ್ಲೆಯಲ್ಲಿ ಅಲ್ಪಸ್ವಲ್ಪವಾಗಿ ಬೆಳಿಸುತ್ತಾರೆ.

**Anona squamosa,** *Lin.*—(Order Anonaceæ.)

*Tam.* Āttāmaram. *Tel.* Sītāphalamu, gaṇḍagātramu. *Can.* Sītāphala, amṛitaphala, durañji-mara. *Tu.* Amṛitakāyi (amučikāyi)-mara. *Mal.* Ātta-čakka, čītārmaram. *Hin.* Āta. *Kon.* Andaṇi-rūku. *San.* Śubhā, sudā.

## 475. ಸೀತಾಶ್ರು (Sita's Tears, Bladderwort).

ಕೊಂ., ಮಹಾ. ಸೀತಾಶ್ರು.

**ಹುಟ್ಟು:** ಗದ್ದೆಗಳಲ್ಲಿ ಭತ್ತದ ದಂಟುಗಳಲ್ಲಿ ಸುತ್ತುವದು.

ಪುರಾಣಕಥೆ: ರಾಮನು ಸೀತೆಯನ್ನು ಲಂಕಾ ದ್ವೀಪದಿಂದ ತಿರುಗಿ ಮನೆಗೆ ಕರಕೊಂಡು ಬರುವಾಗ ಸೀತೆಯು ಸಂತೋಷದಿಂದ ಕಣ್ಣೀರು ಸುರಿಸಿದಳು. ಈ ಕಣ್ಣೀರು ಗುಡ್ಡಗಳ ಮೇಲೆ ಬೀಳಲಾಗಿ ಈ ಸುಂದರವಾದ ಹೂವು ಹುಟ್ಟಿತಂತೆ.

**Utricularia reticulata,** *Smith.*—U. uliginosa, *Wight.*—U. graminifolia, *Grah.*—U. oryzetorum, *Miq.*—(Order Lentibularieæ.)

*Can., Kon., Mah.* Sītāśru.

## 476. ಸುಗಂಧಮುಸ್ತೆ, ಗಣಿಗಲಮುಸ್ತೆ, ಜಟಾಮಾಂಸಿ (Indian Spikenard).

ತ. ನಮುತ್ತಮ್. ತೆ., ತು. ಜಟಾಮಾಂಸಿ. ಮ. ಮಾಂಚಿ, ಜಟಾಮಾಂಸಿ. ಹಿಂ. ಬಾಲ್ಛಾರ್. ಸಂ. ಜಟಾ, ನಳಿಕಾ, ಅಲೋಮಜಾ, ತಾಪಸಿ.

**ಉಪಯೋಗ:** ಔಷ: ಈ ಹೆಸರಿನ ಬೇರುಗಳು ಅಂಗಡಿಗಳಲ್ಲಿ ಸಿಕ್ಕುತ್ತವೆ. ಆದರೂ ಹಳೆದಾಗಿ ಹುಳ ತಿಂದು ನಿಷ್ಪ್ರಯೋಜನವಾದ ಬೇರುಗಳನ್ನು ಸಹ ಮಾರುವದರಿಂದ, ಮದ್ದಿಗಾಗಿ ಹೊಸತಾದ ಒಳ್ಳೇ ಜಾತಿಯವುಗಳನ್ನು ಸಂಪಾದಿಸಬೇಕು. ಜಟಾಮಾಂಸಿಯು ಶಳವುನಿವಾರಕ ಔಷಧವೆಂತ ಕೀರ್ತಿ ಹೊಂದಿರುತ್ತದೆ. ಅದಕ್ಕೆ ಜಜ್ಜಿದ ಬೇರಿನಿಂದ ಮಾಡಿದ ಕಲ್ಕನೀರನ್ನು ದಿನಕ್ಕೆ ಎರಡು ಮೂರು ಸಾರಿ ತಕ್ಕೊಳ್ಳುವದು.

ಇದರ ಧೃತಿ ಗರ್ಭಾಶಯದಾಹ, ಗುಂಡಿಗೆಬಡಿಯೋಣ, ಅಂತರಾಯಾಮವಾತ, ವಾಯುಪದ್ರವ ಮುಂತಾದ್ದಕ್ಕೆ ಆಗುತ್ತದೆ.

**Nardostachys Jatamansi,** *Dec.*—Patrinia Jat., *Don.*—Valeriana Jatam., *Wall.*—(Order Valerianeæ.)

*Tam.* Namattam. *Tel., Tu.* Jaṭāmāṁsi. *Can.* Sugandhamuste, gaṇigalamuste, jaṭāmāṁsi. *Mal.* Mānči, jaṭāmāṁsi. *Hin.* Bālčār. *San.* Jaṭā, naḷikā, alōmajā, tāpasi.

## 477. ಸುಗಂಧಿಬಳ್ಳಿ, ನಾಮದಬೇರು, ಸೊಗದೇ ಬೇರು, ಕೆಂಪು ಗಂಧಿ (Country Sarsaparilla).

ತ. ನನ್ನಾರಿ, ಕೃಷ್ಣವಲ್ಲಿ. ತೆ. ಪಾಲಸುಗಂಧಿ, ಸುಗಂಧಿಪಾಲ. ತು. ಕನ್ಯಾಬೂರು. ಮ. ನನ್ನಾರಿ, ಪಾರವಳ್ಳಿ, ನರುನೀಣ್ಡಿಕಿೞಙ್. ಕೊಂ. ದುದವಾಲಿ. ಮಹಾ. ಉಪಲಸರಿ. ಸಂ. ರಕ್ತಕಾರಿವ, ಅನಂತಮೂಲ, ಭದ್ರವಲ್ಲಿ.

**ಹುಟ್ಟು:** ಸಾಧಾರಣ. **ಪುಷ್ಪ:** ಜ್ಯೇಷ್ಠದಿಂದ ಶ್ರಾವಣದ ವರೆಗೆ.

**ಉಪಯೋಗ:** ಔಷ: ಹುರಿದ ಬೇರಿನ ಪುಡಿ ಮಕ್ಕಳ ಅಗ್ರಕ್ಕೂ ಹುಲುಮೊಗರಕ್ಕೂ ಆಗುತ್ತದೆ. ಬೇರನ್ನು ಹಾಲಿನಲ್ಲಿ ಅರದು ಕೊಟ್ಟರೆ, ಸಿಕ್ಕುಮೂತ್ರಕ್ಕೂ ಮೂತ್ರಕಲ್ಲಿಗೂ ಒಳ್ಳೇದು. ಜೀರಿಗೇ ಮತ್ತು ನಾಮದಬೇರಿನ ಕಷಾಯ ರಕ್ತಶುದ್ಧಿಗೂ ಪಿತ್ತದ ಅಕ್ರಮಕ್ಕೂ ಕೊಡುವದುಂಟು. ಇದಲ್ಲದೆ ಬೇರು ವಾತಕ್ಕೂ ಕುರುಗಳಿಗೂ ಮೂಲವ್ಯಾಧಿಗೂ ಅತಿಸಾರಕ್ಕೂ ನಂಜಿಗೂ ಉಷ್ಣಮೂತ್ರಕ್ಕೂ ಉಪಯೋಗ; ಅಗ್ನಿದೀಪನ ಹೆಚ್ಚಿಸುವದು. ಔಷಧ ಮಾಡುವ ಕ್ರಮ ಹ್ಯಾಗಂದರೆ:—ಹೊಸತಾದ ಬೇರುಗಳನ್ನು ಜಜ್ಜಿ, ಕುದಿಯುವ ನೀರಲ್ಲಿ ಹಾಕಿ, ಪಾತ್ರೆಯ ಬಾಯಿ ಮುಚ್ಚಿ ಒಂದು ತಾಸು ವರೆಗೆ ಇಡಬೇಕು. ಅನಂತರ ತೆಗೆದು ಗಾಳಿಸಿ ಬರುವ ಕಲ್ಕವನ್ನು ದಿನಕ್ಕೆ ಮೂರಾವರ್ತಿ ಕುಡಿಯುವದು. ಅದು ಬೆಚ್ಚಗಿರುವಾಗಲೇ ಕುಡಿದರೆ ಹೆಚ್ಚು ಪ್ರಯೋಜನ ಉಂಟು; ಇದಕ್ಕೆ ಹಾಲೂ ಸಕ್ಕರೆಯೂ ಕೂಡಿಸಿ ಚಾನೀರಿನಂತೆ ಕುಡಿಯಬಹುದು; ಹೀಗೆ ಮಾಡಿದರೆ, ಮಕ್ಕಳು ಸಹ ಸಂತೋಷದಿಂದ ಕುಡಿದಾರು. ಇದನ್ನು ಕಳೆಗುಂದಿದ ಅಶಕ್ತ ಮಕ್ಕಳಿಗೆ ಕೊಟ್ಟರೆ, ಬಹಳ ಪ್ರಯೋಜನವಾಗುವದು.

**Hemidesmus indicus,** *Br.*—H. Wallichii, *Miq.*—Periploca indica, *Willd.*—(Order Asclepiadeæ.)

*Tam.* Nannāri, kṛishṇavalli. *Tel.* Pālasugandhi, sugandhipāla. *Can.* Sugandhi-baḷḷi, nāmada-bēru, sogadē-bēru, kempu-gandhi. *Tu.* Kanyābūru. *Mal.* Nannāri, pāravaḷḷi, narunīṇḍikiḻaṅṅu. *Kon.* Dudavāli. *Mah.* Upalasari. *San.* Raktakāriva, anantamūla, bhadravalli.

## 478. ಸುದಾಬು, ಹಾವುನಂಜಿನ ಗಿಡ, ನಾಗದಾಳೀ ಸೊಪ್ಪು (Common Rue).

ತೆ. ಸುದ್ಧಪುಲಕು. ತು. ಸದಾಪು. ಮ. ಅರೂತ, ಸೋಮರಾಯನ್.

**ಹುಟ್ಟು:** ತೋಟಗಳಲ್ಲಿ ಜಾಗ್ರತೆಯಾಗಿ ಬೆಳಿಸುತ್ತಾರೆ.

**ಉಪಯೋಗ:** ಔಷ: ಬಾಲಗ್ರಹದಲ್ಲಿ ಎಣ್ಣೆ ಮಾಡುವದಕ್ಕೆ ಒಳ್ಳೇದು; ಹೊಟ್ಟೆಗೆ ಗುಣಕರ; ವಾಯುವಿಗೂ ಬೆವರು ಬರುವ ಹಾಗೆಯೂ ಉಪಯೋಗ. ಕಣ್ಣುರೋಗಕ್ಕೆ ಇದರ ಸೊಪ್ಪು ಕೊರಳಿಗೆ ಕಟ್ಟುವರು. ಸಾಧಾ: ಎಲೆಗಳನ್ನು ಹಾಕಿ ಚಟ್ನಿ ಮಾಡುತ್ತಾರೆ. ಈ ಗಿಡ ಇರುವಲ್ಲಿ ಸರ್ಪವು ಬರುವದಿಲ್ಲ.

**Ruta graveolens,** *Lin.*—R. angustifolia, *Pers.*—(Order Rutaceæ.)

*Tel.* Suddhapuāku. *Can.* Sudābu, hāvunañjina-giḍa, nāgadāḷi-soppu. *Tu.* Sadāpu. *Mal.* Arūta, sōmarāyan.

## 479. ಸುರಹೊನ್ನೆ, ನಮೇರು ಮರ, ವೋಮ, ಊಮ ಗಿಡ (Alexandrian Laurel or Pinnay Oil Tree).

ತ. ಪುನ್ನೈ, ನಮೇರುಮರಮ್, ಪುನ್ನಾಗಮ್. ತೆ. ನಮೇರು, ಪೊನ್ನ. ತು. ಪೊನ್ನೆದ ಮರ. ಮ. ಪೊನ್ನಕಮ್. ಕೊಂ. ಉಂಡೀರೂಕು. ಸಂ. ಪುನ್ನಾಗಮ್, ನಮೇರುಕಾ, ಪಂಚಕೇಶರ, ತುಂಗಕೇಶರ.

**ಹುಟ್ಟು:** ದಕ್ಷಿಣದ ತೀರಗಳು. **ಪುಷ್ಪ:** ವರುಷಕ್ಕೆ ಎರಡು ಸಾರಿ.

**ಉಪಯೋಗ:** ಔಷ: ಎಲೆಗಳ ಎಣ್ಣೆ ಉರಿಗಣ್ಣಿಗೂ, ಬೀಜಗಳದು ವಾತಕ್ಕೂ, ಹಗಿನು ವ್ರಣಗಳಿಗೂ ಉಪಯೋಗ. ಸಾಧಾ: ಬೀಜದ ಎಣ್ಣೆ ದೀಪಕ್ಕೆ ಆಗುತ್ತದೆ. ಹೂ ಪರಿಮಳ; ಅಂಟು ಉಂಟು.

**Calophyllum inophyllum,** *Lin.*—C. Bintagor, *Roxb.*—(Order Guttiferæ.)

*Tam.* Punnai, namēru-maram, punnāgam. *Tel.* Namēru, ponna. *Can.* Sura-honne, namēru-mara, vōma, ūma-giḍa. *Tu.* Ponneda-mara. *Mal.* Ponnakam. *Kon.* Uṇḍīrūku. *San.* Punnāgam, namērukā, pañčakēšara, tuṅgakēšara.

## 480. ಸೂತ್ರನಾಭಿ, ಚಂದ್ರಕ, ಶಿವನಾಭಿ ಬಳ್ಳಿ.

ತ. ಚೊವನ್ನಮಿಲ್ಪೊರಿ. ಮ. ವಂಡುವಾರ, ತಾಳುನ್ನಿ.

**ಹುಟ್ಟು:** ಮಲಬಾರ, ಬಂಗಾಳ. **ಪುಷ್ಪ:** ಇಡೀ ವರುಷ.

**ಉಪಯೋಗ:** ಔಷ: ಬೇರಿನ ಕಷಾಯ ಜ್ವರಕ್ಕೂ ಜಂತುಗಳ ವಿಷಕ್ಕೂ, ಅದರ ಪುಡಿ ವಿಷಜಂತುಗಳಿಂದಾದ ಗಾಯಗಳಿಗೂ ಒಳ್ಳೇದು. ಸಾಧಾ: ಅಲಂಕಾರದ ಬಳ್ಳಿ.

**Rauwolfia serpentina,** *Benth.*—Ophioxylon serpentinum, *Lin.*—O. trifoliatum, *Gært.*—(Order Apocynaceæ.)

*Tam.* Čovannamilpori. *Can.* Sūtranābhi, čandraka, šivanābhi-baḷḷi. *Mal.* Vaṇḍuvāra, tāḷunni.

## 481. ಸೂರಣಗಡ್ಡೆ (Tacca).

ತ. ಕೇನ. ತು. ಕೇನ. ಮ. ಚೇನ. ಕೊಂ. ಸೂರ್ಣ. ಸಂ. ಸೂರ್ಣ, ಸ್ಥುರಣ.

**ಹುಟ್ಟು:** ತೋಟಗಳಲ್ಲಿ ನೆಟ್ಟು ಬೆಳಿಸುತ್ತಾರೆ.

**ಉಪಯೋಗ:** ಔಷ: ಮೂಲವ್ಯಾಧಿ ಇರುವವರಿಗೆ ಇದರ ಪಲ್ಯ ಸಿದ್ಧೌಷಧ. ಸಾಧಾ: ಹೆಚ್ಚಾಗಿ ದೊಡ್ಡವರು ಇದರ ಪಲ್ಯ ಮಾಡುತ್ತಾರೆ.

**Tacca pinnatifida,** *Forst.*—(Order Taccaceæ.)

*Tam.* Kēna. *Can.* Sūraṇa-gaḍḍe. *Tu.* Kēne. *Mal.* Čēna. *Kon.* Sūrṇu. *San.* Sūrṇa, sphuraṇa.

## 482. ಸೂರ್ಯಕಾಂತಿ, ಸೂರ್ಯಪಾನದ ಹೂ, ಸೂರ್ಯಮುಖಿ, ಅರ್ಕಪುಷ್ಪ, ಹೊತ್ತುತಿರುಗನ ಗಿಡ (Sun Flower).

ತ., ತೆ. ಸೂರ್ಯಕಾಂತಿ.

**ಹುಟ್ಟು:** ನೆಟ್ಟು ಬೆಳಿಸುವದು. **ಪುಷ್ಪ:** ಆಷಾಢ.

**ಉಪಯೋಗ:** ಔಷ: ಎಲೆಗಳ ಕಷಾಯ ವ್ರಣಗಳಿಗೂ ತಲೆನೋವಿಗೂ ಆಗುತ್ತದೆ. ಎಲೆಗಳ ಲೇಪವು ಉರಿಗೆ ಒಳ್ಳೇದು. ಸಾಧಾ: ಬೀಜಗಳಲ್ಲಿ ಒಳ್ಳೇ ಎಣ್ಣೆ ಉಂಟು; ದಂಟು ಮತ್ತು ಸೊಪ್ಪು ದನಗಳಿಗೆ ಒಳ್ಳೇ ಮೇವು; ದಂಟನ್ನು ಅಟ್ಟು ತಿನ್ನಬಹುದು. ಈ ಗಿಡವನ್ನು ಬಹಳವಾಗಿ ಬೆಳಿಸುವಲ್ಲಿ ಜ್ವರ ಹುಟ್ಟುವದಿಲ್ಲ. ನೀರುಳ್ಳ ಸ್ಥಳಗಳಲ್ಲಿ ವಿಶೇಷವಾಗಿ ವಾಸ ಮಾಡವವರು ತಮ್ಮ ಹಿತ್ತಲಲ್ಲಿ ಈ ಗಿಡವನ್ನು ಬೆಳಿಸಿದರೆ, ಅವರಿಗೆ ಬೀಜಗಳ ಪ್ರಯೋಜನ ದೊರೆಯುವದಲ್ಲದೆ ಸೌಖ್ಯಕ್ಕೆ ಸಹ ಅನುಕೂಲವಾದೀತು.

**Helianthus annuus,** *Lin.* β.—H. indicus, *Lin.*—(Order Compositæ.)

*Tam.*, *Tel.* Sūryakānti. *Can.* Sūryakānti, sūryapānada-hū, sūryamukhi, arkapushpa, hottu-tirugana-giḍa.

## 483. ಸೂರ್ಯಕಾಂತಿ (Changeable Rose).

ಮ. ಹಿನವರುತ್ತಿ, ಚೀನಪರುತ್ತಿ. ಕೊಂ. ಸೂರ್ಯಕಾಂತಿ. ಸಂ. ಪದ್ಮಚಾರಿಣಿ.

**ಹುಟ್ಟು:** ವನ ತೋಟಗಳು. **ಪುಷ್ಪ:** ಚೈತ್ರ, ವೈಶಾಖ.

**ಉಪಯೋಗ:** ಸಾಧಾ: ಅಲಂಕಾರದ ಗಿಡ. ಬೆಳಿಗ್ಯೆ ಹೂ ಬಿಳೇದಾಗಿ ಅರಳಿ, ಸಾಯಂಕಾಲವಾಗುತ್ತಾ ಕೆಂಪಾಗುವದು.

**Hibiscus mutabilis,** *Lin.*—(Order Malvaceæ.)

*Can.*, *Kon.* Sūryakānti. *Mal.* Hinaparutti, čīnaparutti. *San.* Padmačāriṇi.

## 484. ಸೇವಂತಿಗೆ, ಶಾವಂತಿಗೆ (Chrysanthemum, Ox-eye).

ತ. ಶಾಮಂತಿ. ತು. ಚಮತ್ತಿಗೆ. ಮ. ಚೆವಂತಿ, ಚೇಮಂತಿ. ಕೊಂ. ಶೇವಂತೆ. ಸಂ. ಸುಗಂಧಿಕಾ, ಶತಪತ್ರತರಣಿ, ಅತಿಮುಕ್ತಾ.

**ಹುಟ್ಟು:** ತೋಟಗಳು. **ಪುಷ್ಪ:** ಕಾರ್ತಿಕದಿಂದ ಮಾಘದ ವರೆಗೆ.

**ಉಪಯೋಗ:** ಸಾಧಾ: ಅಲಂಕಾರವೂ ಪರಿಮಳವೂ ಉಳ್ಳ ಹೂ. ಹಳದಿ, ಬಿಳೀ ಮತ್ತು ಕೆಂಪು ತರಗಳುಂಟು.

**Chrysanthemum indicum,** *Lin.*—Pyrethrum indicum, *Dec.*—(Order Compositæ.)

*Tam.* Šāmanti. *Can.* Sēvantige, šāvantige. *Tu.* Čamattige. *Mal.* Čevanti, čēmanti. *Kon.* Šēvante. *San.* Sugandhikā, šatapatratarani, atimuktā.

## 485. ಸೊಗದೇಬೇರು, ಅಂಗರ, ಅಮುಕೀರೆ, ಹಿರಿಮದ್ದಿನ ಗಡ್ಡೆ (Winter Cherry).

ತ. ಅಚುವಗಂದಿ, ಅಮುಕ್ಕಿರಾ. ತೆ. ಪೆನ್ನೇರು, ಅಶ್ವಗಂಧಿ. ಮ. ಅಮುಕಿರಮ್, ಪೀವಟೆ. ಕೊಂ. ಅಶ್ವಗಂಧಿ. ಸಂ. ದ್ವಿಶಾರಿಬಾ, ಆಬಾಲಮ್, ವಸಂತಕುಸುಮ.

**ಹುಟ್ಟು:** ಪಶ್ಚಿಮ ಪೂರ್ವ ತೀರಗಳು. **ಪುಷ್ಪ:** ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ:** ಔಷ: ಬೇರು ವಿಷಹರ. ಹರಳೆಣ್ಣೆ ತಾಗಿಸಿದ ಎಲೆಗಳನ್ನು ರಾಜಕುರುಗಳಿಗೆ ಹಚ್ಚುವರು; ಅವುಗಳ ಕಷಾಯ ಜ್ವರಕ್ಕೆ ಒಳ್ಳೇದು. ಬೇರು ಮತ್ತು ಹಣ್ಣು ಮೂತ್ರಜುಲಾಬು ಮಾಡಿಸುತ್ತವೆ. ಬೇರೂ ಎಲೆಗಳೂ ಒಣಶುಂಠಿಯ ಸಂಗಡ ಉರಿಬಾವಿಗೂ ಕಠಿಣ ಹುಣ್ಣುಗಳಿಗೂ ಸಂದುವಾತದ ಬಾವಿಗೂ ಉಪಯೋಗ. ಬೇರನ್ನು ಹಾಲಿನಲ್ಲಿ ಕಾಸಿ ಕುಡಿದರೆ, ಪಟಿಕಾರದಿಂದಾದ ಉಷ್ಣ ಹರ.

**Withania somnifera,** *Dunal.*—Physalis flexuosa, *Lin.*—Ph. somnifera, *Nees.*—Ph. tomentosa, *Thunb.*—(Order Solanaceæ.)

*Tam.* Ačuvagandi, amukkirā. *Tel.* Pennēru, ašvagandi. *Can.* Sogadē-beru, angara, amakīre, hirimaddina-gaḍḍe. *Mal.* Amukiram, pīvaṭe. *Kon.* Ašvagandhi. *San.* Dvišāribā, ābālam, vasantakusuma.

## 486. ಸೋಪು, ಬಡೇಸೋಪು (Anise).

ತೆ. ಸೊಂಪು. ಕೊಂ. ಸೇಪಿ.

**ಹುಟ್ಟು:** ದಖ್ಖಣದಲ್ಲಿ ಬೆಳಿಸುತ್ತಾರೆ.

**ಉಪಯೋಗ:** ಔಷ: ಬೀಜದ ಕಷಾಯ ಮಕ್ಕಳ ಹೊಟ್ಟೆನೋವಿಗೂ ವಾಯುವಿಗೂ ಮಂದವಾದ ಜೀರ್ಣಕ್ಕೂ ಹೊಟ್ಟೆಯ ಸೆಳವಿಗೂ ಅತಿಸಾರಕ್ಕೂ ಆಗುತ್ತದೆ. ಸಾಧಾ: ಸಂಬಾರಜೀನಸು.

**Pimpinella Anisum,** *Lin.*—Anisum officinale, *Mœnch.*—A. vulgare, *Gært.*—(Order Umbelliferæ.)

*Tel.* Sompu. *Can.* Sōpu, baḍēsōpu. *Kon.* Sēpi.

### 487. ಸೋಮಬಳ್ಳಿ, ಸೋಮಲತೆ (Moon Plant).

ತೆ. ಸೋಮಮು, ಸೋಮಲತಾ, ಪುಲ್ಲತೀಗೆ.

**ಹುಟ್ಟು**: ಹೆಚ್ಚಾಗಿ ಚೋಳಮಂಡಲ. **ಪುಷ್ಪ**: ವೈಶಾಖದಿಂದ ಆಷಾಢದ ವರೆಗೆ.

**ಉಪಯೋಗ**: ಸಾಧಾ: ಇದು ಹಿರಿಯರು ಸೋಮ ಮಾಡಿದ ಬಳ್ಳಿಯಂತೆ. ಅದರ ಹೊರೆ ಕಟ್ಟಿ ಉಪ್ಪಿನ ಒಂದು ಗಂಟಿನ ಸಹಿತ ಕಬ್ಬುಹೊಲಕ್ಕೆ ನೀರು ಸೇದುವ ಬಾವಿಗೆ ಹಾಕಿದರೆ, ಹೊಲದಲ್ಲಿ ಹುಟ್ಟುವ ಗೆದಲೆ ಕಬ್ಬಿಗೆ ತಾಗಿ ಕೆಟ್ಟುಹೋಗುವದಿಲ್ಲ; ಗೆದಲೆ ಇದ್ದರೂ, ನಾಶವಾಗುತ್ತದೆ. ಹಸಿ ಗೆಲ್ಲುಗಳು ದಾಹಹರ.

**Sarcostemma brevistigma,** *W. and A.*—Asclepias acida, *Roxb.*—(Order Asclepiadeæ.)

*Tel.* Sōmamu, sōmalatā, pullatīge. *Can.* Sōma-baḷḷi, sōmalate.

### 488. ಸೌತೆ ಬಳ್ಳಿ (Cucumber).

ತು. ತೌತೆ. ಮ. ವೆಳ್ಳರಿಕ. ಕೊಂ. ಮಗ್ಗೆ. ಹಿಂ. ಕಂಕಡಿ. ಸಂ. ಉರ್ವಾರುಕ, ಕರ್ಕಟಿ.

**ಹುಟ್ಟು**: ನೆಟ್ಟು ಬೆಳಿಸುವದು. **ಪುಷ್ಪ**: ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ**: ಔಷ: ಬೀಜ ಹುರಿದು ಸಕ್ಕರೇ ಸಂಗಡ ತಿಂದರೆ, ಮೂತ್ರಸಿಕ್ಕು ಗುಣ; ಬೀಜ ವಾಂತಿ ನಿಲ್ಲಿಸುತ್ತದೆ. ಸಾಧಾ: ಪಲ್ಯ; ಹೆಚ್ಚು ಸಮಯ ಕೆಟ್ಟುಹೋಗದೆ ಚನ್ನಾಗಿ ಉಳಿಯುತ್ತದೆ.

**Cucumis utilissimus,** *Roxb.*—(Order Cucurbitaceæ.)

*Can.* Saute-baḷḷi. *Tu.* Taute. *Mal.* Veḷḷarika. *Kon.* Magge. *Hin.* Kaṅkaḍi. *San.* Urvāruka, karkaṭi.

### 489. ಸ್ವಾಮಿ ಮರ (Redwood Tree).

ತ. ಶೆಮ್ಮರಮ್. ತೆ. ಸೂಮಿ, ಸೋಮಿದಚೆಟ್ಟು.

**ಹುಟ್ಟು**: ದಕ್ಷಿಣ. **ಪುಷ್ಪ** ಫಾಲ್ಗುಣ, ಚೈತ್ರ.

**ಉಪಯೋಗ**: ಔಷ: ಜೆಕ್ಕೆಗೆ ಬಲಕರ ಗುಣ. ಅದರ ಕಷಾಯ ವರಿಸೇ ಜ್ವರಕ್ಕೆ ಒಳ್ಳೇದು. ಅದನ್ನು ಮಿತಿಮಾರಿ ತೆಕ್ಕೊಂಡರೆ, ನರಗಳಿಗೆ ದೋಷವಾಗಿ ತಲೆ ತಿರುಗುವದು.

**Soymida febrifuga,** *Adr. Juss.*—Swietenia febrifuga, *Roxb.*—S. Soymida, *Dunc.*—(Order Meliaceæ.)

*Tam.* Šemmaram. *Tel.* Sūmi, sōmidačeṭṭu. *Can.* Svāmi-mara.

### 490. ಹಂಸಪಾದಿ.

ತ. ಶೆರುಪ್ಪಡಿ. ತೆ. ಹಂಸಪಾದಿ. ಸಂ. ತ್ರಿಪಾದಿ, ಗಮೃತಿಕಾ, ಗೋದಾಪದಿ, ಘಟಮಂಡಲಕ, ವಿಶ್ವಗ್ರಂಥಿ.

**ಹುಟ್ಟು**: ಗದ್ದೆಗಳು. **ಪುಷ್ಪ**: ಭಾದ್ರಪದದಿಂದ ಮಾರ್ಗಶಿರದ ವರೆಗೆ.

**ಉಪಯೋಗ**: ಔಷ: ಎಲೆಗಳನ್ನು ಒಣಗಿಸಿ ಮೆಂತೇ ಸಂಗಡ ಅರದು, ಕುರ ಹುಣ್ಣುಗಳಿಗೆ ಅನುಲೇಪಿಸುವರು. ಮೂಲವ್ಯಾಧಿಗೆ ಸಹ ಉಪಯೋಗ.

**Coldenia procumbens**, *Lin.*—(Order Boragineæ.)

*Tam.* Šeruppaḍi. *Tel.*, *Can.* Ha*m*sapādi. *San.* Tripādi, gamṛitikā, gōdāpadi, ghaṭamaṇḍalaka, višvagranthi.

### 491. ಹತ್ತಿ, ಅರಳೀ, ಅಂಜಿ ಗಿಡ (Indian Cotton Plant).

ತ. ಪರುತ್ತಿ, ಕಾರ್ಪಾಚಮ್, ಉತ್ತಿರಿ. ತೆ. ಪತ್ತಿ. ತು. ಪರ್ತಿ. ಮ. ಕರುಪರುತ್ತಿ. ಕೊಂ. ಕಾಪ್ಪುಸು. ಹಿಂ. ಕಪಾಸ್. ಸಂ. ಅನಗ್ನಿಕಾ, ತುಂಡಿಕೇರಿ, ಕಾರ್ಪಾಸಃ, ಕಾಳಕಾಂತ.

**ಹುಟ್ಟು**: ದಕ್ಷಿಣದಲ್ಲಿ ನೆಟ್ಟು ಬೆಳಿಸುತ್ತಾರೆ.

**ಉಪಯೋಗ**: ಔಷ: ಹಸಿ ಬೀಜದ ಪಾನಕ ಅಜೀರ್ಣರೋಗಕ್ಕೂ, ಅಫೀಮು ಮುಂತಾದ ವಿಷದಿಂದುಂಟಾದ ಅಮಲಿಗೂ ಒಳ್ಳೇದು. ಹೊಗೆಸೊಪ್ಪು ವೀಳ್ಯ ಸಹಿತ ತಿಂದದರಿಂದುಂಟಾದ ಬವಳಿಗೂ ಬೀಜಗಳ ಎಣ್ಣೆ ಶಮನಕರವು. ಬೇರಿನ ಕಷಾಯ, ಗಿಡದ ಅಂಟು ಹೊಟ್ಟೆಗೆ ಕೊಡುವದು ಮೂತ್ರಕಟ್ಟಿಗೂ ಕೆಂಪಿರೋಗ ವ್ಮೈಲಿಗಜ್ಜಿಗೂ ಸಂಜೆಗೂ ಗುಣಕರ. ತಂಪು ಗುಣವುಳ್ಳ ಎಲೆ ಚಿಗುರುಗಳನ್ನು ರಕ್ತಾತಿಸಾರ ಶೂಲ ರೋಗಗಳಲ್ಲಿ ಸೇವಿಸುತ್ತಾರೆ. ಬೇರಿನ ಕಷಾಯ ಸಹ ಒಳ್ಳೇ ಮೂತ್ರಭೇದಿ. ಎಲೆ ಕಾಯಿ ಹಾಲಿನೊಡನೆ ಅರದು ತಕ್ಕೊಂಡರೆ, ಹೊಟ್ಟೇ ಉರಿ ಗುಣ. ಸಾಧಾ: ಹತ್ತಿಯಿಂದ ನೂಲು, ಬತ್ತಿ, ವಸ್ತ್ರ, ಹಾಸಿಗೆ ಮುಂತಾದ್ದನ್ನು ಮಾಡುವದು ಸರ್ವರಿಗೂ ಗೊತ್ತದೆ. ಬೀಜಗಳಲ್ಲಿ ಒಳ್ಳೇ ಎಣ್ಣೆ ಉಂಟು; ಹಿಂಡಿ ದನಕ್ಕೆ ಹಾಕಲಿಕ್ಕೆ ಒಳ್ಳೇದು.

**Gossypium herbaceum**, *Lin.*—G. Stocksii, *Mast.*—G. indicum, *Lam.*—G. album, *W. and A.*—(Order Malvaceæ.)

*Tam.* Parutti, kārpāčam, uttiri. *Tel.* Patti. *Can.* Hatti, araḷē, añji-giḍa. *Tu.* Parti. *Mal.* Karuparutti. *Kon.* Kāppusu. *Hin.* Kapās. *San.* Anagnikā, tuṇḍikēri, kārpāsa*h*, kāḷakānta.

### 492. ಹನೆಮರ, ರಕ್ತಹೊನ್ನೆ, ಬೇಂಗ ಮರ (Kino Tree).

ತ. ವೆಂಗೆ. ತೆ. ಏಗಿ. ಮ. ವೆಂಗ. ಸಂ. ಮಹಾಕುಟಜ.

**ಹುಟ್ಟು**: ಇಡೀ ಹಿಂದುಸ್ಥಾನ.

**ಉಪಯೋಗ**: ಸಾಧಾ: ಮರ ಕೆಲಸಕ್ಕೆ ಬಹಳ ಒಳ್ಳೇದು. ಅದರೊಳಗಿನ ತೈಲ ಗುಣವು ಒಣಗಿ ಹೋಗುವದಿಲ್ಲ; ಅದರ ಅಂಟು ಕೆಲಸಕ್ಕೆ ಬರುತ್ತದೆ. ಮರವನ್ನು ಕಡಿಯಲಿಕ್ಕೆ ಸರಕಾರದ ಅಪ್ಪಣೆ ಬೇಕು.

**Pterocarpus Marsupium,** *Roxb.*—(Order Leguminosæ.)

*Tam.* Veṅge. *Tel.* Yēgi. *Can.* Hane-mara, raktahonne, bēṅga-mara. *Mal.* Veṅga. *San.* Mahākuṭaja.

## 493. ಹರಳು, ಔಡ್ಲ ಗಿಡ (Castor-oil Plant).

(ಈ ಜಾತಿಯ ಗಿಡಗಳಲ್ಲಿ ಸಣ್ಣ ಬೀಜದ್ದೂ ದೊಡ್ಡ ಬೀಜದ್ದೂ ಎಂಬೀ ಎರಡು ತರವಿದೆ; ದೊಡ್ಡದಕ್ಕೆ ಘಟ್ಟದ ಹರಳು, ಸಣ್ಣದಕ್ಕೆ ಊರ ಹರಳು ಎಂಬ ಹೆಸರು.)

ತ. ಆಮಣಕ್ಕು, ಅಂದಗಮ್. ತೆ. ಆಮುದಾಲಚೆಟ್ಟು. ತು. ಅಲಂಬುಡ. ಮ. ಚಿಟ್ಟಾಮಣಕ್ಕು. ಕೊಂ. ಎರಡಿ. ಹಿಂ. ಏರಂಡಿಕೇಝಾಡ್. ಸಂ. ಅವುಂಡ, ಏರಂಡಮ್, ಗಂಧರ್ವಹಸ್ತಕ.

**ಹುಟ್ಟು**: ನೆಟ್ಟು ಬೆಳಿಸುತ್ತಾರೆ. **ಪುಷ್ಪ**: ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ**: ಔಷ: ಬೇರಿನ ಕಷಾಯ ಮಾಡಿ ಸ್ವಲ್ಪ ಬೆಣ್ಣೆ ಹಾಕಿ ಕುಡಿದರೆ, ಮಲಮೂತ್ರಶೋಧನೆಯಾಗಿ, ಶರೀರ ಲಘುವಾಗುತ್ತದೆ. ಅದರ ಪುಡಿ ಅರದಲೇ ಬೇನೆಗೂ ವಾತರೋಗಕ್ಕೂ, ಎಲೆಗಳು ಬಿಸಿ ಮಾಡಿ ಕಟ್ಟಿದ್ದಲ್ಲಿ ಸೂತಿಕ ಕ್ರಮಪಡಿಸುವದಕ್ಕೂ ಮೊಲೆಹಾಲು ಉಂಟಾಗುವದಕ್ಕೂ ಉಪಯೋಗ. ಬೀಜಗಳ ಎಣ್ಣೆ ವಿರೇಚನ ಮಾಡುವದಕ್ಕೂ ಮೈನೋವಿಗೂ ವಾತಕ್ಕೂ ಶೀತದಿಂದಾಗುವ ಎಳವಿಗೂ ಸೊಂಟನೋವಿಗೂ ಕಂಪವಾತಕ್ಕೂ ಸಂಜೆಗೂ ಮೂಲವ್ಯಾಧಿಗೂ, ಕರ್ಪೂರತೈಲದ ಸಂಗಡ ಕ್ರಿಮಿರೋಗಕ್ಕೂ ಗುಣಕರ. ಚೆಕ್ಕೆ, ಹೊಗೆಸೊಪ್ಪು, ಶುಂಠಿ, ಇವುಗಳನ್ನರದು ಲಿಂಬೆಹಣ್ಣಿನಷ್ಟು ಕುದುರೆಗೆ ತಿನ್ನಿಸಲು, ಅದರ ಹೊಟ್ಟೆನೋವು ಗುಣ. ಸಾಧಾ: ಎಣ್ಣೆ ದೀಪಕ್ಕೆ ಬಳಿಸುತ್ತಾರೆ; ಎಲೆಗಳು ರೇಶ್ಮೆಹುಳಕ್ಕೆ ಆಹಾರ. ಬೀಜ ಬಣ್ಣದಲ್ಲಿ ಸೇರಿಸಿದರೆ, ಅದಕ್ಕೆ ಭದ್ರತೆ ಕೊಡುವದು.

**Ricinus communis,** *Lin.*—R. vulgaris, *Mill.*—(Order Euphorbiaceæ.)

*Tam.* Āmaṇakku, andagam. *Tel.* Āmudālačeṭṭu. *Can.* Haraḷu, auḍla-giḍa. *Tu.* Alambuḍa. *Mal.* Čiṭṭāmaṇakku. *Kon.* Eraḍi. *Hin.* Ēraṇḍikējhāḍ. *San.* Avuṇḍa, ēraṇḍam, gandharvahastaka.

## 494. ಹರಿವೇಸೊಪ್ಪು, ಚಿವಿಕೆಸೊಪ್ಪು, ದಂಟುಸೊಪ್ಪು, ಕುಣಂಬವು ಗಿಡ (Country Green).

ತೆ. ತೋಟಕೂರ. ತು. ಪದ್‌ಪೆ, ದೊಗ್ಗೊಲಿಪದ್ಪೆ. ಕೊಂ. ಥಾಜ್ಜ. ಸಂ. ಅರಿಕಿಸಿರ.

**ಉಪಯೋಗ**: ಸಾಧಾ: ಸೊಪ್ಪು ದಂಟು ಪಲ್ಯಕ್ಕಾಗುತ್ತದೆ.

**Amarantus gangeticus,** *Lin.*—A. oleraceus, *Roxb.*—A. polygamus, *Roxb.*—(Order Amarantaceæ.)

*Tel.* Tōṭakūra. *Can.* Harivē-soppu, čivike-soppu, daṇṭu-soppu, kuṇambavu-giḍa. *Tu.* Padpe, doggoli-padpe. *Kon.* Bhājji. *San.* Arikisira.

### 495. ಹಲಸಿನ ಮರ (Indian Jack Tree).

ತ. ಪಲಾಚು, ಚೀರಾ. ತೆ. ಪನಸ. ತು. ಪೆಲ. ಮ. ಪಿಲಾವ್, ಕಣ್ಡಕಿಫಲ, ಜಕ್ಕ. ಕೊಂ. ಪಣಸು. ಮಹಾ., ಹಿಂ. ಫನಸ್. ಸಂ. ಪನಸ, ಸ್ಕಂದಫಲ, ಪಶುಮುಸ್ತಾ, ಕಂಟಕಫಲಾ.

ಹುಟ್ಟು: ತೋಟಗಳು. ಪುಷ್ಪ: ಕಾರ್ತಿಕ, ಮಾರ್ಗಶಿರ.

ಉಪಯೋಗ: ಔಷ: ಮರದ ಹಾಲು ಸಿರ್ಕದ ಸಂಗಡ ಲೇಪಿಸಿದರೆ, ಗಂಟ್ಲು ಗುಡ್ಡುಗಳ ಬಾವು ಗುಣ. ಬೇರಿನ ಕಷಾಯವು ಅತಿಸಾರ ನಿಲ್ಲಿಸುವದು. ಚೆಕ್ಕೆಯ ಹಾಲು ಬಜೀ ಬೇರಿನ ಸಂಗಡ ಅರದು ಕಣ್ಣಿಗೆ ಬಿಟ್ಟರೆ, ದೃಷ್ಟಿಮಾಂದ್ಯ ಗುಣ. ಕಾಯಿಯ ಸೊಳೆ, ಬೇರಿನ ರಸ ಸಕ್ಕರೆಯೊಡನೆ ಅರದು ಲೇಪ ಮಾಡಿದರೆ, ಉರಿನಂಜಿಗೆ ಒಳ್ಳೇದು. ಸಾಧಾ: ಹಣ್ಣು ತಿನ್ನುತ್ತಾರೆ; ಕಾಯಿಯ ಪದಾರ್ಥವೂ ಉಪ್ಪಿನಕಾಯಿಯೂ ಮಾಡುತ್ತಾರೆ. ಮರ ಕೆಲಸಕ್ಕೆ ಒಳ್ಳೆದು; ಕೆಲವರು ಬೀಜ ಹುರಿದು ತಿನ್ನುವರು. ಎಲೆಗಳು ಆಡಿಗೆ ಒಳ್ಳೇ ಆಹಾರ. ಸರಕಾರದ ಅಪ್ಪಣೆ ವಿನಹ ಮರವನ್ನು ಕಡಿಯಕೂಡದು.

**Artocarpus integrifolia,** *Lin. f.*—Polyphema Jaca, *Lour.*—Sitodium cauliflorum, *Gært.*—(Order Urticaceæ.)

*Tam.* Palāču, čīrā. *Tel.* Panasa. *Can.* Halasina-mara. *Tu.* Pela. *Mal.* Pilāvu̥, kaṇḍakiphala, jakka. *Kon.* Paṇasu. *Mah., Hin.* Phanas. *San.* Panasa, skandaphala, pašumustā, kaṇṭakaphalā.

### 496. ಹಲ್ಲುನೋವು, ಬೆಪ್ಪಾಲೆ, ವೆಪಾಲೆ, ಹಾಲೆ ಮರ (Ivory Wood).

ತ. ವೆಪ್ಪಾಲೆ, ನೀಲಪಾಲೆ, ಪಾಲೆ. ತೆ. ಪಾಲವರಿ. ತು. ನೈಕೂಲಿ. ಮ. ಪಾಲ, ತೊಂದಪಾಲೆ.

ಹುಟ್ಟು: ತೋಟಗಳು. ಪುಷ್ಪ: ಫಾಲ್ಗುಣದಿಂದ ವೈಶಾಖದ ವರೆಗೆ.

ಉಪಯೋಗ: ಔಷ: ಎಲೆಗಳನ್ನು ಜಗಿದರೆ, ಹಲ್ಲುನೋವಿಗೆ ಒಳ್ಳೇದು. ಸಾಧಾ: ಎಲೆಗಳಿಂದ ನೀಲ ಬಣ್ಣ ದೊರೆಯುತ್ತದೆ.

**Wrightia tinctoria,** *Br.*—Nerium tinctorium, *Roxb.*—(Order Apocynaceæ.)

*Tam.* Veppāle, nīlapāle, pāle. *Tel.* Pālavari. *Can.* Hallunōvu, beppāle, vepāle, hāle-mara. *Tu.* Naikūli. *Mal.* Pāla, tondapāle.

### 497. ಹಲ್ಲಿಕಾಯಿ ಬಳ್ಳಿ.

ತ. ಚಿಲ್ಲು. ತು. ಪಲ್ಲಿಬೂರು. ಮ. ಪರಂಗಾಕವಳ್ಳಿ. ಕೊಂ. ಗಾರಾಯೆವಾಲಿ.

ಹುಟ್ಟು: ಪಶ್ಚಿಮ ತೀರ. ಪುಷ್ಪ: ಫಾಲ್ಗುಣ, ಚೈತ್ರ.

**ಉಪಯೋಗ:** ಔಷ: ಬೀಜ ಜ್ವರಕ್ಕೂ ಅಂಡವಾತಕ್ಕೂ ನಿತ್ರಾಣಕ್ಕೂ ವಾಂತಿಯಾಗುವದಕ್ಕೂ ಉಸುರುಸಿಕ್ಕಿಗೂ ಪ್ರಯೋಗಿಸುವರು. ಸಾಧಾ: ಬೀಜದಿಂದ ಅಂಟು ಮಾಡಿ, ಕೂದಲುಗಳನ್ನು ತೊಳೆಯುತ್ತಾರೆ.

**Entada scandens**, *Benth.*—Mimosa scandens, *Lin.*—Entada monostachya, *Dec.*—(Order Leguminosæ.)

*Tam.* Čillu. *Can.* Hallekāyi-baḷḷi. *Tu.* Palle-būru. *Mal.* Paringākavaḷḷi. *Kon.* Gārāye-vāli.

## 498. ಹಳದಿಪಾವಟೆ, ತಾಗಚೆ, ಮಡ್ಡೀ ಮರ.

ತ. ನುಣಾ, ತುಣವು. ತೆ. ಮಡ್ಡಿಚೆಟ್ಟು. ತು. ತಾಕೊಟೆ. ಮ. ಕಡಪ್ಪಿಲಾವು. ಹಿಂ. ಅಚ್ಚಿ.

**ಹುಟ್ಟು:** ತೋಟಗಳು. **ಪುಷ್ಪ:** ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ:** ಔಷ: ಎಲೆಗಳ ರಸ ಎಣ್ಣೆಯೊಡನೆ ಶ್ರೋಣಿತವಾತಕ್ಕೆ ಒಳ್ಳೇದು. ಕಾಯಿಯ ಭಸ್ಮ ಅಜೀರ್ಣ ಸನ್ನಿಗಳಿಗೆ ಉಪಯೋಗ. ಹಸಿ ಎಲೆ ಗಾಯ ವ್ರಣಗಳಿಗೆ ಹಚ್ಚಿದರೆ, ಮಾದು ಬೇಗ ಹೊಸ ಚರ್ಮ ಬರುವದು. ಸಾಧಾ: ಎಲೆ ರೇಶ್ಮೆಹುಳಕ್ಕೆ ಆಹಾರ; ಕಾಯಿ ತಿನ್ನಬಹುದು; ಬೇರಿನ ಚೆಕ್ಕೆ ಕೆಂಪು ಬಣ್ಣಕ್ಕೆ ಆಗುತ್ತದೆ. ಮರದಿಂದ ಹಾವುಗೆ ಮಾಡುತ್ತಾರೆ.

**Morinda citrifolia**, *Lin.*—(Order Rubiaceæ.)

*Tam.* Nuṇā, tuṇavu. *Tel.* Maḍḍičeṭṭu. *Can.* Haḷadi-pāvaṭe, tāgače, maḍḍī-mara. *Tu.* Tākoṭe. *Mal.* Kaḍappilāvu. *Hin.* Ačči.

## 499. ಹಾಗಲ, ಮಿಡಿಗಾಯಿ ಬಳ್ಳಿ (Momordica).

ತ. ಪಾಗಲ್. ತೆ. ಕಾಕರ, ಪೊಟ್ಟಿಕಾಕರ. ತು. ಕಂಚಾಲ. ಮ. ಪಾವಲ್, ಮಿತಿಪಾಗಲ್, ಪುಲ್ಲಾಯಿನಿ, ರಾಜವಳ್ಳಿ. ಕೊಂ. ಕಾರಾತೆ. ಹಿಂ. ಕರೇಲ. ಸಂ. ಕಾರವಲ್ಲಿ, ಕ್ರಿಮಿಘ್ನ, ವಿಷಕಂಟಕಿ.

**ಹುಟ್ಟು:** ಸಾಧಾರಣ. **ಪುಷ್ಪ:** ಶ್ರಾವಣದಿಂದ ಆಶ್ವೀಜದ ವರೆಗೆ.

**ಉಪಯೋಗ:** ಔಷ: ಗಿಡದ ಗುಣ ನಂಜುಹರ. ಎಲೆಗಳ ರಸ ಬಿಸಿ ನೀರಲ್ಲಿ ತೆಕ್ಕೊಂಡರೆ, ಕ್ರಿಮಿರೋಗ ಗುಣ. ಒಣಗಿಸಿ ಪುಡಿ ಮಾಡಿದ ಸಹಮೂಲವು ವ್ರಣ ಕುಷ್ಠಗಳಿಗೆ ಒಳ್ಳೇದು. ಸಾಧಾ: ಕಾಯಿ ಪಲ್ಯ.

**Momordica Charantia**, *Lin.*—(Order Cucurbitaceæ.)

*Tam.* Pāgal. *Tel.* Kākara, poṭṭikākara. *Can.* Hāgala, miḍigāyi-baḷḷi. *Tu.* Kañčāla. *Mal.* Pāval, mitipāgal, pullāyini, rājavaḷḷi. *Kon.* Kārāte. *Hin.* Karēla. *San.* Kāravalli, krimighna, vishakaṇṭaki.

### 500. ಹಾದರೀ, ಪಾತಲಿ, ನೇಮಿ ಮರ.

ತ. ಪಾಲೈ. ಮ. ಮಣಿಲಕಾರ, ಪರಮೂಣಿಪಾಲ. ಸಂ. ವಸಂತದೂತಿ, ತಾಳವೃಂತ.

**ಹುಟ್ಟು**: ಮಲಬಾರತೀರ. **ಪುಷ್ಪ**: ಫಾಲ್ಗುಣ, ಚೈತ್ರ.

**ಉಪಯೋಗ**: ಔಷ: ಚೆಕ್ಕೆಗೆ ಒಗರು ಗುಣ; ಮರದ ಕಷಾಯ ವಾತಕ್ಕೂ ಜ್ವರಕ್ಕೂ ಒಳ್ಳೇದು. ನಂಜಿನ ಕಜ್ಜಿಗೂ ಕುರುಗಳಿಗೂ ಎಲೆಗಳ ಲೇಪ ಹಾಕುವರು. ಎಲೆಗಳನ್ನು ಸೀಯಾಳದ ನೀರಲ್ಲಿ ಬೇಯಿಸಿ, ಅರದು, ಗಾಳಿಸಿ ತೆಗದ ಆ ನೀರಿಗೆ ಎಳ್ಳೆಣ್ಣೆ ಕೂಡಿಸಿ, ಪುನಹ ಬೇಯಿಸಿ ತಲೆಗೆ ಹಚ್ಚಿದರೆ, ಬಿರಿಬಿರಿ ಎಂಬ ಮಕ್ಕಳ ಬಲಹೀನತ್ವ ಗುಣ. ಬೀಜದ ಎಣ್ಣೆ ಕಣ್ಣುರೋಗಕ್ಕೂ, ಹೊಟ್ಟೆಗೆ ತಕ್ಕೊಂಡರೆ ಕ್ರಿಮಿರೋಗಕ್ಕೂ ಆಗುತ್ತದೆ.

**Mimusops Kauki**, *Lin.*—M. balota, *Bl.*—M. dissecta, *Br.*—M. Hookeri, *Dec.*—(Order Sapotaceæ.)

*Tam.* Pālai. *Can.* Hādari, pātali, nēmi-mara. *Mal.* Maṇilakāra, paramūṇipāla. *San.* Vasantadūti, tāḷavṛinta.

### 501. ಹಾಲುಹಕ್ಕರಿಗೆ ಪಲ್ಯ, ಸಲಾದಿ, ಹಾಲ್ಮೂಲಂಗಿ ಸೊಪ್ಪು (Lettuce).

**ಉಪಯೋಗ**: ಸಾಧಾ: ಪಲ್ಯಕ್ಕೆ ಆಗುತ್ತದೆ; ಸಲಾದಿ ಮಾಡುವರು.

**Lactuca Heyneana**, *D. C.*—(Order Compositæ.)

*Can.* Hāluhakkarige-palya, salādi, hālmūlaṅgi-soppu.

### 502. ಹಾಲೆ, ಎಳಿಲೆಬಾಳೆ, ಪಾಲೆ, ಜಂತಲೆ, ಕೋಡಾಲೆ ಮರ.

ತ. ಏಳಿಲೈಪ್ಪಾಲೈ. ತೆ. ಏಡಾಕುಲರಿಟಿಚೆಟ್ಟು. ತು. ಪಾಲೆ, ಪಾಲೆಂಬು. ಮ. ಏರಿಲಂಪಾಲ, ದೈವಪಾಲ, ಮಂಗಲಪಾಲ. ಕೊಂ. ಸಾಂತ್ನಿರೂಕು. ಮಹಾ. ಸಾತ್ವಿನ. ಸಂ. ಜೀವನಿ, ಪಯಸ್ಯಾ, ಕ್ಷತ್ರಿಯಾ, ಶೃಂಗಿರೀಟಿಕಾ.

**ಹುಟ್ಟು**: ಪಶ್ಚಿಮ ಪೂರ್ವ ತೀರಗಳು. **ಪುಷ್ಪ**: ಕಾರ್ತಿಕ, ಮಾರ್ಗಶಿರ.

**ಉಪಯೋಗ**: ಔಷ: ಚೆಕ್ಕೆ ಹೊಟ್ಟೇ ಅಕ್ರಮಕ್ಕೂ ಅಜೀರ್ಣಕ್ಕೂ ಕ್ರಿಮಿಗಳಿಗೂ ಒಳ್ಳೇ ಔಷಧ. ಮರದ ತುಂಡು ನೀರಲ್ಲಿ ಅರದು ವಾತಕ್ಕೂ ಕುರುಗಳಿಗೂ ಲೇಪಿಸುತ್ತಾರೆ. ಚೆಕ್ಕೆಯನ್ನು ಕುಟ್ಟಿ ಹತ್ತೀ ಬೀಜದ ಸಂಗಡ ಎಣ್ಣೆಯಲ್ಲಿ ಬೇಯಿಸಿ, ಮಂದಕಿವಿಗೆ ಹಾಕುವರು. ಸಾಧಾ: ಮರ ಕೆಲಸಕ್ಕೆ ಆಗುತ್ತದೆ.

**Alstonia scholaris**, *Br.*—Echites scholaris, *Lin.*—(Order Apocynaceæ.)

*Tam.* Ēḷilaippālai. *Tel.* Ēḍākulariṭičeṭṭu. *Can.* Hāle, eḷelebāḷe, pāle, jantale, kōḍāle-mara. *Tu.* Pāle, pālembu. *Mal.* Ērilampāla, daivapāla, maṅgalapāla. *Kon.* Sāntnirūku. *Mah.* Sātvina. *San.* Jīvani, payasyā, kshatriyā, śriṅgiriṭikā.

### 503. ಹಾವುಮೆಕ್ಕೆ, ಇಂದ್ರಾವರುಣಿ, ದೊಡ್ಡಹಾಲ್ಮೆಕ್ಕಿ ಬಳ್ಳಿ (Colocynth or Bitter Apple).

ತ. ಪೇದಿಕಾರಿ, ಆತ್ತುತ್ತುಮ್ಮಟ್ಟಿ, ಪೇಯ್ಕೊಮ್ಮಟ್ಟಿ. ತೆ. ಪಾಪರಬುಡಮು, ಕಾರ್ಕಾರುಕಮು, ವೆರ್ರಿಪುಚ್ಚ. ತು. ಕಕ್ಕೆಂಡೆಲ್. ಮ. ಪೈಕುಮ್ಮಟೆ, ಕಾಟುವೆಳ್ಳರಿ. ಕೊಂ. ಕಾವಂಡಳಿ. ಹಿಂ. ಬಿಂದ್ರಾವನ್. ಸಂ. ಇಂದ್ರಾಹ್ವಾ, ಚಿತ್ರಫಲ, ಗೋಬಂದಿನಿ.

**ಹುಟ್ಟು:** ದಕ್ಷಿಣ ಹಿಂದುಸ್ಥಾನ. **ಪುಷ್ಪ:** ಆಷಾಢದಿಂದ ಭಾದ್ರಪದದ ವರೆಗೆ.

**ಉಪಯೋಗ:** ಔಷ: ಕಾಯಿಯ ಸತ್ವ ಒಳ್ಳೇ ಮಲಭೇದಿ; ಅದರ ರಸ ಸಕ್ಕರೇ ಸಂಗಡ ಬೀಗಿಗೆ ಆಗುತ್ತದೆ. ಬೇರು ಕೆಮ್ಮಿಗೂ ಮಕ್ಕಳ ಉಬ್ಬಸಕ್ಕೂ, ಬೀಜದ ಎಣ್ಣೆ ಸರ್ಪದಂಶಕ್ಕೂ ಕರುಳುಗಳ ಅಕ್ರಮಕ್ಕೂ ಅಪಸ್ಮಾರಕ್ಕೂ ಕೇಶವೃದ್ಧಿಗೂ ಉಪಯೋಗ. ಸಾಧಾ: ಶೃಂಗಾರದ ಕಾಯಿ. ಬೀಜದ ಎಣ್ಣೆ ದೀಪಕ್ಕೆ ಆಗುತ್ತದೆ; ಆದರೆ ಸಿಪ್ಪೆ ತೆಗದ ಬೀಜದ್ದಾದರೆ, ಆಹಾರಕ್ಕೂ ತಕ್ಕದ್ದಾಗಿದೆ.

**Citrullus Colocynthis,** *Schrad.*—Cucumis Colocynthis, *Lin.*—(Order Cucurbitaceæ.)

*Tam.* Pēdikāri, āttuttummaṭṭi, pēykommaṭṭi. *Tel.* Pāparabuḍama, kārkārukamu, verripučča. *Can.* Hāvumekke, indrāvaruṇi, doḍḍa-hālmekki-baḷḷi. *Tu.* Kakkeṇḍelu. *Mal.* Paikummaṭe, kāṭuveḷḷari. *Kon.* Kāvaṇḍaḷi. *Hin.* Bindrāvan. *San.* Indrāhvā, čitraphala, gōbandini.

### 504. ಹಿಂಗಳದ, ಇಂಗಿನ ಗಿಡ (Asafœtida).

ತ. ಪೆರುಂಗಾಯಮ್, ಉರುಂಬರಮ್, ಇರಾಮಟಮ್. ತೆ. ಇಂಗುವ, ರಾಮಠಮು. ತು. ಇಂಗ್. ಮ. ಪೆರುಂಕಾಯಮ್. ಕೊಂ. ಹಿಂಗಾಝ್ಝಾಡ.

**ಹುಟ್ಟು:** ಹೆಚ್ಚಾಗಿ ಪಾರ್ಸಿಸ್ಥಾನ, ಹಿರಾತು. **ಪುಷ್ಪ:** ಜ್ಯೇಷ್ಠ, ಆಷಾಢ.

ಈ ಗಿಡವು ನಮ್ಮ ಪ್ರಾಂತಗಳಲ್ಲಿ ಹುಟ್ಟದಿದ್ದರೂ, ಅದರ ಗಡ್ಡೆಯ ರಸವಾದ ಇಂಗುವೆಂಬದು ಬಹಳ ಉಪಯೋಗವುಳ್ಳದ್ದು. ಅದು ಸಂಬಾರಜೀನಸುಗಳಿಗೆ ಸೇರುವದಲ್ಲದೆ ಔಷಧವಾಗಿ ಸಹ ಪ್ರಯೋಗವಾಗುತ್ತದೆ. ಹೆಚ್ಚಾಗಿ ನರಗಳಿಗೆ ಚುರುಕು ಕೊಟ್ಟು ಕಿಬ್ಬೊಟ್ಟೆಯ ಮತ್ತು ಎದೆಯ (ಶ್ವಾಸಕೋಶದ) ಮಂದತ್ವಕ್ಕೂ ಅಗ್ನಿದೀಪನ ಹೆಚ್ಚಿಸುಪದಕ್ಕೂ ಸೆಳವು ನಿವಾರಿಸುವಕ್ಕೂ ಹೆಂಗಸರ ಸೂತಿಕವಾಯುವಿನ ಉಪದ್ರಕ್ಕೂ ಒಳ್ಳೇದು. ಇದಲ್ಲದೆ ಬೇರೆ ಜೀನಸುಗಳ ಸಮೇತ ಬಹಳ ಔಷಧಪ್ರಯೋಗಕ್ಕೆ ಬೀಳುತ್ತದೆ.

**Ferula Asa-fœtida,** *Lin.*—(Order Umbelliferæ.)

*Tam.* Peruṅgāyam, urumbaram, irāmaṭam. *Tel.* Iṅguva, rāmaṭhamu. *Can.* Hiṅgaḷada, iṅgina-giḍa. *Tu.* Iṅgu. *Mal.* Peruṅkāyam. *Kon.* Hiṅgājhāḍa.

### 505. ಹಿಡಿಜೋಳ, ದೊಡ್ಡ ಜೋಳ, ಮೆಕ್ಕೇಜೋಳ, ಗೋವಿನ ಜೋಳ (Maize or Indian Corn).

ತ. ಮೊಕ್ಕೈಚೋಳಮ್. ತೆ. ಮೊಕ್ಕಜೊನ್ನ. ತು. ಜೋಳ. ಮ. ಪೊಂತಿಚ್ಚೋಳಮ್. ಕೊಂ. ಜೋಳು.

ಹುಟ್ಟು: ನೆಟ್ಟು ಬೆಳಿಸುತ್ತಾರೆ.

ಉಪಯೋಗ: ಸಾಧಾ: ಈ ಜೋಳದ ಕಾಳು ಅಕ್ಕಿಗಿಂತ ಬಲವುಳ್ಳದ್ದು. ದಂಟುಗಳು ದನಕ್ಕೆ ಆಹಾರ.

**Zea Mays,** *Lin.*—Z. alba, *Mill.*—Z. americana, *Mill.*—Mays Zea, *Gært.*—(Order Gramineæ.)

*Tam.* Mokkaičōḷam. *Tel.* Mokkajonna. *Can.* Hiḍijōḷa, doḍḍa-jōḷa, mekkē-jōḷa, gōvina-jōḷa. *Tu.* Jōḷa. *Mal.* Ponticčōḷam. *Kon.* Jōḷu.

### 506. ಹಿಪ್ಪಲಿ, ಹೀಲ, ಕಂಬಳಿ ಗಿಡ (Silkworm Mulberry).

ಉಪಯೋಗ: ಸಾಧಾ: ಈ ಗಿಡದ ಸೊಪ್ಪು ರೇಶ್ಮೆ ಕಂಬಳಿಹುಳಕ್ಕೆ ಆಹಾರ. ಹಣ್ಣುಗಳನ್ನು ತಿನ್ನಬಹುದು.

**Morus indica,** *Lin.*—(Order Urticaceæ.)

*Can.* Hippali, hīla, kambaḷi-giḍa.

### 507. ಹಿಪ್ಪಲಿ ಬಳ್ಳಿ (Long Pepper).

ತ. ತಿಪ್ಪಿಲಿ, ಕಲಿನಿ, ಚಮಿಲಾಗಿ. ತೆ. ಪಿಪ್ಪಲಿ. ತು. ಇಪ್ಪುಲಿ. ಮ. ತಿಪ್ಪಲಿ. ಕೊಂ. ಹಿಪ್ಲಿ. ಸಂ. ಪಿಪ್ಪಲೀ, ಕಗೋಫಲಾ, ಗೋನಾಮಿಕಾ, ತ್ರಿಕಣಾ.

ಹುಟ್ಟು: ತೋಟಗಳಲ್ಲಿ ನೆಟ್ಟು ಬೆಳಿಸುತ್ತಾರೆ.

ಉಪಯೋಗ: ಔಷ: ಬೀಜದ ಕಷಾಯ ಮತ್ತು ಜೇನುತುಪ್ಪ ಕೆಮ್ಮು ಗಂಟ್ಲು ನೋವಿಗೂ ಕೊಡುವರು. ಬೇರು ಹೊಟ್ಟೆಗೆ ಒಳ್ಳೇದು; ಅದೀಪನಕ್ಕೂ ಉದರವಾಯು ವಿಗೂ ಸಂದುಹಿಡಿತಕ್ಕೂ ಅಪಸ್ಮಾರಕ್ಕೂ ಪಕ್ಷವಾತಕ್ಕೂ ಗುಣಕರ. ಸಾಧಾ: ಸಂಬಾರಜೀನಸು; ಬಳ್ಳಿಯ ಸಾರು ಮಾಡುವದುಂಟು.

**Piper longum,** *Lin.*—Chavica Roxburghii, *Miq.*—(Order Piperaceæ.)

*Tam.* Tippili, kalini, čamilāgi. *Tel.* Pippali. *Can.* Hippali-baḷḷi. *Tu.* Ippuli. *Mal.* Tippali. *Kon.* Hiplī. *San.* Pippalī, kagōphalā, gōnāmikā, trikaṇā.

### 508. ಹಿರಿಬೋಗಿ, ಕರ್ಮರ, ಉಂಡಿಮರ.

ತ. ಕೊಂಗು. ತು. ಕರ್ಮರ್. ಮ. ಇಲಪೊಂಗು.

ಹುಟ್ಟು: ಸಾಧಾರಣ. ಪುಷ್ಪ: ಮಾಘ ತಿಂಗಳಲ್ಲಿ.

**ಉಪಯೋಗ:** ಸಾಧಾ: ಮರ ಸೌದೆಗಾಗಿಯೇ, ಅದರ ಸೊಪ್ಪು ಗದ್ದೆಗಳ ಗೊಬ್ಬರಕ್ಕೆ ಒಳ್ಳೇದು.

**Hopea Wightiana,** *Wall.*—(Order Dipterocarpeæ.)

*Tam.* Kongu. *Can.* Hiribōgi, karmara, uṅṅi-mara. *Tu.* Karmar. *Mal.* Ilapongu.

## 509. ಹಿರಿಮೆಕ್ಕೆ, ದೊಡ್ಡಮೆಕ್ಕೆ, ಅಡಿಕೆಬಾಳೆ, ಪಚ್ಚೆಕಾಯಿ, ಹಾಲ್ಮೆಕ್ಕಿ ಬಳ್ಳಿ (Wild Melon).

ತ. ತುಮ್ಮಟಿಕಾಯ್. ತೆ. ಪುಡಮಕಾಯಿ. ತು. ಅಡ್ಕಬಾರೆ. ಕೊಂ. ಪೆಂಡಾರೆ. ಸಂ. ಪಿಂದಾರಕ.

**ಹುಟ್ಟು:** ಕಾಡುಗಳು. **ಪುಷ್ಪ:** ಸ್ವಲ್ಪ ಕಡಿಮೆ ಇಡೀ ವರುಷ.

**ಉಪಯೋಗ:** ಔಷ: ಒಗರು ಗುಣವುಳ್ಳದ್ದು; ಮಲಬದ್ಧ ಮಾಡತಕ್ಕಂಥಾದ್ದು. ಬೇರಿನ ಸಿಪ್ಪೆಯನ್ನು ಹುರಿದು ಧೂಪದ ಎಣ್ಣೇ ಸಂಗಡ ಕೆಟ್ಟ ಹುಣ್ಣುಗಳಿಗೆ ಹಚ್ಚುತ್ತಾರೆ. ಸಾಧಾ: ಕಾಯಿ ಪಲ್ಯ.

**Cucumis trigonus,** *Roxb.*—C. pubescens, *Willd.*—C. maderaspatanus, *Roxb.*—(Order Cucurbitaceæ.)

*Tam.* Tummaṭikāy. *Tel.* Puḍamakāyi. *Can.* Hirimekke, doḍḍamekke, aḍike-bāḷe, paččekāyi, hālmekki-baḷḷi. *Tu.* Aḍkabāre. *Kon.* Peṇḍāre. *San.* Pindāraka.

*N. B.*—The cultivated melon is Cucumis melo, *Lin.*—ಕೆಕ್ಕರಿಕೆ ಬಳ್ಳಿ, ಪುಟ್ಟಿ ಹಣ್ಣು. *Can.* Kekkarike-baḷḷi, puṭṭi-haṇṇu.

## 510. ಹಿರೇಕಣಿಗು, ದೇವಗರಿಗೆ ಮರ.

ತ. ಕುಳವಿ, ತಮಾಲಮ್, ತಾಪಿಂಚಮ್. ಮ. ತಮಾಲಮ್, ಸಮುದ್ರಪಚ್ಚ.

**ಹುಟ್ಟು:** ಕೊಂಕಣ ತೀರ. **ಪುಷ್ಪ:** ಚೈತ್ರದಿಂದ ಜ್ಯೇಷ್ಠದ ವರೆಗೆ.

**ಉಪಯೋಗ:** ಸಾಧಾ: ಹಣ್ಣು ತಿನ್ನುತ್ತಾರೆ. ಕಾಯಿಯಿಂದ ಹಳದಿ ಬಣ್ಣವಾಗುತ್ತದೆ.

**Garcinia Xanthochymus,** *Hook.*—Xanthochymus pictorius, *Roxb.*—X. tinctorius, *Dec.*—(Order Guttiferæ.)

*Tam.* Kuḷavi, tamālam, tāpiṅčam. *Can.* Hirēkaṇigu, dēvagarige-mara. *Mal.* Tamālam, samudrapačča.

## 511. ಹೀರೇ ಬಳ್ಳಿ (Luffa).

ತ. ಪೀರ್ಕು, ಚಾಲಿನಿ, ಪೀರಮ್. ತೆ. ಬೀರಕಾಯ. ತು. ಪೀರೆ, ದಾರೆಪೀರೆ. ಮ. ಪೀಚ್ಚಕಂ, ಚೆರುಪೀರಂ. ಕೊಂ. ಘೊಸಾಳೆ. ಹಿಂ. ತುರೈ.

**ಹುಟ್ಟು:** ನೆಟ್ಟು ಬೆಳಿಸುವದು. **ಪುಷ್ಪ:** ಹೆಚ್ಚಾಗಿ ಆಷಾಢ, ಶ್ರಾವಣ.

**ಉಪಯೋಗ:** ಔಷ: ಬೇರಿನ ಕಷಾಯ ಮಲಭೇದಿ; ಅದು ಸನ್ನಿ ನಿಲ್ಲಿಸುವದು. ಸಾಧಾ: ಒಳ್ಳೇ ಪಲ್ಯ.

**Luffa acutangula,** *Spring.*—Cucumis acutangulus, *Wall.*—(Order Cucurbitaceæ.)

*Tam.* Pīrku, čālini, pīram. *Tel.* Bīrakāya. *Can.* Hīrē-baḷḷi. *Tu.* Pīre, dārepīre. *Mal.* Pīččakam, čerupīram. *Kon.* Ghosāḷe. *Hin.* Turai.

## 512. ಹುಣಿಸೇ, ಹುಳಿ ಮರ (Tamarind Tree).

ತ. ಪುಳಿಯಮರಮ್, ಇಂದಮ್, ಮುಗಿನಿ. ತೆ. ಚಿಂತಚೆಟ್ಟು. ತು. ಪುನ್ಕೆಮರ. ಮ. ಆಮ್ಲಮ್, ಚಿಂಚ, ಪುಳಿ, ತಿಂದಿಡಂ, ಮಧುರಪುಳಿ. ಕೊಂ. ಚೀಂಚ, ಚಿಂಚೆರೂಕು. ಹಿಂ. ಅಂಬ್ಲೀ. ಸಂ. ತಿಂತ್ರಿಣೀ, ಆಮ್ಲವೃಕ್ಷ, ಚಿಂಚ, ಶುಕ್ತಂ.

**ಹುಟ್ಟು:** ದಕ್ಷಿಣ ಹಿಂದುಸ್ಥಾನ, ಬಂಗಾಳ. **ಪುಷ್ಪ:** ವೈಶಾಖ, ಜ್ಯೇಷ್ಠ.

**ಉಪಯೋಗ:** ಔಷ: ಎಲೆಗಳು ಕಾಮಿಲೆಗೂ ಪಿತ್ತಕ್ಕೂ ಹಳೇ ವ್ರಣಗಳಿಗೂ ಉರಿಗಣ್ಣಿಗೂ, ಹಣ್ಣಿನ ತಿರುಳು ಅಜೀರ್ಣಕ್ಕೂ ಕಣ್ಣುರೋಗಕ್ಕೂ ಮಲಬದ್ಧಕ್ಕೂ ಹುಣ್ಣುಗಳಿಗೂ ಸ್ವರಭಂಗಕ್ಕೂ, ಬೀಜಗಳು ಅಜೀರ್ಣರೋಗಕ್ಕೂ ಉಪಯೋಗ. ಬೀಜಗಳನ್ನು ನೀರಲ್ಲಿ ಅರದು, ಹಳೇ ಹುಣ್ಣುಗಳಿಗೆ ಹಚ್ಚುತ್ತಾರೆ. ಸಾಧಾ: ಮರವು ಬಹಳ ಘಟ್ಟಿ ಇರುವದರಿಂದ ಒಳ್ಳೇ ಕೆಲಸಕ್ಕೆ ಬರುತ್ತದೆ. ಎಲೆಗಳ ರಸ ಕೆಂಪು ಮತ್ತು ಹಸುರು ಬಣ್ಣಕ್ಕೆ ಆಗುತ್ತದೆ. ಹುಣಿಸೆಯನ್ನು ಹುಳಿಯಾಗಿ ಬಳಸುತ್ತಾರೆ. ಅಕ್ಕಸಾಲೆಯವರು ಕಾಯಿಯ ಕಷಾಯಕ್ಕೆ ಉಪ್ಪು ನೀರು ಬೆರಸಿ, ಅದರಿಂದ ಒಪ್ಪೆ ಹಾಕುತ್ತಾರೆ. ಬೀಜದ ಪುಡಿಗೆ ಗ್ಲೂ ಎಂಬ ವಜ್ರಸರಿ ಕೂಡಿಸಿದರೆ, ಮರದ ಸಣ್ಣ ಸಾಮಾನು ಜೋಡಿಸುವದಕ್ಕೆ ಒಳ್ಳೇ ಅಂಟಾಗುತ್ತದೆ.

**Tamarindus indica,** *Lin.*—T. occidentalis, *Gært.*—T. officinalis, *Hook.*—(Order Leguminosæ.)

*Tam.* Puḷiya-maram, indam, mugini. *Tel.* Čintačeṭṭu. *Can.* Huṇisē, huḷi-mara. *Tu.* Punke-mara. *Mal.* Āmlam, čińča, puḷi, tindiḍam, madhurapuḷi. *Kon.* Čīńča, čińčerūku. *Hin.* Amblī. *San.* Tintṛiṇī, āmlavṛiksha, čińča, šuktam.

## 513. ಹುರುಳಿ ಗಿಡ (Horse Gram).

ತ. ಕೊಳ್ಳು. ತೆ. ಉಲವಲು. ತು. ಕುಡು. ಮ. ಕೊಳ್ಳು, ಮುತಿರ. ಕೊಂ. ಕುಳಿತು. ಹಿಂ. ಕುಲ್ಥಿ. ಸಂ. ಖಲಕುಲ, ಕುಲಸ್ಥ.

**ಹುಟ್ಟು:** ಗದ್ದೆಗಳು. **ಪುಷ್ಪ:** ಕಾರ್ತಿಕ, ಮಾರ್ಗಶಿರ.

**ಉಪಯೋಗ:** ಔಷ: ಈ ಧಾನ್ಯದ ಕಷಾಯವನ್ನು ಎಳ್ಳೆಣ್ಣೆ ಸಂಗಡ ಕಾಸಿ ವಾತರೋಗಕ್ಕೂ ತಣಸಿಗೂ ಹಚ್ಚಬಹುದು. ನಂಜುರೋಗಗಳಲ್ಲಿ ಇದರ ಸಾರನ್ನು ಪಥ್ಯವಾಗಿ ಪ್ರಯೋಗಿಸುತ್ತಾರೆ. ಸಾಧಾ: ಧಾನ್ಯ ಮನುಷ್ಯರಿಗೂ ಕುದುರೆ ಎತ್ತುಗಳಿಗೂ ಆಹಾರ.

**Dolichos biflorus,** *Lin.*—D. uniflorus, *Lam.*—(Order Leguminosæ.)

*Tam.* Koḷḷu. *Tel.* Ulavalu. *Can.* Huruḷi-giḍa. *Tu.* Kuḍu. *Mal.* Koḷḷu, mutira. *Kon.* Kuḷitu. *Hin.* Kulti. *San.* Khalakula, kulastha.

### 514. ಹುಳುಗಳಗು, ಹುಲುಗಿಲು, ಹುಳುಗಿಲ ಹುಲ್ಲು.

ಸಂ. ಕಠಿಲ್ಲಕ.

ಹುಟ್ಟು: ಸಾಧಾರಣ. ಪುಷ್ಪ: ಭಾದ್ರಪದದಿಂದ ಮಾಘದ ವರೆಗೆ.

ಉಪಯೋಗ: ಔಷ: ಚಿಗುರುಗಳನ್ನು ಕುಟ್ಟಿ ಜೇರಿಗೆ ಕೂಡಿಸಿ ಉರಿಗಣ್ಣಿಗೆ ಹಿಂಡುತ್ತಾರೆ. ಸಾಧಾ: ಚಾಪೆ ಮುಂತಾದ ಕೆಲಸಕ್ಕೆ ಆಗುತ್ತದೆ; ನಾರು ಉಂಟು.

**Arundo Donax,** *Lin.*—(?) (Order Gramineæ.)

*Can.* Huḷugaḷagu, hulugilu, huḷugila-hullu. *San.* Kaṭhillaka.

### 515. ಹೆಚ್ಚುಲಿ ಹುಲ್ಲು.

ಹುಟ್ಟು: ನೆಟ್ಟು ಬೆಳಿಸುವದು. ಪುಷ್ಪ: ಆಷಾಢದಿಂದ ಭಾದ್ರಪದದ ವರೆಗೆ.

ಉಪಯೋಗ: ಸಾಧಾ: ಇದೊಂದು ತರದ ರಾಗಿ. ಇದರ ಹುಟ್ಟುವಳಿ ಒಳ್ಳೇ ಭೂಮಿಯಲ್ಲಿ ಐನೂರು ಪಾಲಷ್ಟರ ವರೆಗೆ ಆಗುವದು.

**Eleusine indica,** *Gært.*—E. distachya, *Trin.*—E. gracilis, *Salisb.*—Cynosurus indicus, *Lin.*—(Order Gramineæ.)

*Can.* Heččuli-hullu.

### 516. ಹೆಬ್ಬಲಸಿನ ಮರ (Jungle Jack Tree).

ತ. ಅಂಜಲ್ಲಿ, ಆಯಿನಿ, ಕಾಟ್‌ಪಿಲಾ. ತೆ. ಕಾಟಪನಸಚೆಟ್ಟು. ತು. ಪೆಜ. ಮ. ಆಯಿನಿ, ಆಞಿಲಿ, ಕಾಟ್‌ಪಿಲಾವ್. ಕೊಂ. ಪಾಚ್ಪಣಸಾರೂಕು. ಮಹಾ. ಪಾತ್‌ಪಣಸ್.

ಹುಟ್ಟು: ಮಲಬಾರತೀರದ ಕಾಡುಗಳು. ಪುಷ್ಪ: ಮಾಘ, ಫಾಲ್ಗುಣ.

ಉಪಯೋಗ: ಔಷ: ಒಣ ಎಲೆಗಳ ಪುಡಿ ಬಿಸಿ ಮಾಡಿ, ಸಂದುನೋವಿಗೂ ಇತರ ನೋವಿಗೂ ಕಟ್ಟಬಹುದು. ಸಾಧಾ: ಕಾಯಿಯನ್ನು ಉಪ್ಪಿಗೆ ಹಾಕುವರು; ಹಣ್ಣು ತಿನ್ನುವರು; ಮರ ಕೆಲಸಕ್ಕೆ ಒಳ್ಳೇದು; ಚೆಕ್ಕೆ ಬಣ್ಣಕ್ಕೆ ಆಗುತ್ತದೆ. ಸರಕಾರದ ಅಪ್ಪಣೆ ಏನಹ ಮರವನ್ನು ಕಡಿಯಕೂಡದು.

**Artocarpus hirsuta,** *Lam.*—A. pubescens, *Willd.*—(Order Urticaceæ.)

*Tam.* Añjalli, āyini, kāṭpilā. *Tel.* Kāṭapanasa-ceṭṭu. *Can.* Hebbalasina-mara. *Tu.* Peja. *Mal.* Āyini, āñili, kāṭṭupilāvụ. *Kon.* Pāčpaṇasārūku. *Mah.* Pātpaṇas.

### 517. ಹೆಮ್ಮರ.

ತ., ಮ. ಪೆರುಮರಮ್. ಸಂ. ಅರಲು, ಮಹಾನಿಂಬ, ಅತಿಸಾರಹಿತಾ, ಪಿಶಾಚವೃಕ್ಷ.

**ಹುಟ್ಟು**: ಮಲಬಾರತೀರ, ತಿರುವಂಕೋಡು.

**ಉಪಯೋಗ**: ಔಷ: ಚೆಕ್ಕೆ ಅಜೀರ್ಣ ಹರ; ಅದು ಬಲ ಕೊಡುವಂಥಾದ್ದು, ಜ್ವರಕ್ಕೆ ಸಹ ಆಗುತ್ತದೆ. ಅಂಟನ್ನು ಹುಡಿ ಮಾಡಿ ಹಾಲಿನಲ್ಲಿ ಕುಡಿದರೆ, ಅತಿಸಾರಕ್ಕೂ ಅಶಕ್ತಿಗೂ ಕಫೋದ್ರೇಕಕ್ಕೂ ಒಳ್ಳೇದು. ಹಣ್ಣು ಅಕ್ಕಚ್ಚಿಯಲ್ಲಿ ತೇದು, ಕಣ್ಣುರೋಗಕ್ಕೆ ಹಚ್ಚುವರು. ಸಾಧಾ: ಶುದ್ಧ ಮಾಡಿದ ಅಂಟು ಕೆಲಸಕ್ಕೆ ಬರುತ್ತದೆ; ಅದಕ್ಕೆ ಪರಿಮಳವದೆ.

**Ailantus malabarica**, *Dec.*—(Order Simarubeæ.)

*Tam.*, *Mal.* Perumaram. *Can.* Hemmara. *San.* Aralu, mahānimba, atisāra-hitā, piśāčavriksha.

### 518. ಹೊಂಗರ, ಹಂಗರಕ, ಪೊಂಗರ, ಹಾಲಿವಾನ, ವಾರ್ಜೀಪೆ ಮರ (Indian Coral Tree).

ತ. ಕಲಿಯಾಣಮುರುಕ್ಕು, ಚವುಚಯಮ್, ಮುರುಕ್ಕುಮರಮ್, ಮುಣ್ಮುರುಕ್ಕು. ತೆ. ಬಾಡಿಸೆಚೆಟ್ಟು, ಮುಚ್ಚಿಕರ್ರ. ತು. ಪೊಂಗರೆದ ಮರ. ಮ. ಮುಳ್ಳುಮುರಿಕ, ಮಂದಾರಮ್. ಕೊಂ. ಪಂಗಿರೊ.

**ಹುಟ್ಟು**: ಪಶ್ಚಿಮ ಪೂರ್ವ ತೀರಗಳು, ಬಂಗಾಳ. **ಪುಷ್ಪ**: ಪುಷ್ಯದಿಂದ ಚೈತ್ರದ ವರೆಗೆ.

**ಉಪಯೋಗ**: ಔಷ: ಎಲೆ ಮತ್ತು ಚೆಕ್ಕೆ ಜ್ವರಕ್ಕೂ ಮಕ್ಕಳ ಚವಿಗೂ, ಎಲೆಗಳು ಶೂಲರೋಗಕ್ಕೂ ಸಂದುಗಳ ನೋವಿಗೂ ರಕ್ತಾತಿಸಾರದಲ್ಲಿಯೂ ಉಪಯೋಗ. ಸಾಧಾ: ಬಿಳೆ ಮತ್ತು ಕೆಂಪು ಹೂವಿನ ಹೊಂಗರ, ಮುಳ್ಳಿಲ್ಲದ ಹೊಂಗರ ಎಂದು ಮೂರು ತರ ಉಂಟು. ಮರದಲ್ಲಿ ವೀಳ್ಯ, ದುಂಡುಮಲ್ಲಿಗೆ ಮತ್ತು ಕರಿಮೆಣಸು ಬಳ್ಳಿಗಳನ್ನು ಹಬ್ಬಿಸುತ್ತಾರೆ; ಬೇಲಿಗಳಿಗೆ ಒಳ್ಳೇದು.

**Erythrina indica**, *Lam.*—E. corallodendron, *Lour.*—(Order Leguminosæ.)

*Tam.* Kaliyāṇamurukku, čavučayam, murukkumaram, muṇmurukku. *Tel.* Bāḍisečeṭṭu, muččikarra. *Can.* Hoṅgara, haṅgaraka, poṅgara, hālivāna, vārjīpe-mara. *Tu.* Poṅgareda-mara. *Mal.* Muḷḷumurika, mandāram. *Kon.* Paṅgiro.

### 519. ಹೊಂಗೆ, ಕರಂಜ, ಹುಲಿಗಿಲಿ ಮರ (Indian Beech).

ತ. ಪುಂಗಮರಮ್. ತೆ. ಕಾನಗು, ಕ್ರಾನುಗು, ಕ್ರೋವಿಚೆಟ್ಟು. ತು. ಕೊಂಗುರ್, ಕೊರೆಂಗ್, ಪುಂಗು. ಮ. ಪೊಂಬಮ್, ಪೂಪು. ಕೊಂ. ಕರಿಂಜೆರೂಕು. ಹಿಂ. ಕೊರಂಗ್. ಸಂ. ಕರಂಜ, ಧನವೃಕ್ಷ, ಪೂತಿಕರಂಜ, ಹಸ್ತಿಜ, ಮಾತೃವೃಕ್ಷ.

**ಹುಟ್ಟು**: ಪಶ್ಚಿಮ ಪೂರ್ವ ತೀರಗಳೂ ಬಂಗಾಳವೂ. **ಪುಷ್ಪ**: ಚೈತ್ರ, ವೈಶಾಖ.

ಉಪಯೋಗ: ಔಷ: ಬೀಜದ ಎಣ್ಣೆ ಬೇರೆ ಬೇರೆ ತರದ ನಂಜಿಗೆ ಬಹು ಒಳ್ಳೇದು; ವಾತಕ್ಕೂ ಆಗುತ್ತದೆ; ಬೇರು ವ್ರಣಗಳಿಗೆ ಔಷಧ. ವಾತರೋಗಿಗಳು ಎಲೆಗಳ ಕಷಾಯ ದಲ್ಲಿ ಮಿಾಯುವದು ಒಳ್ಳೇದು. ಸಾಧಾ: ಮರ ಕೆಲಸಕ್ಕೆ ಬರುತ್ತದೆ. ಎಣ್ಣೆ ದೀಪಕ್ಕೆ ಹಾಕುತ್ತಾರೆ. ಎಲೆಗಳು ದನಕ್ಕೆ ಆಹಾರ ಮತ್ತು ನೆಟ್ಟ ಕಬ್ಬಿಗೆ ಒಳ್ಳೇ ಗೊಬ್ಬರ.

**Pongamia glabra,** *Vent.*—Dalbergia arborea, *Willd.*—Gadelupa indica, *Lam.*—G. arborea, *Roxb.*—Robinia mitis, *Lin.*—(Order Leguminosæ.)

*Tam.* Puṅgamaram. *Tel.* Kānagu, krānugu, krōvičeṭṭu. *Can.* Hoṅge, karañja, huligili-mara. *Tu.* Koriṅgu, koreṅgi, puṅgu. *Mal.* Poṅṅam, pūṅu. *Kon.* Kariñjerūku. *Hin.* Karaṅgu. *San.* Karañja, dhanavṛiksha, pūtikarañja, hastija, mātṛivṛiksha.

## 520. ಹೊಗೆಸೊಪ್ಪು (Tobacco).

ತ. ಪುಗೈಯಿಲೈ. ತೆ. ಪೊಗಾಕು. ತು. ಪುಗೆರೆ. ಮ. ಪುಕಯಿಲ, ಕಳಂಜಮ್. ಕೊಂ. ಧುರಾ ಪಾನ. ಹಿಂ. ತಂಬಾಕು.

ಹುಟ್ಟು: ಹೆಚ್ಚಾಗಿ ದಕ್ಷಿಣದಲ್ಲಿ ನೆಟ್ಟು ಬೆಳಿಸುತ್ತಾರೆ.

ಉಪಯೋಗ: ಔಷ: ಇದರ ರಸಕ್ಕೆ ಬದಲಾವಣೆ ಮತ್ತು ಸೆಳವು ನಿವಾರಕ ಗುಣವುಂಟು; ಬೀಗಿಗೂ ವಾತದ ನೋವಿಗೂ ನಂಜಿಗೂ ಆಗುತ್ತದೆ. ಕಿವಿನೋವಿಗೆ ಸೊಪ್ಪು ಹಾಕಿ ಕಾಸಿದ ಎಣ್ಣೆ ಮೂರು ನಾಲ್ಕು ಬಿಂದುಗಳನ್ನು ಕಿವಿಯಲ್ಲಿ ಬಿಡುವರು; ಅದನ್ನು ದನಗಳ ಗೊರಸೆಯಲ್ಲಿ ಉಂಟಾಗುವ ಹುಳಕ್ಕೆ ಸಹ ಹಚ್ಚುವರು. ಸಾಧಾ: ನಸ್ಯಕ್ಕೂ ಬತ್ತಿ ಮಾಡಿ ಸೇದುವದಕ್ಕೂ ಉಪಯೋಗ. ಕೆಲವರು ವೀಳ್ಯದ ಸಂಗಡ ಜಗಿಯುವದು.

**Nicotiana Tabacum,** *Lin.*—(Order Solanaceæ.)

*Tam.* Pugaiyilai. *Tel.* Pogāku. *Can.* Hogesoppu. *Tu.* Pugere. *Mal.* Pukayila, kaḷañjam. *Kon.* Dhurāpāna. *Hin.* Tambāku.

## 521. ಹೊನಗನ ಸೊಪ್ಪು.

ತ. ಪೊನ್ನಾಂಕಣ್ಣೆ, ಚಿದಪ್ಪೂರಮ್, ಚಾನಕಿ. ಮ. ಪೊನ್ನಾಂಕಣ್ಣಿ. ಕೊಂ. ಹೊನಗನ್ನಿ. ಸಂ. ಪರಾಗ ಪತ್ತೂರ.

ಹುಟ್ಟು: ತಂಪು ಸ್ಥಳಗಳು. ಪುಷ್ಪ: ಆಷಾಢ, ಶ್ರಾವಣ.

ಉಪಯೋಗ: ಔಷ: ಈ ಗಿಡದ ರಸದ ಸಂಗಡ ಎಣ್ಣೆ ಕಾಸಿ ತಲೆಗೆ ಹಚ್ಚಿದರೆ, ಕಣ್ಣಿಗೂ ಉತ್ತಮ ನಿದ್ರೆ ಬರಲಿಕ್ಕೂ ಒಳ್ಳೇದು; ಮುಖ್ಯವಾಗಿ ಪಿತ್ತರೋಗಿಗಳಿಗೆ ಗುಣ ಕರ. ಮಲಬಾರದಲ್ಲಿ ಗಾಯಗಳಿಗೂ ಉಪಯೋಗಿಸುತ್ತಾರೆ. ಸಾಧಾ: ಒಳ್ಳೇ ಪಲ್ಯ.

**Alternanthera sessilis,** *Br.*—A. denticulata, *Wall.*—A. prostrata, *Don.*—Achyranthes triandra, *Roxb.*—(Order Amarantaceæ.)

*Tam.* Ponnāṅkaṇṇi, čidappūram, jānaki. *Can.* Honagana-soppu. *Mal.* Ponnāṅkaṇṇi. *Kon.* Honaganni. *San.* Parāgapattūra.

## 522. ಹೊನ್ನೆ, ಪುನ್ನಾಗ, ಮುನ್ನಾಗ, ಪುರುಷಸ್ತುಂಗ, ಕುಂಕುಮದ ಮರ (Kamaladye Tree).

ತ. ಕಾಮಲ, ಕಾಮಬೋಚಮ್. ತೆ. ಪುನ್ನಾಗಮು, ವಸಂತಗಂಧಮು, ತುಂಗವೃಕ್ಷಮು. ತು. ಪೊನ್ನೆದ ಮರ. ಮ. ಪುನ್ನ. ಕೊಂ. ಉಂಡಿರೂಕು. ಹಿಂ. ಕಮುಲ್. ಸಂ. ಮಧುಕ, ಪುನ್ನಾಮ, ವಿವೃದ್ಧ.

ಈ ಮರದಲ್ಲಿ ಗಂಡು ಹೆಣ್ಣು ಎಂಬ ಎರಡು ವಿಧ ಉಂಟು.

ಉಪಯೋಗ: ಔಷ: ಕಾಯಿಯ ಮೇಲಿನ ಕೆಂಪು ಬಣ್ಣವು ಕ್ರಿಮಿರೋಗ ಕಣ್ಣುರೋಗಗಳಲ್ಲಿ ಉಪಯೋಗ. ಎಳತು ಕಾಯಿಗಳನ್ನು ಜಜ್ಜಿ, ಜೇನು ಕೂಡಿಸಿ ಲೇಪಿಸಿದರೆ, ಜಂತುಗಳ ವಿಷ ಹರ. ಸಾಧಾ: ಕಾಯಿಯ ಮೇಲಿನ ಕೆಂಪು ರೇಶ್ಮಿಗೆ ಬಣ್ಣ ಕೊಡುವದಕ್ಕೆ ಬಹು ಉಪಯೋಗವುಳ್ಳದ್ದು. ಕಾಯಿಯಿಂದ ಎಣ್ಣೆ ಮಾಡುವದುಂಟು.

**Mallotus philippinensis,** *Müll.*—Rottlera tinctoria, *Roxb.*—(Order Euphorbiaceæ.)

*Tam.* Kāmala, kāmabōčam. *Tel.* Punnāgamu, vasantagandhamu, tuṅga-vṛikshamu. *Can.* Honne, punnāga, munnāga, purushastuṅga, kuṅkumada-mara. *Tu.* Ponneda-mara. *Mal.* Punna. *Kon.* Uṇḍirūku. *Hin.* Kamul. *San.* Madhuka, punnāma, vivṛiddha.

## 523. ಹೊಳೆಚುಳ್ಳಿ (Holly-leaved Acanthus or Bears Breech).

ತ. ಕಳುತ್ತೈಮುಳ್ಳಿ. ತು. ತುದೆಚುಳ್ಳಿ. ಮ. ಪಯಿಣಾಚುಳ್ಳಿ.

ಹುಟ್ಟು: ನೀರುಳ್ಳ ಸ್ಥಳಗಳು. ಪುಷ್ಪ: ಸ್ವಲ್ಪ ಕಡಿಮೆ ಇಡೀ ವರುಷ.

ಉಪಯೋಗ: ಔಷ: ಎಲೆಗಳು ವಿಷಹರ. ಬೇರಿನ ಕಷಾಯದ ಗಂಡೂಷ ಹಲ್ಲುನೋವಿಗೂ ಬಾಯಿೂ ಅಗ್ರಕ್ಕೂ ಆಗುತ್ತದೆ. ಸಾಧಾ: ಅದನ್ನು ಗುದ್ದಿ ಕೋಣಗಳಿಗೆ ಹಾಕುತ್ತಾರೆ.

**Acanthus ilicifolius,** *Lin.*—Dilivaria ilicifolia, *Nees.*—(Order Acanthaceæ.)
*Tam.* Kaḷutaimuḷḷi. *Can.* Hoḷečuḷḷi. *Tu.* Tudečuḷḷi. *Mal.* Payiṇāčuḷḷi.

# ವೃಕ್ಷಾದಿಗಳ ಉಪಯೋಗದ ಪಟ್ಟಿ.

## I. ಪಿಷ್ಟವುಳ್ಳ ವನಸ್ಪತಿಗಳು (Farinaceous Plants).

ಕೆಲವು ವನಸ್ಪತಿಗಳ ಬೀಜ ಗಡ್ಡೆ ದಂಟುಗಳಲ್ಲಿ ಪಿಷ್ಟ ಎಂಬ ಪದಾರ್ಥ ಸಿಕ್ಕುತ್ತದೆ. ಇದನ್ನು ಸಾಧಾರಣ ವಾಗಿ ಬೀಸಿ ಹಿಟ್ಟು ಮಾಡಿ ಮನುಷ್ಯರ ಆಹಾರಕ್ಕೆ ಉಪಯೋಗಿಸುತ್ತಾರೆ.

1. **ತೃಣಗಳು** (Cereals):—ಅಕ್ಕಿ 5, ಗೋಧಿ 211, ಬಿಳೇ ಜೋಳ 359, ಹಿಡಿ ಜೋಳ 505, ರಾಗಿ 424, ಜವೆಗೋದಿ 232, ಹೆಜ್ಜುಲಿ 515.

2. **ಶಿಂಬೆಗಳೂ ಕಾಯಿಗಳೂ** (Pulses):—ಕಡಲೆ 76, ಹೆಸರು 308, ಉದ್ದು 51, ಹುರುಳಿ 513, ಅವರೆ 27, ತೊಗರಿ 254, ನೆಲಕಡಲೆ 292, ಪಚ್ಚೆ ಹೆಸರು 308, ಬಟಾಣಿ 339, ಬಾಳೆಕಾಯಿ 349, ಮಾವಿನ ಹಣ್ಣಿನ ಬೀಜ 405.

3. **ಗಡ್ಡೆ ಗೆಣಸುಗಳೂ ದಂಟುಗಳೂ**:—ಆಲುಗಡ್ಡೆ 53, ಸೀಗೆಣಸು 473, ತೂನಗೆಣಸು 207, ಕುಂಟಗೆಣಸು 207, ದುಪ್ಪೆಗೆಣಸು 207, ಕಣಗಲಗಡ್ಡೆ 78, ಕೂವೆ 163, ಕೆಂಪು ಕೂವೆ 166, ಮರಸಣಿಗೆ 397, ಕೆಸು 176, ಕೆನ್ನೈದಿಲೆ 173, ಸೂರಣಗಡ್ಡೆ 481, ಅರಸಿನ 21, ಸಾಲಾಮಿಸ್ರಿ 471, ಬೈನಿ ಮರ 376, ತಾಳೀ ಮರ 244, ಶ್ರೀತಾಳಿ 454.

## II. ಹಣ್ಣುಹಂಪಲಗಳು (Fruits).

ಮಾವು 405, ಪೇರಳೆ 212, ಬಾಳೆ 349, ನೇರಲೆ 306, ಕೆಂಪು ಜಂಬುನೇರಲು 168, ಜಂಬುನೇರಲು 231, ಕಿತ್ತಳೆ 147, ಚಕೋತ್ರ 256, ಹಲಸು 495, ಹೆಬ್ಬಲಸು 516, ಪೊಪ್ಪಾಯ 312, ಅನಾಸು 15, ಸೀತಾಫಲ 474, ಕಲ್ಲಂಗಡಿ (ಬಚ್ಚಂಗಾಯಿ) 336, ದಾಳಿಂಬೆ 264, ಕುಂಟಾಲ 165, ಕಿಸ್ಗಾರ 175, ಬೊಗರಿ 379, ಬೊಂಡುಳ 378, ಗುಡ್ಡಪನ್ನೇರಳು 202, ಗೇರು 208, ಚಪ್ಪರಬದನೆ 75, ಮಣ್ಣಡಿಕೆ 389, ರಾಮಫಲ 425, ಮುಳ್ಳುರಾಮಫಲ 474, ತೆಂಗು 251, ಕರ್ಜೂರ, ಅಂಜೂರ.

## III. ಬೇಯಿಸಿ ಉಪಯೋಗಿಸುವ ಪದಾರ್ಥಗಳು (Table Vegetables).

1. **ಗಡ್ಡೆ ಗೆಣಸುಗಳು**:—ಆಲುಗಡ್ಡೆ 53, ಸೀಗೆಣಸು 473, ಕಾಡಕೆಸು 115, ಕೆಸು 176, ಮರಸಣಿಗೆ 397, ಸೂರಣ ಗಡ್ಡೆ 481, ಕಣಗಲ 78, ಗಂಡೀರ 187, ಕುಂಟಗೆಣಸು 207, ತೂನಗೆಣಸು, ಮುಳ್ಳುಗೆಣಸು, ದುಪ್ಪೆಗೆಣಸು 207, ನೀರುಳ್ಳಿ 287, ಬೆಳ್ಳುಳ್ಳಿ 272.

**2. ಕಾಯಿಪಲ್ಯ**:—ತೆಂಗು 251, ಸೌತೆ 488, ಮುಳ್ಳುಸೌತೆ 413, ಹೀರೆ 511, ಸೋರೆ 105, ತೊಂಡೆ 253, ಪಡವಲ 309, ಹಾಗಲಕಾಯಿ 499, ಕುಂಬಳಕಾಯಿ 159, ಬೂದಿಕುಂಬಳ 356, ಹಿರಿಮೆಕ್ಕೆ 509, ಕೆಕ್ಕರಿಕೆ 509, ಶೀದೊಂಡೆ 448, ಮಾಡ ಹಾಗಲ 403, ಅಲಸಂದಿ 242, ಅವರೆ 27, ಕಡಲೆ 76, ಆವರೆ 38, ತೊಗರಿ 254, ನೆಲಕಡಲೆ 292, ಬಟಾಣಿ 339, ನುಗ್ಗೆ 290, ಅಗಸೆ 6, ಶಂಬೆ 443, ಚಪ್ಪರದವರೆ 217, ಬೆಂಡೆಕಾಯಿ 366, ಪುಂಡಿಸೊಪ್ಪು 321, ಬದನೆ 341, ಕಿರಿಗುಳ್ಳ 149, ಹರಿವೆ 494, ಮುಳ್ಳುಹರಿವೆ 414, ಕೀಳುಹರಿವೆ 157, ಬಸಳೆ 346, ಕೆಸು 176, ಕಾಡುಕೆಸು 115, ಹೊನಗನ 321, ಒಂದೆಲಗ 62, ದೀವಿ ಹಲಸು 266, ಏರುಂಬಳ್ಳಿ 60, ಕಲ್ಲಟ್ಟೆ 101, ಕಾಸಮರ್ದ 144, ಕೀರಕಸಾಲೆ 148.

## IV. ಸಂಬಾರಜೀನಸು, ಉಪ್ಪಿನಕಾಯಿ, ಹುಳಿ (Spices, Pickles, etc.).

1. **ಸಂಬಾರಜೀನಸು**:—ಏಲಕ್ಕಿ 61, ಶುಂಠಿ 452, ಸಾಸಿವೆ 472, ಕೆಂಪು ಮೆಣಸು 330, ಒಳ್ಳೇ ಮೆಣಸು 64, ದಾಲ್ಚಿನಿ 262, ಕಾಡುದಾಲ್ಚಿನಿ 128, ಲಿಂಬೆ 430, ಜೀರಿಗೆ 239, ಕೊತ್ತುಂಬರಿ 181, ಮೆಂತೆ 416, ಕಸಕಸೆ 102, ಅರಸಿನ 21, ಕುಂಕುಮ 158, ಜಾಜಿಕಾಯಿ 233, ಬಜೆ 338, ಸೋಪು 486, ಹಿಪ್ಪಲಿ 507, ಸಬ್ಬಸಿಗೆ 467.

2. **ಉಪ್ಪಿನಕಾಯಿ**:—ಮಾವಿನ ಮಿಡಿ 405, ಅಂಬಟೆ 4, ಅತ್ತಿ 14, ಮಣ್ಣಡಿಕೆ 389, ಬಿಲಿಂಬಿ 352, ದಾರೆಹುಳಿ 261, ಲಿಂಬೆ 430, ವಾಟೆಹುಳಿ 433, ಕೊರಿಂಡ 87, ನೆಲ್ಲಿ 305, ಪಪ್ಪಾಯ 312, ತೊಂಡೆ 253, ಬಾಳೆಯ ಬಂಬು 349, ಬಿದುರಿನ ಕಣಿಲೆ 189, ಕಲ್ಲುಶುಂಠಿ 8, ಕರಿನೆಲ್ಲಿ 95, ಕಲ್ಲಟ್ಟೆ 101, ಕಾಡಹಾಕುಕಾರೆ 121, ಹಲಸಿನ ಕಾಯಿ 495, ಶೀಬಾರಿಬೇರು 449.

3. **ಹುಳಿ**:—ಹುಣಿಸೆ 512, ದಾರೆಹುಳಿ 261, ಪುಂಡಿಸೊಪ್ಪು 321, ಕೊರಿಂಡ 87, ಲಿಂಬೆ 430, ಬಿಲಿಂಬಿ 352, ವಾಟೆಹುಳಿ 433, ಚಕುಲಿ 215, ಚಕೋತ್ರ 256, ಪುಳ್ಳಂಪುಣಿಸೆ 285, ಮಗಿವಾವಿನ ಎಲೆ 386, ಮುರ್ಗಿನಹುಳಿ 410, ಜಾರಿಗೆಹುಳಿ 237, ಮಾದಳ 404.

4. **ಚಟ್ಣಿ**:—ತೆಂಗಿನ ಕಾಯಿ 251, ಒಂದೆಲಗ 62, ಕಣೇರಿ 80, ಗಣಜಿಲು 192, ದೊಡ್ಡಪತ್ರೆ 271, ಕೆಂಪು ಮೆಣಸು 330, ಬಿಳೇ ಗಣಜಲಿ 357, ಪುಳ್ಳಂಪುಣಿಸೆ 285, ಮೆಂತೆ 416, ಸುದಾಬು 478, ಮೂಲಂಗಿ 415, ಹಾಲುಹಕ್ಕರಿಗೆ 501, ಸಂದುಬಳ್ಳಿ 456.

## V. ಪಾನಕಗಳು, ಸಾರುಗಳು.

ಕಾಫಿ 138, ಚಾ 220, ಶಿಯಾಳ 251, ಮಿರ (ತಾಳಿ 244, ತೆಂಗು 251), ಗೋಧಿ 211, ಅಕ್ಕಿ 5, ಜೀರಿಗೆ 239, ಕುಂಟಾಲದ ಚಿಗುರು 165, ಕೊತ್ತುಂಬರಿ 181, ಬೇಲದ ಹಣ್ಣು 373, ಇಪ್ಪೆ ಮರದ ಹೂವೂ ಚೆಕ್ಕೆಯೂ 43, ಕಡಲೆ 76, ಕಣೇರಿ 80,

ಕಬ್ಬು 84, ಗರಿಕೆಹುಲ್ಲು 194, ಜವೆಗೋದಿ 232, ನೆಲನಾರಿಂಗ 296, ಬಚ್ಚಂಗಾಯಿ 336, ಮುರ್ಗಿನಹುಳಿ 410, ಸೋಮಲತೆ 487, ಹಿಡಿಜೋಳ 505.

## VI. ದನಗಳ ಆಹಾರ (Fodder Crops).

ಜೋಳದ ದಂಟು 359, ಬಿಳೀ ಹುಲ್ಲು 5, ಕೊನ್ನೆ (ಉದ್ದು 51, ಕಡಲೆ 76, ಹುರುಳಿ 513, ಅವರೆ 27, ನೆಲಕಡಲೆ 292, ಮುಂತಾದ ಧಾನ್ಯಗಳ ಸೊಪ್ಪುಗಳು), ಹಿಂಡಿ (ತೆಂಗು 251, ಎಳ್ಳು 55, ಹತ್ತಿಯ ಬೀಜ 491), ಗರಿಕೆಹುಲ್ಲು 194, ಹಲಸಿನ ಮರದ ಸೊಪ್ಪು 495, ಅಡುಂಬುಬಳ್ಳಿ 10, ಅತ್ತಿ ಮರದ ಸೊಪ್ಪು 14, ಇಂಪಿ 42, ಕಾಡು ತೊಗರಿ 127, ದರ್ಭೆಹುಲ್ಲು 161, ಶಿರೀಷ 445.

## VII. ಖಂಡಿ ಮರಗಳು (Timber Trees, etc.)

1. **ಮೋಪಿನ ಮರಗಳು** (Timber):—ತೇಗು 252, ಬನಪು 342, ಬೋವು 380, ಬೇಂಗ 492, ತಿರುವ 247, ಬೆಂಡೇಕು 367, ಮರುವ 399, ಮರುವಾಚಲ 400, ಹೊನ್ನೆ 479, ಕಿರಿಹೊನ್ನೆ 151, ಶ್ರೀಹೊನ್ನೆ 455, ತಾಳಿ 244, ತೆಂಗು 251, ಬೈನಿ 376, ಗೊರಜಿ 245, ಚಬುಕು 218, ನೇರಳೆ 306, ಇಪ್ಪೆ 43, ಶಾಂತಿ 243, ದದ್ದಾಲ 259, ಬಲಿಗೆ 344, ಕರಿಜಾಲಿ 89, ಪೇನಾರಿ 327, ಅಂಕೋಲೆ 1, ಉಡಿ 48, ಅಂದಿಪುನಾರು 3, ಧೂಪದ ಮರ 275, ಮಾವು 405, ಆಸು 39, ಉಡಿ 48, ಬೆಟ್ಟಹೊನ್ನೆ 307, ಕಲ್ಬಾಗಿ 335, ಬಿಳೀ ಜಾಲಿ 358, ಬಿಳೀ ಬೋವು 362, ಬೇವಿನ ಮರ 374, ಮಂಜೆಟ್ಟಿ ಮರ 385, ಮತ್ತಿ 390, ಮುಚ್ಚಿಲು 407, ಹಾಲೆ 502, ಹುಣಿಸೆ 512, ಹೆಬ್ಬಲಸು 516, ವಾಟೆಹುಳಿ 433, ಶಿಮ್ಮಬಾಗೆ 446, ಬಿದುರು 189.

2. **ಸಾಮಗ್ರಿಯ ಮರಗಳು** (Furniture and Cabinet Wood):—ರಕ್ತಚಂದನ 421, ಹಲಸು 495, ಬೀಟೆ 365, ತೇಗು 252, ಕರಿಮರ 97, ಗಂಧಗಿರಿ 268, ಬಿಳಿ ಗಂಧಗಿರಿ 354, ಕಾಚು 112, ಹೆಬ್ಬಲಸು 516, ಬೆಂಡೇಕ 367, ಬೇಂಗ 492, ಕಲ್ಬಾಗಿ 335, ಹುಣಿಸೆ 512, ಗಂಧ 453, ಸುರಹೊನ್ನೆ 479, ಸಂಪಿಗೆ 457, ಅಂಕೋಲೆ 1, ಕಾನಗಿನ ಮರ 137.

3. **ಶಿಲ್ಪಕ್ಕೆ ಬೇಕಾದ ಮರಗಳು** (Carving):—ಗಂಧ 453, ರಕ್ತಚಂದನ 421, ಅಗಿಲುಗಂಧ 7, ಕರಿಮರ 97, ಸಪ್ಪಂಗ 370.

4. **ಸೌದೆ** (Firewood):—ಹುಣಿಸೆ 512, ಕರ್ಮುರ 508, ಅಲಮರ್ 25, ಕಿರಿಹೊನ್ನೆ 152, ಇಪ್ಪೆ 43, ಕುಂಟಾಲ 165, ರೆಂಜೆ 334, ಬಂದ 333, ದಾಲ್ಚಿನಿ 262, ಕಾಡುದಾಲ್ಚಿನಿ 128, ಕಾಸರ್ಕ 145, ಮಾವು 405, ಧೂಪದ ಮರ 275, ಗೇರು 208, ಕೇರ 209, ಅತ್ತಿ 14, ಪಿಪ್ಪಲ 23, ಆಲ 36, ಕಿರುಗೋಳಿ 152, ಗರಗಸದ ಮರ 193, ಬಸುರಿ 347, ಅಂದಿಪುನಾರು 3, ಸಂಕೇಶ್ವರ 274, ದದ್ದಾಲ 259, ಉಪ್ಪಲಿಗೆ 52, ನೇರಳು 306.

## VIII. ನಾರುಗಳು (Fibres).

ಅನೇಕ ಗಿಡಗಳ ನಾರುಗಳಿಂದ ಬಟ್ಟೆ ನೇಯಲಿಕ್ಕೂ ಹಗ್ಗ ರಿಗ್ಗಗಳನ್ನು ಹೊಸೆಯುವದಕ್ಕೂ ಬೇಕಾದ ನಾರುಗಳು ದೊರಕುತ್ತವೆ. ಇಂಥ ನಾರುಗಳು ವಿಶೇಷವಾಗಿ ಗಿಡಗಳ ಚೆಕ್ಕೆಯ ಕೆಳಗೆ ಇರುತ್ತವೆ. ಆದರೆ ವನಸ್ಪತಿಗಳ ಎಲೆ ಕಾಯಿ ಬೀಜ ಮುಂತಾದವುಗಳ ರೋಮಗಳು ಸಹ ಈ ಉಪಯೋಗಕ್ಕೆ ಬೀಳುವವು.

1. **ದಂಟು ಚೆಕ್ಕೆಗಳ ನಾರು:**—ಅತಸಿ 13, ಚುಂಚಲ 228, ಬಂಗಿ 332, ಸಣಬು 460, ಫಿಂಡಿಸೊಪ್ಪು 331, ಪುಂಡಿಸೊಪ್ಪು 321, ಅಗಸೆ 6, ಉಗುರುಸುತ್ತು 47, ಉಡಿ 48, ಕೊರಿಂಡ 87, ಕಾಡುಕಸ್ತೂರಿ 125, ಕಿರುಹಾಲೆ 155, ಕಿಸಂಗಿ 156, ತುರಿಕೆ 250, ದದ್ದಾಲ 259, ಬಿಳೇಜಾಲಿ 358, ಬೆಂಡೆ 366, ಬೆಣ್ಣೆಗರುಗ 368, ಬೆತ್ತ 369, ಬೈನಿಮರ 376, ಮಗಿಮಾವು 386, ಮುತ್ತಗ 409.

2. **ಎಲೆ ಕಾಯಿಗಳ ನಾರು:**—ಕತ್ತಾಳಿ 81, ಆನೆಕತ್ತಾಳಿ 33, ಅನಾಸು 15, ಕೇದಗೆ 172, ಬಾಳೆ 349, ಕಾಡುಬಾಳೆ 129, ತೆಂಗು 251, ಮುಂಜಿ 406, ಸಣ್ಣ ಈಚಲ 461, ಮರುಗ 398, ಲೋಳಿಸರ 431.

3. **ಬೀಜಗಳ ರೋಮ:**—ಹತ್ತಿ 491, ಎಕ್ಕೆ 56, ಬೂರಗ 16, ಕರಿಹತ್ತಿ 100.

## IX. ತೈಲ ಜೀನಸುಗಳು (Oilseeds).

ಎಣ್ಣೆ ವಿಶೇಷವಾಗಿ ಕಾಯಿಗಳಲ್ಲಿಯೂ ಬೀಜಗಳಲ್ಲಿಯೂ ಉಂಟು.

ಎಳ್ಳು 55, ಅತಸಿ 13, ತೆಂಗು 251, ಸುರಹೊನ್ನೆ 479, ಕಸಕಸೆ 102, ಸೂರ್ಯಕಾಂತಿ 482, ಔಡ್ಲ 493, ಇಪ್ಪೆ 43, ಆಡಲುಹರಳು 30, ನೆಲಕಡಲೆ 292, ಗಂಧ 453, ಧೂಪದ ಮರ 275, ಹತ್ತಿಯ ಬೀಜ 491, ಬೂರಗ 16, ಪೇನಾರಿ 327, ಅರಡಾಳ 19, ನುಗ್ಗೆ 290, ಬಂಗಿ 332, ಇಂಗಳ 41, ಕಾಡೆಳ್ಳು 136, ಕಿರಿಹೊನ್ನೆ 151, ಕುಸುಂಬೆ 162, ಗೇರುಬೀಜದ ಸಿಪ್ಪೆ 208, ತೈಲದ ಮರ 257, ಫರೆಂಗಿ ಈಚಲ 329, ರೆಂಜೆ 334, ಬೇವಿನ ಮರ 374, ಮುರ್ಗಿನಹುಳಿ ಬೀಜ 410, ಮರದ ಎಣ್ಣೆಯ ಮರ 394, ಮಡಿವಾಳ 408, ಮುಳ್ಳುಸೌತೆಯ ಬೀಜ 413, ವಳಾಗ್ರದ ಕಾಯಿ 432, ಹಾವುಮೆಕ್ಕೆಯ ಬೀಜ 503, ಹೊಂಗೆ 519, ಸಂಬ್ರಾಣಿ 459.

## X. ಮೇಣಗಳು (Gum and Resins).

ಅನೇಕ ಗಿಡ ಮರಗಳ ತೊಪ್ಪೆಯಿಂದ ಮೇಣ ಸೋರುತ್ತದೆ. ಇದನ್ನು ಅಂಟಿಗೂ, ರಬ್ಬರಿಗೂ, ಮೆರಗೆಣ್ಣೆಗೂ ಅರಗಿಗೂ ಉಪಯೋಗಿಸುತ್ತಾರೆ.

ಕರಿಜಾಲಿ 89, ಶಿರೀಷ 445, ಬೂರಗ 16, ಅಂಬಟೆ 4, ಉಪ್ಪಲಿಗೆ 52, ಗೇರು 208, ಗುಗ್ಗುಲ 199, ಕಗ್ಗಲಿ 71, ಗುಲಗಂಜಿ 204, ಚಾರಿಗೆಹುಳಿ 237, ದಿಕ್ಕಾಮಲ್ಲಿ 265, ಬಂದ 333, ಬಿಕ್ಕೆ 350, ಬಿಳೇಬೋವು 362, ಬೊಗರಿ 379, ಸುರಹೊನ್ನೆ 479, ಬೇಂಗ 492, ಹೆಮ್ಮರ 517, (ಗೋಧಿ, ಅಕ್ಕಿ, ಉದ್ದು ಮುಂತಾದ ಧಾನ್ಯಗಳ ಹಿಟ್ಟಿನಿಂದಲೂ ಅಂಟು ಮಾಡುವರು); ರಬ್ಬರಿನ ಮರ 423, ರಾಳದ ಮರ 39, ಬೇಲ 373, ಧೂಪದ ಮರ 275, ವಿಶೇಷ ಧೂಪ 436.

## XI. ಪರಿಮಳದ ವೃಕ್ಷಾದಿಗಳು (Volatile Oils).

ಹೆಚ್ಚು ಗಿಡ ಮರಗಳ ಹೂವು ಎಲೆ ಚೆಕ್ಕೆ ಬೇರುಗಳಲ್ಲಿ ಒಂದು ನಯವಾದ ಎಣ್ಣೆ ಇರುತ್ತದೆ. ಈ ಎಣ್ಣೆ ಸಾಧಾರಣವಾಗಿ ಪರಿಮಳವುಳ್ಳದ್ದು.

1. **ಹೂವುಗಳು**:— ಮಲ್ಲಿಗೆ 401, ಕಚ್ಚೂರ 73, ಕರಿಜಾಲಿ 89, ಕಸ್ತೂರಿ ಮಲ್ಲಿಗೆ 103, ಕಾಡುಸಂಪಿಗೆ 133, ಕೇದಗೆ 172, ಗುಲಾಬಿ 205, ಜಾಜಿಮಲ್ಲಿಗೆ 234, ನಾಗಸಂಪಿಗೆ 280, ಪನ್ನೇರಳು 311, ರೆಂಜೆ 334.

2. **ಗಡ್ಡೆ ಬೇರುಗಳು**:—ಮುಡಿವಾಳ 408, ಕರಿಲಾವಂಚ 99, ಕೊರನಾರಿಗಡ್ಡೆ 182, ಕಚ್ಚೂರ 73, ಸುಗಂಧಮುಸ್ತೆ 476, ಸುಗಂಧಿಬಳ್ಳಿ 477.

3. **ಚೆಕ್ಕೆ ಮರಗಳು**:—ಗುಗ್ಗುಲ 199, ದಾಲ್ಚಿನಿ 262, ಧೂಪದ ಮರ 275, ಗಂಧ 453, ರಕ್ತಚಂದನ 421, ದೇವದಾರು 268.

4. **ಎಲೆ ಕಾಯಿಗಳು**:—ಏಲಕ್ಕಿ 61, ಕಾಡುಕಸ್ತೂರಿ 125, ಸುದಾಬು 478.

## XII. ವರ್ಣಕ್ಕೆ ಉಪಯೋಗಿಸುವ ವೃಕ್ಷಾದಿಗಳು (*Dyes*).

1. **ಕೆಂಪು ವರ್ಣ**:—ಪತಂಗದ ಮರ 310, ರಕ್ತಚಂದನದ ಮರ 421, ಮದ ರಂಗಿಯ ಎಲೆ 391, ದಾಸಾಲದ ಹೂವು 263, ಮಂಜಿಷ್ಠದ ಬೇರು 384, ಸಪ್ಪಂಗದ ಚೆಕ್ಕೆ ಮತ್ತು ಬೇರು 466, ಅಡಿಕೆ 9, ಕಚೋರ ಗಿಡದ ಗಡ್ಡೆ 72, ಚಾಯಬೇರು 221, ತಗಚೆ ಗಿಡದ ಬೀಜ 240, ಮಂಜೆಟ್ಟಿ ಮರ 385, ಮುತ್ತಗದ ಬೇರು 409, ಹಳದಿ ಪಾವಟೆಯ ಬೇರು 498, ಪುನ್ನಾಗದ ಕಾಯಿ 522.

2. **ಹಳದಿ ವರ್ಣ**:— ಆವರಿಕೆಯ ಚೆಕ್ಕೆ 37, ಕೊಂದೆಮರದ ಚೆಕ್ಕೆ 70, ಮುತ್ತಗದ ಹೂ 409, ಬೊಗರಿಮರದ ಚೆಕ್ಕೆ 319, ಭಂಗಾರಕಾಯಿ 381, ದೊಡ್ಡ ಮರದರಸಿನ 273, ಪಾರಿಜಾತದ ಹೂವು 319, ಸಪ್ಪಂಗದ ಬೇರು 466, ಅರಸಿನದ ಗಡ್ಡೆ 21, ಜೋಗಿಯರಳೆಯ ಕಾಯಿ 69, ಕರಿಜಾಲಿಯ ಚೆಕ್ಕೆ 89, ಕುಂಕುಮದ ಹೂವು 158, ಕುಸುಂಬೆ ಗಿಡದ ಹೂವು 162, ಜಾರಿಗೆಹುಳಿ 237, ಬಿಕ್ಕೆಗಿಡದ ಚಿಗುರು 350, ದೇವಗರಿಗೆಯ ಕಾಯಿ 510, ಹುಣಿಸೆಯ ಎಲೆ 512.

3. **ನೀಲಿ ವರ್ಣ**:—ನೀಲಿಯ ಸೊಪ್ಪು 63, ಹಲ್ಲುನೋವುಮರದ ಎಲೆ 496.

4. **ಹಸುರು ವರ್ಣ**:—ತೊಟ್ಲಗಿಡದ ಎಲೆ 255.

5. **ಕಪ್ಪು ವರ್ಣ**:—ಕಾಚಿನ ಮರ 112, ನಸುಗುನ್ನಿಬಳ್ಳಿಯ ಸೊಪ್ಪು 278, ಅಣಿಲೆ ಕಾಯಿ 12, ಗೇರುಮರದ ಬೀಜವೂ ಚೆಕ್ಕೆಯೂ 208, ಕೊಟ್ಟಗಿಡ 178, ಗೇರ್ಕಾಯಿ 209, ಚಬುಕುಮರದ ಚೆಕ್ಕೆ 218, ನೆಲ್ಲಿಮರದ ಚೆಕ್ಕೆ 305, ಬಸುರಿಮರದ ಬೇರು 347, ಬೆಲಪತ್ರೆ 370, ಮುತ್ತಗದ ಮರ 409, ಮೊಂಡುಗಳ್ಳಿ 418, ರತ್ನಗಂಧಿಯ ಮರ 422, ಲೋಳಿಸರದ ರಸ 431, ವಳಾಗ್ರದ ಚೆಕ್ಕೆಯೂ ಎಲೆಯೂ 432.

## XIII. ಚರ್ಮ ಹದ ಮಾಡಲಿಕ್ಕೆ ಉಪಯೋಗಿಸುವ ಗಿಡಗಳು (Tanning).

ಅಂದಿಪುನಾರು 3, ಪಿಪ್ಪಲ 23, ಆವರಿಕೆ 37, ಕರಿಜಾಲಿ 89, ಕಾಚು 112, ನೆಲ್ಲಿಮರದ ಚೆಕ್ಕೆ 305, ಬಂದ ಮರದ ಚೆಕ್ಕೆ 333, ಅಣಲೆಕಾಯಿ 12, ಮುತ್ತುಗದ ಗೋಂದು 409, ದಿವಿದಿವಿ ಮರದ ಕಾಯಿ 434.

## XIV. ಅಲಂಕಾರದ ವೃಕ್ಷಾದಿಗಳು (Ornamental Plants).

1. **ಮರಗಳು:**—ಸಂಪಿಗೆ 457, ನಾಗಸಂಪಿಗೆ 280, ಬೆಲಪತ್ರೆ 370, ಅಗಸೆ 6, ಪಿಪ್ಪಲ 23, ಅಶೋಕ 28, ಜೋಗಿಯರಳೆ 69, ಕೊಂದೆಮರ 70, ಕಾಡಂಬ 77, ದೊಡ್ಡ ರತ್ನಗಂಧಿ 274, ಪುರುಳಿ ಮರ 317, ಮರುವಾಚಲ 400.

2. **ಬಳ್ಳಿಗಳು:**— ಅರಸಿನ ಹೂ 22, ಕಾಮಲತೆ 141, ಕರಡಿಕಣ್ಣಿನ ಗಡ್ಡೆ 185, ಚಂದ್ರಕಾಂತಿ 214, ಶಂಖಪುಷ್ಪ 442.

3. **ಹೂವಿನ ಗಿಡಗಳು:**— ಗುಲಾಬಿ 205, ತುಳಸಿ 93, ಅಬ್ಬೊಲಿಗೆ 17, ಕಣಗಿಲು 79, ತಾವರೆ 85, ಕಸ್ತೂರಿಮಲ್ಲಿಗೆ 103, ಕಾಮಕಸ್ತೂರಿ 140, ಕೆಂಪು ಗೊಂಡೆ 167, ಚಿತ್ರಮೂಲ 225, ಜಾಜಿಮಲ್ಲಿಗೆ 234, ದಾಸಾಳ 263, ಪಾರಿಜಾತ 319, ಪುಷ್ಕರಮೂಲ 324, ಬಸವನಪಾದ 345, ಬಿಳೇತಾವರೆ 360, ನಂದಿಬಟ್ಲು 392, ಮಧ್ಯಾಹ್ನಮಲ್ಲಿಗೆ 393, ಮಲ್ಲಿಗೆ 401, ರತ್ನಗಂಧಿ 422, ಸೂರ್ಯಕಾಂತಿ 482, 483, ಸೇವಂತಿಗೆ 484, ಸದಾಪುಷ್ಪ 464.

4. **ಅಲಂಕಾರದ ಎಲೆಯುಳ್ಳ ಗಿಡಗಳು:**— ಕಾಡುಬಾಳೆ 129, ಲೋಳಿಸರ 431, ಸೂತ್ರನಾಭಿ 480.

## XV. ರೋಗಗಳಿಗೆ ಔಷಧಗಳು, ಪಥ್ಯವಸ್ತುಗಳು (Drugs, Dietetics).

ಅಂಗದಾಹ 58.
ಅಂಗಾಲಿನ ಉರಿ 130.
ಅಂಜನ 325, 470.
ಅಂಡವಾತ 497. Hydrocele
ಅಂತರಾಯಾಮ 476.
ಅಂಬಲಿ 349, 377, 382.
ಅಗ್ನಿದೀಪಕ 18, 40, 44, 64, 65, 191, 277, 330, 477, 504.
ಅಗ್ರ (ಮಕ್ಕಳ-) 63, (ಬಾಯಿ-) 153, 264, 289, 301, 305, (ಮಕ್ಕಳ-) 349, 405, 432, 477.
ಅಜೀರ್ಣ 2, 4, 9, 13, 18, 65, 92, 118, 120, 138, 140, 147, 180. 182, 183, 192, 195, 197, 205, 226, 227, (ಪಥ್ಯ) 238, 245, 248, 262, 270, 285, 290, 296, 299, (ಮಕ್ಕಳ-) 303, 305, 306, 328, 332, 333, 338, 348, 351, 355, 373, 386, 405, 409, 428, 437, 491, 498, 502, 512, 517.
ಅಡಲಭ್ರಮಣ 246.
ಅತಿಭೇದಿ 142.
ಅತಿಸಾರ 22, 29, 44, 65, 92, 96, (ಮಕ್ಕಳ-) 128, 134, 138, 140, 154, 170, 179, 182, 205, 236, 240, 243, 245,

# INDEX.—ವೃಕ್ಷಾದಿಗಳ ಅಕಾರಾದಿ.

## ಕನ್ನಡ ಹೆಸರುಗಳು.

## ತುಳು ಹೆಸರುಗಳು.

## ಕೊಂಕಣಿ ಹೆಸರುಗಳು.

# VERNACULAR NAMES TRANSLITERATED

## CANARESE.

## TULU.

## KOṄKANI.

# MALAYALAM.

## SANSKRIT.

## TAMIL.

# TELUGU.

# HINDUSTANI.

# MARATHI.

# INDEX OF BOTANICAL AND ENGLISH NAMES

